# ಹೊಸತು

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ




ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

ಸಂ : 1001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ

ಇವರಿಂದ ....................
ಪ್ರೀತಿಯ ಅಣ್ಣ ಪ್ರಕಾಶನ
ನೆನಪಿನ ಕಾಣಿಕೆ

ಇವರಿಗೆ ....................
ಒಲವಿನ ತಂಗಿ ಭೂಮಿಕಾಳ
ಹುಟ್ಟುಹಬ್ಬದ ಸಂದರ್ಭ

ಹೊಸತು
ನವಕರ್ನಾಟಕ ಪ್ರಕಾಶನ

ಒಂದು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊಸತು ಪರವಾಗಿ)

ದಿನಾಂಕ 12-12-2002

ಪ್ರಕಾಶ
(ಉಡುಗೊರೆ ನೀಡುವವರ ಸಹಿ)

ಜೀವನದ ಎಲ್ಲ ಕ್ಷೇತ್ರಗಳ ಆಗು-ಹೋಗುಗಳನ್ನು ಗಂಭೀರ ವಿಶ್ಲೇಷಣೆಗೆ ಒಳಪಡಿಸುವ ತಿಂಗಳ ಪತ್ರಿಕೆ

## ಉಡುಗೊರೆಯಾಗಿ 'ಹೊಸತು ಚಂದಾ'

ಹಬ್ಬ - ಹರಿದಿನ, ಮದುವೆ, ಗೃಹಪ್ರವೇಶ, ಹುಟ್ಟುಹಬ್ಬ ಇತ್ಯಾದಿ ಸಮಾರಂಭಗಳಲ್ಲಿ ಚಂದಾ ಕೂಪನ್ ಉಡುಗೊರೆ ನೀಡಿ

ವಾರ್ಷಿಕ ಚಂದಾ ರೂ. 100 :: 3 ವರ್ಷಕ್ಕೆ ರೂ. 250 :: ಬಿಡಿ ಪ್ರತಿ ರೂ. 10 :: ಡೆಮಿ 1/4 :: ಪುಟಗಳು - 64

ಸಂ : 3001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ



ಇವರಿಂದ ....................

ಇವರಿಗೆ ....................

ಹೊಸತು
ನವಕರ್ನಾಟಕ ಪ್ರಕಾಶನ

ಮೂರು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊ

ಮೂರು ವರ್ಷದ ಚಂದಾದೊಂದಿಗೆ ಮೂರು ಪುಸ್ತಕಗಳು ಉಚಿತ ಹಾಗೂ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. 20ರ ರಿಯಾಯಿತಿ. ನಿಮ್ಮ ಚಂದಾ ನವೀಕರಿಸಿ. ಉಡುಗೊರೆ ನೀಡುವ ಮೂಲಕ ಹೊಸ ಗೆಳೆಯರನ್ನು ಪರಿಚಯಿಸಿ

'ಹೊಸತು ಚಂದಾ' ಉಡುಗೊರೆ ಕೂಪನ್‌ಗಳು ಬೆಂಗಳೂರು, ಮಂಗಳೂರು, ಮೈಸೂರು ಹಾಗೂ ಗುಲ್ಬರ್ಗಾ ನಗರಗಳಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲೂ ಲಭ್ಯ


ವಿವರಗಳಿಗೆ : ಹೊಸತು
15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂ. ಪೆ. ಸಂಖ್ಯೆ 5159
ಬೆಂಗಳೂರು-560 001 ಫೋನ್ : 2203580/81/82 e-mail : nkp@bgl.vsnl.net.in.

# ಹೊಸತು

## ಒಳಗೇನಿದೆ.....




ಚಿತ್ರಗಳು : ರವಿಕುಮಾರ್ ಆಜ್ಜೀಪುರ, ಶ್ರೀಹರಿ
ಗಂಗಾಧರ ಕೆ. ಇ., ಜಿ. ಎಮ್. ಬೊಮ್ನಳ್ಳಿ, ಹರಿಣಿ, ಸತೀಶ್ ಯಲ್ಲಾಪುರ

ಮುಖಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕ**ಳೆದ ವರ್ಷದ ಸೆಪ್ಟೆಂಬರ್-ಅಕ್ಟೋಬರ್ ತಿಂಗಳುಗಳಲ್ಲಿ ನಮ್ಮ ರಾಜ್ಯವು ಕಾವೇರಿ ನೀರಿನ ಸಂಬಂಧದಲ್ಲಿ ಕಂಡ ವಿದ್ಯಮಾನಗಳನ್ನು ಈ ತಿಂಗಳ ಸನ್ನಿವೇಶದೊಂದಿಗೆ ಹೋಲಿಸಿದರೆ ಒಂದು ಬಗೆಯ ವಿಸ್ಮಯ ಉಂಟಾಗದಿರದು. ಕೃಷ್ಣರಾಜಸಾಗರದಲ್ಲಿ ಈಗಿನ ನೀರಿನ ಮಟ್ಟ ಎಂಭತ್ತು ಅಡಿಗಳ ಆಸುಪಾಸಿನಲ್ಲಿದೆ; ಆದರೆ ನೆರೆರಾಜ್ಯದ ಅವಶ್ಯಕತೆಯನ್ನು ಪೂರೈಸಲು ಸ್ವಲ್ಪ ನೀರು ಬಿಡಲು ಸರ್ಕಾರ ತೀರ್ಮಾನಿಸಿ ಅದರಂತೆ ನಡೆದುಕೊಳ್ಳುತ್ತಿದೆ. ಕಾವೇರಿ ಪ್ರಾಧಿಕಾರದ ಅಧಿಕಾರಿಗಳು ಕಾವೇರಿ ಅಚ್ಚುಕಟ್ಟಿನ ರೈತರಿಗೆ ಸೂಚನೆ ನೀಡಿ ನೀರಿನ ಅಭಾವದಿಂದಾಗಿ ಇನ್ನೊಂದು ಬೆಳೆ ಇಡದಿರುವಂತೆ ಮನವಿ ಮಾಡಿಕೊಂಡಿದ್ದಾರೆ. ಈಗಿನ ಬೆಳೆಯ ಮತ್ತು ಕುಡಿಯುವ ನೀರಿನ ಅವಶ್ಯಕತೆಯನ್ನು ಪೂರೈಸುವ ವಿಶ್ವಾಸವನ್ನು ಮುಖ್ಯಮಂತ್ರಿಗಳು ಪ್ರಕಟಿಸಿದ್ದಾರೆ. ಇದು ಸ್ವಾಗತಾರ್ಹ ಕ್ರಮ ಎನ್ನಬಹುದು.

ವಿಸ್ಮಯದ ವಿಷಯವೇನೆಂದರೆ ಅಕ್ಟೋಬರ್‌ನಲ್ಲಿ ಸ್ವಲ್ಪ ಮಳೆ ಬಂದ ತರುವಾಯದಲ್ಲಿ ಕೃಷ್ಣರಾಜಸಾಗರದಲ್ಲಿ ತೊಂಬತ್ತು ಅಡಿಗೂ ಹೆಚ್ಚು ನೀರಿತ್ತು, ಆದರೆ 'ಒಂದು ಹನಿ ನೀರನ್ನೂ ಬಿಡೆವು' ಎಂಬ ಘೋಷಣೆ ಕೇಳಿಬಂತು. ಡಿಸೆಂಬರ್ ವೇಳೆಗೆ ತಮಿಳುನಾಡಿನಲ್ಲಿ ಮತ್ತೆ ಮಳೆಯ ನಿರೀಕ್ಷೆ ಇದೆಯೆಂಬ ಕಾರಣವನ್ನು ಮುಂದಿಡಲಾಗಿತ್ತು ಮತ್ತು ನಮ್ಮ ಅವಶ್ಯಕತೆಗೆ ಆಗ್ಗೆ ಶೇಖರವಾಗಿದ್ದ ನೀರು ಸಾಲದೆಂಬ ಮಾತೂ ಬಂದಿತ್ತು. ಆ ಹಿನ್ನೆಲೆಯಲ್ಲಿ ಸರ್ವೋಚ್ಚ ನ್ಯಾಯಾಲಯದೆದುರು ನ್ಯಾಯಾಲಯದ ನಿಂದನೆಯ ಆಪಾದನೆಯನ್ನು ಸಹ ಮುಖ್ಯಮಂತ್ರಿಗಳು ಹೊರಬೇಕಾಗಿ ಬಂತು.

ನೀರಿದ್ದಾಗ ಒಂದು ತೊಟ್ಟು ನೀರೂ ಬಿಡುವುದಿಲ್ಲವೆಂದದ್ದೇಕೆ ಮತ್ತು ನೀರಿಲ್ಲದ ಈಗಿನ ಸಂದರ್ಭದಲ್ಲಿ ಸಹಾಯಹಸ್ತ ನೀಡಲು ಮುಂದಾದದ್ದು ಹೇಗೆ ? ಇದು ಕೇವಲ ಜಯಲಲಿತಾ - ವಾಜಪೇಯಿ ವಾದದ ಅಥವಾ ಒತ್ತಾಯದ ಪರಿಣಾಮವಾಗಿರಲಾರದು. ಏಕೆಂದರೆ, ನಾಲ್ಕು ತಿಂಗಳ ಹಿಂದೆಯೂ ಅವರೀರ್ವರ ಆಗ್ರಹ ಇದೇ ರೀತಿ ಇತ್ತು. ಹಾಗಿದ್ದರೆ ಇಂದಿನ ಉದಾರ ನೀತಿಗೆ ನ್ಯಾಯಾಲಯದ ಪ್ರಭಾವ ಕಾರಣವೆ ? ಇಲ್ಲದಿದ್ದರೆ ನೆರೆ ರಾಜ್ಯದ ಬಗೆಗಿನ ಕಾಳಜಿ ಇಷ್ಟು ಸ್ಪಷ್ಟವಾಗಿ ಮೂಡಿಬರಲು ಬೇರಾವ ಕಾರಣ ಇರಬಹುದು ? ದೆಹಲಿಯ ವರಿಷ್ಠರ ಆದೇಶ ಅಥವಾ ಸ್ವಂತದ ರಾಜಕೀಯ ಭವಿಷ್ಯದ ಆಲೋಚನೆ ಇರಲು ಸಾಧ್ಯವೆನಿಸುತ್ತದೆ. ತಮಿಳುನಾಡಿನ ಮುಖ್ಯಮಂತ್ರಿ ದೂರಾಲೋಚನೆಯೋ ದುರಾಲೋಚನೆಯೋ ಮಾಡಿ ಪ್ರಧಾನಿಯ ಹತ್ತಿರಕ್ಕೆ ಸರಿಯುತ್ತಿರುವಾಗ ನಮ್ಮ ಮುಖ್ಯಮಂತ್ರಿಗಳು ಎತ್ತ ಸರಿಯುತ್ತಿದ್ದಾರೆಂಬುದು ಕುತೂಹಲ ಮೂಡಿಸುವ ವಿಚಾರ. ಕೃಷ್ಣಾ ನದಿಯ ನೀರನ್ನು ಪೂರ್ಣವಾಗಿ ಬಳಸದಿರುವಾಗಲೂ ಅದರಲ್ಲಿ ಆಂಧ್ರ ಪ್ರದೇಶಕ್ಕೆ ಯಾವ ಪಾಲನ್ನೂ ನೀಡಬಾರದೆಂದು ಸರ್ಕಾರವನ್ನು ಕಟುವಾಗಿ ಟೀಕಿಸಿದ ಭಾಜಪದ ಸೇಡಂ ಪರಿವಾರವು ಸದ್ಯದ ಕಾವೇರಿ ನೀರಿನ ವಿಷಯದಲ್ಲಿ ದನಿಯೇರಿಸಿ ಮಾತನಾಡಿಲ್ಲ. ಬರುವ ತಿಂಗಳುಗಳಲ್ಲಿ ಅಥವಾ ಗರಿಷ್ಠ ಎರಡು ವರ್ಷದಲ್ಲಿ ಹೊಸ ರೀತಿಯ ಹೊಂದಾಣಿಕೆಗಳ ಸೂತ್ರ ದಿಢೀರನೆ ನಮ್ಮ ಮುಂದೆ ಬರಬಹುದೇ ಎಂಬ ಅಳುಕು ತೀರಾ ಅಪ್ರಸ್ತುತವಿರಲಾರದು.

ಪ್ರಧಾನಿ ಅತಳ ಬಿಹಾರಿಯವರಿಗೆ ಪದಪುಂಜಗಳ ಸೃಷ್ಟಿಯಲ್ಲಿ ವಿಶೇಷವಾದ ನೈಪುಣ್ಯವಿದೆಯೆಂಬುದು ವಿಜ್ಞಾನ ಸಮಾವೇಶಕ್ಕೆ ಅವರು ಬೆಂಗಳೂರಿಗೆ ಆಗಮಿಸಿದ್ದಾಗ ಸಾಬೀತಾಯಿತು. ಶಿಕ್ಷಣ ಪದ್ಧತಿಯಲ್ಲಿ ಅಳವಡಿಸಿಕೊಂಡಿರುವ ಪಠ್ಯಪುಸ್ತಕಗಳ 'ದುರಸ್ತಿ'ಯನ್ನು ಮುರಳಿ ಮನೋಹರ ಜೋಶಿಯವರ ನೇತೃತ್ವದಲ್ಲಿ ಅವೈಜ್ಞಾನಿಕವಾಗಿ ಮತ್ತು ಅಚಾರಿತ್ರಿಕವಾಗಿ ನಡೆಸಲಾಗುತ್ತಿರುವುದಕ್ಕೆ ಪ್ರತಿಕ್ರಿಯಿಸಿ ಪ್ರಧಾನಿಯವರೆಂದರು : ''ಶಿಕ್ಷಣವನ್ನು ಕೇಸರೀಕರಣಗೊಳಿಸುವ ಬದಲು ಹಸಿರೀಕರಣಗೊಳಿಸಬೇಕೆನ್ನುತ್ತೀರೇನು ?'' ಭಾರತಮಾತೆಯನ್ನು 'ಸಸ್ಯಶ್ಯಾಮಲೆ' ಎಂದು ಅವರು ಗೌರವಿಸುತ್ತಾರಾದರೂ ಅದೇಕೋ 'ಹಸಿರು' ಎಂದರೆ ಅವರಿಗೆ ಇರಿಸು-ಮುರಿಸು. ಪಕ್ಕದ ಒಂದು ರಾಷ್ಟ್ರದ ಬಾವುಟ ಜ್ಞಾಪಕಕ್ಕೆ ಬಂದುಬಿಡುತ್ತದೆಂದು ತೋರುತ್ತದೆ! ಹಸಿರು ಉಜ್ವಲವಾದ ನೂತನತೆಯ ಮತ್ತು ವೃದ್ಧಿಯ ಸಂಕೇತ. 'ತಳಿರು ತೋರಣ'ವೆಂಬ ನುಡಿಗಟ್ಟು ನಮ್ಮಲ್ಲಿದೆ. ವಸಂತವನ್ನು ಶ್ಲಾಘಿಸಿ ಸ್ವಾಗತಿಸುವುದು ನಮ್ಮ ಸಂಪ್ರದಾಯ. ಸದಾ ನಿಯಮಿತವಾಗಿ ಜರುಗುವ ನವೀಕರಣವನ್ನು ಹಸಿರು ಪ್ರತಿನಿಧಿಸುತ್ತದೆ. ವೈದಿಕ ಸಾಹಿತ್ಯದ 'ಋತ'ದ ಕಲ್ಪನೆಯಲ್ಲಿ ಇದು ಅಂಗೀಭೂತವಾಗಿದೆ. ಆದ್ದರಿಂದ ಶಿಕ್ಷಣವನ್ನು ಸದಾ ಹಸಿರಾಗಿ ಉಳಿಯುವಂತೆ ಮಾಡಲು ವಾಜಪೇಯಿ ಏಕೆ ಹಿಂದೇಟು ಹಾಕಬೇಕೋ ತಿಳಿಯುವುದಿಲ್ಲ. ಅವರಿಗೆ ಹಸಿರಿಗಿಂತಲೂ ರುಧಿರ ಹೆಚ್ಚು ಹತ್ತಿರವಿರಬೇಕು. ನರೇಂದ್ರ ಮೋದಿಯವರ ಸಖ್ಯದಲ್ಲಿ ರಕ್ತದ ಪರಿಚಯ ಅವರಿಗೆ ಸಾಕಷ್ಟಿದೆ. ಆದರೆ ಅದು ಆಪ್ಯಾಯಮಾನವಾಗಬಾರದೆಂಬುದು ನಾಡಿನ ನಿರೀಕ್ಷೆ. ಕೇಸರಿ - ರುಧಿರಗಳಿಗಿಂತ ಶಿಕ್ಷಣ ಪದ್ಧತಿಗೆ ಹಸಿರಿನ ಲೇಪ ಅಪೇಕ್ಷಣೀಯ. ಅದನ್ನು ತಿಳಿದು ಮಾನ್ಯ ಪ್ರಕಾಂಡ ಪಂಡಿತ ಮುಮ ಜೋಶಿಯವರಿಗೂ ಅದನ್ನು ತಿಳಿಸಿಕೊಡುವ ಕೃಪೆಯನ್ನು ಪ್ರಧಾನಿಯವರು ಇನ್ನಾದರೂ ಮಾಡುವುದು ಆರೋಗ್ಯಕರ.

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೪ ಸಂಚಿಕೆ -೨ ಫೆಬ್ರವರಿ ೨೦೦೩



*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೮೦ / ೮೧ / ೮೨
e-mail : nkp@bgl.vsnl.net.in

# ಸಂವಿಧಾನ ರಚಿಸಿರುವ ಅಂಗಗಳ ಕಾರ್ಯವೈಖರಿ

ಸಂಪಾದಕೀಯ

ನಮ್ಮ ಸಂವಿಧಾನವು ಅನೇಕ ಅಂಗಸಂಸ್ಥೆಗಳಿಗೆ ಮಾತೃಸ್ಥಾನದಲ್ಲಿದೆ. ಲೋಕಸಭೆ, ಸರ್ವೋಚ್ಚ ನ್ಯಾಯಾಲಯ, ಚುನಾವಣಾ ಆಯೋಗ, ಲೆಕ್ಕ ಪತ್ರ ಪರಿಶೋಧನಾ ವಿಭಾಗ ಮುಂತಾದವು ಅಂತಹ ಸಂಸ್ಥೆಗಳು. ಅವಕ್ಕೆಲ್ಲಾ ತಮ್ಮದೇ ಆದ ಸ್ವಾಯತ್ತ ಕಾರ್ಯವಿಧಾನವನ್ನು ರೂಪಿಸಲಾಗಿದೆ. ಆ ಪೈಕಿ ಜನರಿಂದ ಚುನಾಯಿತರಾದ ಲೋಕಸಭಾ ಸದಸ್ಯರನ್ನುಳಿದು ಮಿಕ್ಕವರೆಲ್ಲಾ ತಮ್ಮ ಹಕ್ಕನ್ನು ನಿಷ್ಠುರವಾಗಿ ಪ್ರತಿಪಾದಿಸಿಕೊಳ್ಳುತ್ತಾರೆ ಮತ್ತು ಚಲಾಯಿಸುತ್ತಾರೆ. ಜನರ ಪರವಾಗಿ ಧ್ವನಿ ಎತ್ತಬೇಕಾದವರ ಸದ್ದು ಅಡಗಿಹೋಗಿದೆಯೇನೋ ಎಂಬಷ್ಟು ಪೇಲವವಾಗಿದೆ ನಮ್ಮ ಲೋಕಸಭೆಯಲ್ಲಿನ ಚರ್ಚೆಗಳು. ಬೇರೆ ಅಂಗ ಸಂಸ್ಥೆಗಳು ತಮ್ಮ ಕಾರ್ಯಕ್ಷೇತ್ರವನ್ನು ಮೀರಿ ಕೈ ಚಾಚಿದಾಗ ಲೋಕಸಭೆಯು ಮೂಕ ಪ್ರೇಕ್ಷಕನಾಗಿರಬೇಕೆಂದು ಸಂವಿಧಾನವು ನಿರೀಕ್ಷಿಸುವುದಿಲ್ಲ.

ಹಿಮಾಚಲ ಪ್ರದೇಶದಲ್ಲಿ ಶಾಸನಸಭಾ ಚುನಾವಣೆ ಸದ್ಯದಲ್ಲೇ ನಡೆಯಲಿದೆ. ಅದಕ್ಕೆ ಪೂರ್ವಭಾವಿಯಾಗಿ ಚುನಾವಣಾ ಆಯೋಗವು ಹೊರಡಿಸಿರುವ ಒಂದು ಆಜ್ಞೆ ಅಧಿಕಾರ ದರ್ಪದಿಂದ ಸಾಂದ್ರವಾಗಿರುವಂತೆ ಭಾಸವಾಗುತ್ತದೆ. ಸರ್ಕಾರವು ತನ್ನ ಸಾಧನೆಗಳ ಬಗ್ಗೆ ರಾಜ್ಯದ ವಿವಿಧೆಡೆ ಹಾಕಿರುವ ದೊಡ್ಡ ಫಲಕಗಳನ್ನೆಲ್ಲಾ ತೆಗೆಸಬೇಕೆಂಬುದು ಆ ಆಜ್ಞೆ. ಯಾವುದೇ ಪಕ್ಷವು ತನ್ನ ಕ್ರಿಯಾಶೀಲತೆಯನ್ನು ತೋರ್ಪಡಿಸಿಕೊಳ್ಳಲು ಅಡ್ಡಿ ಉಂಟುಮಾಡಬಹುದೇ ಎಂಬುದು ಪ್ರಶ್ನೆ. ಭಾರತದ ಜನರಲ್ಲಿ ಅನಕ್ಷರಸ್ಥರು ಹೇರಳವಾಗಿದ್ದಾರೆ, ಆದರೆ ಚುನಾವಣಾ ಆಯೋಗವು ಭಾವಿಸುವಂತೆ ನಮ್ಮವರೆಲ್ಲಾ ರಾಜಕೀಯ ಅನಕ್ಷರಸ್ಥರಲ್ಲ. ಯಾವುದನ್ನೂ ತೂಗಿ ನೋಡಿ ನಿಷ್ಕರ್ಷಿಸುವಷ್ಟು ಅನುಭವ ಅವರಿಗಿದೆ. ಇಲ್ಲದಿದ್ದರೆ ಐವತ್ತು ವರ್ಷಗಳ ಕಾಲ ಚುನಾವಣೆಗಳಲ್ಲಿ ವಿವಿಧ ಫಲಿತಾಂಶಗಳು ವ್ಯಕ್ತವಾಗುತ್ತಿರಲಿಲ್ಲ. ಹಿಮಾಚಲದ ಸರ್ಕಾರವು ದೊಡ್ಡ ಫಲಕಗಳಲ್ಲಿ ಏನನ್ನೋ ಪ್ರಕಟಿಸಿ ಮೆರೆದರೆ ಅದರ ಸತ್ಯಾಸತ್ಯತೆಯನ್ನು ತಿಳಿಯಲಾರದಷ್ಟು ಕುರುಡರಲ್ಲ ಆ ರಾಜ್ಯದ ಜನ. ಸಾಕ್ಷರತೆಯು ಆ ರಾಜ್ಯದ ವಿಶೇಷ ಸಾಧನೆಯೆಂಬುದನ್ನು ಮರೆಯಬಾರದು. ಹೊಸದಾಗಿ ಈಗ ಫಲಕಗಳನ್ನು ಹಾಕಬಾರದೆಂಬುದನ್ನು ಬೇಕಾದರೆ ಜಾರಿಗೊಳಿಸಲಿ, ಹಳೆಯದನ್ನು ತೆಗೆಯಬೇಕೆಂಬುದಕ್ಕೆ ಏನು ಅರ್ಥವಿದೆ ?

ಚುನಾವಣೆಗಳು ದೇಶದ ಚಟುವಟಿಕೆಯಲ್ಲಿ ಸರ್ವಸ್ವವಲ್ಲ. ಅವು ಬರುತ್ತವೆ, ಹೋಗುತ್ತವೆ. ಅವು ಬಂದಾಗಲೆಲ್ಲಾ ಎರಡು ತಿಂಗಳ ಕಾಲ ಅಭಿವೃದ್ಧಿ ಕಾರ್ಯಗಳೆಲ್ಲಾ ಸ್ಥಗಿತಗೊಳ್ಳಬೇಕೆಂಬ ಅವಿವೇಕವು ನಮ್ಮ ದೇಶದಲ್ಲಿ ಮಾತ್ರ ಹೆಪ್ಪುಗಟ್ಟಿ ಕೂತಿದೆ. ಒಂದು ರಸ್ತೆ ರಿಪೇರಿ ಮಾಡಿಸಿದರೆ ಜನ ಕುರಿಗಳಾಗಿ ಮತ ಹಾಕುತ್ತಾರೆಂಬುದು ಪದ್ಯ ಬರೆಯಲು ಪ್ರಶಸ್ತವಾದ ವಸ್ತುವಾಗಬಹುದು, ಆದರೆ ವಾಸ್ತವ ಹಾಗಿಲ್ಲ. ಹಣ-ಹೆಂಡ ಪಡೆದವರು ಕೂಡ ಸ್ವತಂತ್ರವಾಗಿ ಮತ ಚಲಾಯಿಸಿರುವ ನಿದರ್ಶನಗಳು ನಮ್ಮಲ್ಲಿವೆ. ಅಭ್ಯರ್ಥಿಗಳಲ್ಲಿ ಭ್ರಷ್ಟಾಚಾರದ ಫಲಾನುಭವಿಗಳೇ ಹೆಚ್ಚಾಗಿರುವಾಗ ಮತದಾರನಿಗೆ ಒಡ್ಡಲಾಗುವ ಆಮಿಷಗಳು ಯಾವ ಲೆಕ್ಕ! ಈಚೆಗೆ ನಮ್ಮ ಉಪರಾಷ್ಟ್ರಪತಿಯಾಗಿ ಚುನಾಯಿತರಾದ ಶೇಖಾವತ್ ಅವರ ಪ್ರಕಾರ ಭ್ರಷ್ಟಾಚಾರ ಸಹ ಎಲ್ಲೆಮೀರಿ ಬೆಳೆದಿಲ್ಲ. ಹಾಗೆಂದು ಲೋಕಾಯುಕ್ತರುಗಳ ಸಮ್ಮೇಳನವನ್ನುದ್ದೇಶಿಸಿ ಮಾತನಾಡುವಾಗ ಹೇಳಿದರೆಂದು ವರದಿಯಾಗಿದೆ. ಅಂದರೆ ತೆಹಲ್ಕಾ, ಬಾಲ್ಕೋ, ಸೆಂಟೋರ್‌ನಂಥ ಅವ್ಯವಹಾರಗಳಿಗೆ ಇನ್ನೂ ಸಾಕಷ್ಟು ಅವಕಾಶವಿದೆಯೆಂದು ಅವರ ಸೂಚನೆ. ಅವರ ಪಕ್ಷದ ಹಾಗೂ ಕಾರ್ಯಕರ್ತರ ದಾಹ ಇಂಗಲು ಇನ್ನೂ ಸಮಯವಿದೆಯೆಂಬುದು ಹಿರಿಯ ನಾಯಕರಾದ ಭೈರೋನ್ ಸಿಂಗರಿಗಲ್ಲದೆ ಬೇರೆಯವರಿಗೆ ಹೇಗೆ ತಿಳಿಯಬೇಕು ! ಅನಂತಕುಮಾರರಂತಹ ಅನೇಕರು ಇನ್ನೂ ಭವ್ಯವಾದ ಗೃಹದೇಗುಲಗಳನ್ನು ಕಟ್ಟಿಕೊಂಡಿಲ್ಲವಲ್ಲ!

ಭಾರತದ ಬಾರ್ ಕೌನ್ಸಿಲ್ಲಿನ ಅಭಿಪ್ರಾಯ ಇದಕ್ಕೆ ಭಿನ್ನವಾದುದು. ಜನವರಿ ೧೬ರ ತನ್ನ ಸಭೆಯಲ್ಲಿ ಈ ಕೌನ್ಸಿಲ್ ನಿರ್ಣಯವೊಂದನ್ನು ಸ್ವೀಕರಿಸಿ ನ್ಯಾಯಾಂಗದಲ್ಲಿ ಉಚ್ಚ ಸ್ಥಾನಗಳಲ್ಲಿರುವವರ ಭ್ರಷ್ಟಾಚಾರವನ್ನು ತೊಲಗಿಸಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಕಾರ್ಯಾಂಗ ಮತ್ತು ನ್ಯಾಯಾಂಗಗಳನ್ನು ಒತ್ತಾಯಿಸಿದೆ. ನ್ಯಾಯಾಧೀಶರನ್ನು ಅಭಿಯೋಗದಿಂದ (ಅಂದರೆ 'ಇಂಪೀಚ್‌ಮೆಂಟ್' ಮೂಲಕ) ತೆಗೆದುಹಾಕಲು ಸಾಧ್ಯವಾಗಿಲ್ಲದಿರುವುದರಿಂದ ಬೇರೆ ವಿಧಾನಗಳನ್ನು ಕಂಡುಕೊಳ್ಳಬೇಕೆಂದು ಕೌನ್ಸಿಲ್ ಆಗ್ರಹಿಸಿದೆ. ನ್ಯಾಯಾಂಗದಲ್ಲೂ ಖಂಡನಾರ್ಹ ಭ್ರಷ್ಟತೆ ಕಂಡುಬಂದಿದೆಯೆಂಬುದನ್ನು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರೇ ಬಹಿರಂಗವಾಗಿ ಒಪ್ಪಿಕೊಂಡಿದ್ದಾರೆ. ಪಂಜಾಬಿನ ಹಗರಣವನ್ನು ಕೌನ್ಸಿಲ್ ಒಂದು ಉದಾಹರಣೆಯಾಗಿ ಹೆಸರಿಸಿದೆ. ಮೈಸೂರಿನ ಪ್ರಸಂಗದಲ್ಲಿ ಇನ್ನೂ ಇತಿಶ್ರೀ ಹಾಡಲಾಗಿಲ್ಲ. ಆದರೆ ಸಂವಿಧಾನದಲ್ಲಿ ನೀಡಲಾಗಿದೆಯೆನ್ನಲಾದ ರಕ್ಷಣೆಯಿಂದಾಗಿ ಚುನಾವಣಾ ಆಯೋಗ ಮತ್ತು ನ್ಯಾಯಾಂಗದಂತಹ ಸಂಸ್ಥೆಗಳ ನೈತಿಕತೆಯು ಚರ್ಚೆಗೆ ಬರುವಂತಿಲ್ಲ. ನ್ಯಾಯಾಂಗ ನಿಂದನೆ ಎಂಬ ಭಯ ಹುಟ್ಟಿಸುವ ಅಮೂರ್ತ ಶಾಸನವು ಒಂದು ರೀತಿಯ ರಕ್ಷಾಕವಚವಾಗಿದೆಯೆಂಬುದನ್ನು ಲೋಕಸಭೆಯು ಗಣನೆಗೆ ತೆಗೆದುಕೊಳ್ಳಬೇಕು ಮತ್ತು ನಿರ್ಮಲ ವಾತಾವರಣದಲ್ಲಿ ಮುಕ್ತವಾದ ಚರ್ಚೆಯನ್ನು ಸಾಧ್ಯವನ್ನಾಗಿಸಬೇಕು. ಇಲ್ಲದಿದ್ದರೆ ಸಂವಿಧಾನವು ರಚಿಸಿರುವ ಅಂಗ ಸಂಸ್ಥೆಗಳು ಸ್ವೇಚ್ಛೆಯಿಂದ ವರ್ತಿಸುವ ಸಾಧ್ಯತೆ ಇದೆ. ಅದು ಪ್ರಜಾಪ್ರಭುತ್ವಕ್ಕೆ ಪೂರಕವಾದ ಸಂಗತಿಯಾಗುವುದಿಲ್ಲ.

ಒಂದು ಪುಟ್ಟ ನಿದರ್ಶನವನ್ನು ನೋಡಬಹುದು : ಈಚೆಗೆ ಕರ್ನಾಟಕದ ಉಚ್ಚ ನ್ಯಾಯಾಲಯದಲ್ಲಿ ಸಂಚಾರಿ ವಾಹನಗಳ ಅಪಘಾತವನ್ನು ಕುರಿತ ಮೊಕದ್ದಮೆಯೊಂದರಲ್ಲಿ ತೀರ್ಮಾನ ನೀಡಲಾಯಿತು. ಆ ಸಂದರ್ಭದಲ್ಲಿ ನ್ಯಾಯಾಲಯವು ಸಾರಾಸಗಟಾಗಿ ದ್ವಿಚಕ್ರವಾಹನಗಳನ್ನು ನಡೆಸುವವರನ್ನು ದೂಷಿಸಿದ್ದು ವರದಿಯಾಗಿದೆ. ತಾವು ಸಾಯುವುದಲ್ಲದೆ ಇತರರನ್ನೂ ಸಾಯಿಸುವವರು ಈ ಚಾಲಕರು, ಅವರು ಮೀರದ ಕಾನೂನಿಲ್ಲ, ಅವರು ವಾಹನಗಳನ್ನು ನಡೆಸುವಾಗ ಹಾವುಗಳಂತೆ ಅತ್ತಿತ್ತ ಹರಿದು ಬೇರೆ ವಾಹನಗಳ ಚಾಲಕರಿಗೆ ಕಿರುಕುಳ ನೀಡುತ್ತಾರೆ, ಇತ್ಯಾದಿಯಾಗಿ ವಿಮರ್ಶೆ ನಡೆದಿದೆಯೆಂದು ವರದಿ ತಿಳಿಸುತ್ತದೆ. ನ್ಯಾಯಾಲಯವೇ ಹಾಗೆಂದು ಹೇಳಿದ್ದರೂ ಸಹ ಅದು ಭಾಗಶಃ ಮಾತ್ರ ಸತ್ಯ. ಅಂತಹ ವರ್ಣನೆಗೆ ಹೊರತಾದ ದ್ವಿಚಕ್ರವಾಹನ ಚಾಲಕರೇ ಹೆಚ್ಚಾಗಿರುವ ಸಂಭವ ಕೂಡ ಇದೆ. ಆದರೆ ಅದನ್ನು ನ್ಯಾಯಾಲಯದೆದುರು ಹೇಳುವ ಅವಕಾಶ ಈ ಚಾಲಕರಿಗೆ ಇರುವುದಿಲ್ಲ. ಚುನಾವಣಾ ಆಯೋಗ ಮತ್ತಿತರ ಸಂಸ್ಥೆಗಳು ಆಜ್ಞೆಗಳನ್ನು ಹೊರಡಿಸುವಾಗ ಸಂವಿಧಾನದತ್ತವಾದ ಜವಾಬ್ದಾರಿ ಮತ್ತು ಅಧಿಕಾರಗಳನ್ನು ಇನ್ನೂ ಹೆಚ್ಚಿನ ವಿವೇಚನೆಯಿಂದ ಚಲಾಯಿಸುವುದು ಉತ್ತಮವೆಂದು ಇದರರ್ಥ. ಸರ್ಕಾರವು ಹಾಕಿದ ಫಲಕದಿಂದ ಎಲ್ಲ ನಾಗರಿಕರೂ ಮತಿಭ್ರಷ್ಟರಾಗಿ ಮತ ಚಲಾಯಿಸುತ್ತಾರೆಂಬ ಇಂಗಿತವೇ ಅರ್ಥಹೀನವಾದುದು. ನಮ್ಮನ್ನು ಕಾಡುತ್ತಿರುವ ದೊಡ್ಡ ಬೇನೆಯೆಂದರೆ ಭ್ರಷ್ಟಾಚಾರ. ಅದನ್ನು ತೊಡೆದುಹಾಕಲು ಸಾಧ್ಯವೇ ಇಲ್ಲವೆಂಬ ಸಿನಿಕತನವನ್ನು ಕೈಬಿಡಬೇಕೆಂದು ಕೇಂದ್ರ ಗೃಹಮಂತ್ರಿ ಅಧ್ವಾನಿಯವರು ಕರೆ ನೀಡಿದ್ದಾರೆ. ರಾಜಕೀಯ ಮತ್ತು ಅಧಿಕಾರಶಾಹಿಗಳನ್ನು ಆವರಿಸಿದ್ದ ಭ್ರಷ್ಟಾಚಾರದ ಪಿಡುಗು ನ್ಯಾಯಾಂಗವನ್ನೂ ಆವರಿಸಿರುವುದರ ಬಗ್ಗೆ ಅಧ್ವಾನಿಯವರು ಕಳವಳ ವ್ಯಕ್ತಪಡಿಸಿದ್ದಾರೆ. ಭ್ರಷ್ಟತನದ ಕಾರಣದಿಂದಾಗಿಯೇ ಯಾವ ಅಭ್ಯರ್ಥಿಯೂ ಚುನಾವಣೆಯಲ್ಲಿ ಸೋತಿದ್ದು ತಮಗೆ ತಿಳಿದಿಲ್ಲವೆಂದು ಸಹ ಅವರು ಹೇಳಿದ್ದಾರೆ. ಹೀಗಿರುವಾಗ ಚುನಾವಣಾ ಆಯೋಗವು ಚಿಲ್ಲರೆ ಫಲಕಗಳನ್ನು ತನ್ನ ಕಾಕದೃಷ್ಟಿಗೆ ಗುರಿಮಾಡುವುದು ಎಷ್ಟರ ಮಟ್ಟಿಗೆ ಸಮಂಜಸವೆಂಬ ಪ್ರಶ್ನೆಯನ್ನು ತಳ್ಳಿಹಾಕಬಾರದು. ಪ್ರಜ್ಞಾವಂತ ಸಮಾಜವನ್ನು ಇಂತಹ ಕ್ಷುಲ್ಲಕ ಕ್ರಮಗಳಿಂದ ಕಟ್ಟಲಾಗುವುದಿಲ್ಲ. ಸಂವಿಧಾನವು ನೀಡಿರುವ ರಕ್ಷಣೆಯನ್ನು ಸಂವಿಧಾನವೇ ರಚಿಸಿರುವ ಯಾವ ಅಂಗಸಂಸ್ಥೆಯೂ ಮಾರಕಾಸ್ತ್ರವನ್ನಾಗಿ ಬಳಸಬಾರದು.

ಫೆಬ್ರವರಿ ೨೦೦೩

# ಗುಜರಾತಿನ ಗುಮ್ಮ ಬರುತ್ತಿದೆ, ಜೋಕೆ !

**ಈ** ವರ್ಷದ ಮೊದಲ ದಿನದ ಸೂರ್ಯಕಿರಣವನ್ನು ಪ್ರಧಾನಿ ವಾಜಪೇಯಿಯವರು ಗೋವೆಯ ಸಮುದ್ರ ತೀರದಲ್ಲಿ ಕುಳಿತು ಸ್ವಾಗತಿಸಿದರು. ಸೂರ್ಯಶಕ್ತಿಯನ್ನು ತಕ್ಕಮಟ್ಟಿಗೆ ತಮ್ಮಲ್ಲಿ ಆವಾಹಿಸಿಕೊಂಡು ರಾಷ್ಟ್ರಕ್ಕೆ ಅವರ ''ಅಮ್ಯೂಸಿಂಗ್ಸ್'' ಮೂಲಕ ಸಂದೇಶ ನೀಡಿದ್ದಾರೆ. ''ಹೇಳುವುದೊಂದು ಮಾಡುವುದೊಂದು'' ಎಂಬ ನಿಯಮಕ್ಕೆ ಬದ್ಧರಾಗಿರುವ ವಾಜಪೇಯಿಯವರು ಹಿತವೆನಿಸುವ ಹತ್ತು ಮುತ್ತುಗಳನ್ನುದುರಿಸಿ ಅದರ ಜೊತೆಯಲ್ಲೇ ಅವರ ಅಂತರಾಳದ ಕುತ್ಸಿತ ಭಾವನೆಯನ್ನು ಮುಚ್ಚಿಟ್ಟುಕೊಳ್ಳದೆ ಅದಕ್ಕೂ ಹೇಗೋ ಅಭಿವ್ಯಕ್ತಿ ನೀಡಿಬಿಡುತ್ತಾರೆ. ಈ ಬಾರಿ ಗುಜರಾತು ಚುನಾವಣೆಯ ವಿಜಯದ ಹುರುಪಿನಲ್ಲಿ ಹಿಂದುತ್ವವೆಂದರೇನೆಂಬ ಭಾಷ್ಯವನ್ನು ತಮ್ಮದೇ ಆದ ರೀತಿಯಲ್ಲಿ ಶ್ರುತಪಡಿಸಿದ್ದಾರೆ. ಅದನ್ನು ಗಂಭೀರವಾಗಿ ಪರಿಗಣಿಸುವ ತೊಂದರೆ ಬೇಡ,ಏಕೆಂದರೆ ಅದಕ್ಕೆ ವಿರುದ್ಧವಾದ ಮಾತನ್ನು ಇನ್ನಾವುದಾದರೂ ಸಂದರ್ಭದಲ್ಲಿ ಜಾಣತನದಿಂದ ಅವರೇ ಕರುಣಿಸುತ್ತಾರೆ. ಎಷ್ಟೋ ರಾಜಕಾರಣಿಗಳು ಜನರನ್ನು ಮೂರ್ಖರೆಂದು ಭಾವಿಸಿ ಒಮ್ಮೊಮ್ಮೆ ಒಂದೊಂದು ಹೇಳಿ ವಿಜೃಂಭಿಸಿರುವುದುಂಟು. ಆದರೆ ಈ ಅಕೃತ್ಯದಲ್ಲಿ ವಾಜಪೇಯಿ-ಅಧ್ವಾನಿ ಯವರಿಗೇ ಸುವರ್ಣ ಪದಕ.

ಎರಡು ಉದಾಹರಣೆಗಳನ್ನು ನೋಡಬಹುದು : ಅಯೋಧ್ಯೆ ಮತ್ತು ಗುಜರಾತು ಅಧ್ವಾನಿಯವರನ್ನು ಖಿನ್ನವಾಗಿಸುತ್ತವಂತೆ. ಖಿನ್ನತೆಯ ಸ್ವರೂಪ ಸ್ಪಷ್ಟವಾಗಿಲ್ಲ ಮತ್ತು ಖಿನ್ನತೆಯ ಬದಲು ಕೆಲವೊಮ್ಮೆ ಅವರನ್ನು ದುರ್ಗಾದೇವಿ ಆವರಿಸಿಬಿಡುತ್ತಾಳೆ. ಆಗ ಅವರು ಠೇಂಕಾರ ಮಾಡಿ ಮೋದಿಯ ಮೋಡಿಯನ್ನು ಇಮ್ಮಡಿಗೊಳಿಸುವುದಾಗಿ ಗರ್ಜಿಸುತ್ತಾರೆ. ಗುಜರಾತಿನಲ್ಲಿ ರಕ್ತಪಾತವಾಯಿತೆಂದು ಖಿನ್ನತೆಯೋ, ಅದು ಸಾಕಷ್ಟು ಪ್ರಮಾಣದಲ್ಲಿ ಆಗಲಿಲ್ಲವೆಂದು ಖಿನ್ನತೆಯೋ ತಿಳಿಯುವುದಿಲ್ಲ. ಅಂತೆಯೇ ಅಯೋಧ್ಯೆಯಲ್ಲಿ ಮಸೀದಿ ಉರುಳಿಸಿದ್ದಕ್ಕೆ ಖಿನ್ನತೆಯೋ ಅಥವಾ ಆ ಪ್ರಕರಣದಲ್ಲಿ ಎಂದಾದರೊಂದು ದಿನ ತಾವು ಕಟಕಟೆಯಲ್ಲಿ ನಿಲ್ಲಬೇಕಾಗುತ್ತದೆಂಬುದಕ್ಕೆ ಖಿನ್ನತೆಯೋ ಪಾಮರರಿಗೆ ಅರಿವಾಗುವುದಿಲ್ಲ. ಇದರ ಅರ್ಥವಿಷ್ಟೆ: ಅವರು ಬಹುಮುಖಗಳನ್ನುಳ್ಳ ಮೇಧಾವಿ ರಾಜಕಾರಣಿ, ಜನರ ನೆನಪು ಅಲ್ಪವೆಂದು ಭಾವಿಸುವಾತ ಮತ್ತು 'ರಾಜರ್ಷಿ' ತಾನಾದ್ದರಿಂದ ಏನು ಹೇಳಿದರೂ ನಡೆಯುತ್ತದೆಂಬ ಹಮ್ಮು. ''ಕರ್ನಾಟಕವನ್ನು ಗುಜರಾತು ಮಾಡುತ್ತೇವೆ'' ಎಂದು 'ಪ್ರವೀಣ' ತೋಗಡಿಯಾ ಹೇಳಿದರೆ ಅದನ್ನು ಒಮ್ಮೆ ಸಮರ್ಥಿಸುತ್ತಾರೆ, ಮತ್ತೊಮ್ಮೆ ಅದರರ್ಥ ಅದಲ್ಲವೆಂದು ವಿವರಣೆ ನೀಡುತ್ತಾರೆ. ನಮ್ಮ ಕೇಂದ್ರ ಗೃಹಮಂತ್ರಿಯವರ ದ್ವೈತ ಪ್ರತಿಭೆ ಇಂತಹುದೆಂದು ಪರಿಭಾವಿಸಿದಾಗ ಅಚ್ಚರಿ ಮತ್ತು ಆತಂಕ ಏಕಕಾಲದಲ್ಲಿ ಸಂಭವಿಸುತ್ತವೆ. ಗುಜರಾತಿನ ಗುಮ್ಮನನ್ನು ಹಾಯಲು ಬಿಟ್ಟು ಹೀಗೆ ಬೆದರಿಸುವುದು ನಮ್ಮ ರಾಷ್ಟ್ರದಲ್ಲಿ ಕಳೆದೆರಡು ತಿಂಗಳಲ್ಲಿ ಅನುಭವಕ್ಕೆ ಬಂದಿದೆ.

ಗುಜರಾತಿನಲ್ಲಿ ಭಾರತೀಯ ಜನತಾ ಪಕ್ಷವು ಮಹಾನ್ ದಿಗ್ವಿಜಯವನ್ನೇನೂ ಸಾಧಿಸಿಲ್ಲವೆಂಬುದು ಅಧ್ವಾನಿ ತಂಡಕ್ಕೆ ತಿಳಿಯದಿಲ್ಲ. ಅಲ್ಲಿನ ಚುನಾವಣೆಯಲ್ಲಿ ಮತ ಚಲಾಯಿಸಿದವರು ಶೇ. ೬೦ಕ್ಕೂ ಕಡಿಮೆ ಮತ್ತು ಭಾಜಪದ ಗೆದ್ದ ಅಭ್ಯರ್ಥಿಗಳ ವಿಜಯದ ಅಂತರವು ಬಹುಮಟ್ಟಿಗೆ ನಗಣ್ಯ. ಅಂದರೆ ಗುಜರಾತಿನ ಒಟ್ಟು ಮತದಾರರಲ್ಲಿ ಸುಮಾರು ಶೇ. ೩೦ರಷ್ಟು ಮಂದಿ ಅಧ್ವಾನಿಯವರ ಪಕ್ಷದ ಪರವಾಗಿ ನಿಂತಿದ್ದಾರೆ ಎಂದರ್ಥ. ಚುನಾವಣೆಯಲ್ಲಿ ಸೋತ ಒಬ್ಬ ಮಂತ್ರಿ ಪ್ರಭೃತಿ ದೂರದರ್ಶನದ ಸಂದರ್ಶನದಲ್ಲಿ ಮುಚ್ಚು ಮರೆಯಿಲ್ಲದೆ ಹೇಳಿದ್ದಾನೆ : ''ನನ್ನ ಕ್ಷೇತ್ರದಲ್ಲಿ ಮತೀಯ ಗಲಭೆಗಳು ನಡೆದಿರಲಿಲ್ಲವಾಗಿ ನಾನು ಸೋತೆ.'' ಪ್ರಜಾಪ್ರಭುತ್ವ ಮಾದರಿಯ ಚುನಾವಣೆಗಳಲ್ಲಿ ಅಪರಾಧೀಕರಣಕ್ಕೆ ಸ್ಥಾನವಿರಕೂಡದೆಂದು ಯಾವಾಗಲೂ ಹೇಳುತ್ತಲೇ ಇರುವ ನಮ್ಮ ಕೇಂದ್ರ ಗೃಹಮಂತ್ರಿಗಳು ಇದನ್ನು ಕೇಳಿಸಿಕೊಂಡಿದ್ದಾರೆಂದು ಊಹಿಸಬಹುದು. ನಾಗರಿಕರ ಹತ್ಯೆ ಎಂಬ ಬರ್ಬರ ಅಪರಾಧದ ಫಲವಾಗಿ ಚುನಾವಣೆಯಲ್ಲಿ ಗೆಲ್ಲುವುದು ಗುಜರಾತಿನ ಇತ್ತೀಚಿನ ಮಾದರಿ. ಅಂತಹ ಸಾಹಸಕೃತ್ಯಗಳನ್ನು ಎಲ್ಲೆಡೆಯೂ ನಡೆಸಿ ಚುನಾವಣೆಗಳಲ್ಲಿ ಗೆಲ್ಲುವುದು ಎಂಬುದು ''ಗುಜರಾತನ್ನು ಬೇರೆಡೆಗಳಲ್ಲೂ ಮರುಕಳಿಸುವಂತೆ ಮಾಡುತ್ತೇವೆ'' ಎಂಬುದರ ಅರ್ಥ.

ಗುಜರಾತ್ ಚುನಾವಣಾ ಫಲಿತಾಂಶಗಳಲ್ಲಿ ಇನ್ನೊಂದು ಅಂಶವೂ ಗಹನವಾಗಿ ಬೆಳಕಿಗೆ ಬಂದಿದೆ. ಅದೇನೆಂದರೆ, ಭೂಕಂಪ ಸಂಭವಿಸಿದ್ದ ಭಾಗಗಳಲ್ಲಿ ಅಧ್ವಾನಿಯವರ ಪಕ್ಷ ವಿಪರೀತ ಸೋಲನ್ನು ಅನುಭವಿಸಿದೆ. ಅಲ್ಲೂ ಮತೀಯ ಗಲಭೆಗಳಾಗಿದ್ದವು; ಆದರೂ ಚುನಾವಣೆಯಲ್ಲಿ ಗಲಭೆಕೋರರಿಗೆ ಜಯ ದಕ್ಕಲಿಲ್ಲ. ಅದಕ್ಕಿರುವ ಕಾರಣವನ್ನು ದೇಶದ ಜನ ಚೆನ್ನಾಗಿ ಗ್ರಹಿಸಬೇಕು: ಭೂಕಂಪ ಪೀಡಿತ ಪ್ರದೇಶಗಳ ನೆರವಿಗಾಗ ದೇಶ-ವಿದೇಶಗಳಿಂದ ಹಣ ಮತ್ತು ಸಾಮಗ್ರಿಗಳು ವಿಪುಲವಾಗಿ ಹರಿದುಬಂದವು. ಆದರೆ ಅದಾವುದೂ ಭೂಕಂಪ ಸಂತ್ರಸ್ತರಿಗೆ ತಲುಪಲಿಲ್ಲ. ಅಧ್ವಾನಿ ಪಕ್ಷದ ಧುರೀಣರೇ ಕಂಟ್ರಾಕ್ಟರುಗಳಾಗಿ ಅದನ್ನೆಲ್ಲಾ ನುಂಗಿದ ಭೂಪರು ಎಂಬುದು ಜನರಿಗೆ ನೇರವಾಗಿ ತಿಳಿಯಿತು. ಅಂಥವರೇ ಚುನಾವಣಾ ಕಣದಲ್ಲಿ ಆ ಪಕ್ಷದ ಅಭ್ಯರ್ಥಿಗಳಾಗಿಯೂ ಇದ್ದರು. ಮತದಾರರು ಏನು ಮಾಡಬೇಕಾಗಿತ್ತೋ ಅದನ್ನು ನಿಶ್ಚಯವಾಗಿ ಮಾಡಿ ತೋರಿಸಿದರು. ''ಬೇರೆ ಪಕ್ಷಗಳಂತಲ್ಲ ನಮ್ಮ ಪಕ್ಷ'' ಎಂಬ ವೆಂಕಯ್ಯನಾಯ್ಡು ಘೋಷಣೆಯು ಎಷ್ಟು ಹುಸಿಯಾಗಿತ್ತೆಂಬುದು ಭೂಕಂಪ ಸಂತ್ರಸ್ತರಿಗೆ ಮನವರಿಕೆಯಾಗಿತ್ತು. ಸಾರ್ವಜನಿಕ ಸಂಪತ್ತನ್ನು ಬೇಕಾಬಿಟ್ಟಿ ಖಾಸಗಿಯವರಿಗೆ ಹಸ್ತಾಂತರ ಮಾಡುತ್ತಿರುವ ವಾಜಪೇಯಿ- ಅರುಣ್‌ಶೌರಿ ಪಕ್ಷದ ನೈತಿಕ ಘನತೆಗೆ ಇದೊಂದು ನಿದರ್ಶನ ಸಾಕು.

ಗುಜರಾತಿನಲ್ಲಿ ಗೆದ್ದವರು ಬೇರೆ ರಾಜ್ಯಗಳಲ್ಲೂ ಜಯಭೇರಿ ಹೊಡೆದಾರೆಂಬ ನಿರೀಕ್ಷೆಯಿಂದ ಬೇರೆ ಎಷ್ಟೋ ಪಕ್ಷಗಳು ಅವರ ಹತ್ತಿರಕ್ಕೆ ನುಸುಳುತ್ತಿವೆ ಇಲ್ಲವೇ ನುಸುಳುವ ಸಮಯಕ್ಕಾಗಿ ಹೊಂಚು ಹಾಕುತ್ತಿವೆ. ಭಾರತೀಯ ''ರಾಷ್ಟ್ರೀಯ'' ಕಾಂಗ್ರೆಸ್‌ನ ಹಲವು ''ಗಣ್ಯರು'' ಇದಕ್ಕೆ ಹೊರತಲ್ಲ. ಆದ್ದರಿಂದಲೇ ಬಾಬಾಬುಡನ್‌ಗಿರಿಯಂತಹ ಸ್ಥಳದಲ್ಲಿ ದಾಂಧಲೆ ನಡೆಸಲು ತೋಗಡಿಯಾ ತಂಡ ಮುಂದಾದರೆ ಕೃಷ್ಣ ಸರ್ಕಾರವು ಆಕಾಶದತ್ತ ನೋಟ ನೆಟ್ಟು ನಿಲ್ಲುತ್ತದೆ. ಕೇಂದ್ರದ ಸಮ್ಮಿಶ್ರ ಸರ್ಕಾರದಲ್ಲಿ ಭಾಗಿಗಳಾಗಿರುವ ಭಾಜಪ ಮಿತ್ರ ಪಕ್ಷಗಳ ಸೊಲ್ಲು ಅಡಗಿಹೋಗುವುದಕ್ಕೂ ಅದೇ ಕಾರಣ. ತಾವು ನಾಳೆ ವಾಜಪೇಯಿಯವರ ಕೇಸರಿ ಛತ್ರಿಯಡಿ ನೆಲೆ ನಿಲ್ಲುವುದಿಲ್ಲವೆಂಬುದು ಖಾತ್ರಿಯಾಗಿದ್ದವರಿಗೆ ಬಜರಂಗ ದಳದ ಉದ್ಧಟತನದ ಬಗ್ಗೆ ಯಾವ ನಿಲುವು ತಾಳಬೇಕೆಂಬುದರ ಬಗ್ಗೆ ಸಂಶಯ ಇರಲು ಶಕ್ಯವಿಲ್ಲ. ಕಾಂಗ್ರೆಸ್ ಜನತಾ ದಳಗಳ ಪ್ರಮುಖರು ಇದನ್ನು ಜನರಿಂದ ಮುಚ್ಚಿಡಬಹುದೆಂದು ಭ್ರಮಿಸಿದರೆ ಅವರ ಬಾಲಿಶ ಬೌದ್ಧಿಕತೆಗೆ ಮರುಗಬೇಕಾಗುತ್ತದೆ, ಅಷ್ಟೆ. ಅಂತಹ ಹುನ್ನಾರಗಳೇನೂ ಇಲ್ಲದಿದ್ದಲ್ಲಿ ಕರ್ನಾಟಕದಲ್ಲಿ ಕಾಂಗ್ರೆಸ್ ನೇತಾರರು ಮತೀಯ ದ್ವೇಷದ ಪ್ರಸಾರದ ವಿರುದ್ಧ ಸಮರಕ್ಕಿಳಿಯಲು ಅಂಜಬೇಕೇಕೆ ? ಸಮಯ ಸಿಕ್ಕಿದಾಗ ಅನಿವಾರ್ಯವಾದರೆ ತಾವೂ ಬಜರಂಗಿಗಳಾಗಬೇಕೆಂಬ ಬಯಕೆಯಿಂದಾಗಿ ಅವರನ್ನು ಟೀಕಿಸಿ ಎದುರು ಹಾಕಿಕೊಳ್ಳಲು ಸಿದ್ಧರಿಲ್ಲದವರು ಇವರು ಎನ್ನೋಣವೆ ? ಅಂತಹ ಡೋಲಾಯಮಾನ ಮನಸ್ಸಿನವರು ಕರ್ನಾಟಕವನ್ನು ಗುಜರಾತು ಮಾಡುವ ದುಷ್ಕೃತ್ಯದಲ್ಲಿ ಸಹಭಾಗಿಗಳು ಎನಿಸಿಕೊಳ್ಳಬೇಕಾಗುತ್ತದೆ. ವೆಂಕಯ್ಯನಾಯ್ಡು ಪಕ್ಷವು ಬೇರಾವುದೇ ರಾಜಕೀಯ ಪಕ್ಷದಂತೆ ಅಧಿಕಾರಕ್ಕೆ ಬರುವುದು ಅದರ ಹಕ್ಕು. ಆದರೆ ಅದಕ್ಕೆ ಗುಜರಾತಿನ ಮೋದಿ ಮಾರ್ಗ ಶ್ರೇಯಸ್ಕರವಲ್ಲ, ಆರೋಗ್ಯಕರವಲ್ಲ. ಗುಜರಾತಿನ ಗುಮ್ಮನನ್ನು ಕರ್ನಾಟಕದಲ್ಲಿ ಮೆರೆಸುವುದು ಅಪಾಯಕರ. ಅದಕ್ಕೆ ಬದಲಾಗಿ ನಮ್ಮ ಜನರ ದಿನನಿತ್ಯದ ಮತ್ತು ದೀರ್ಘಾವಧಿಯ ನೂರು ಸಮಸ್ಯೆಗಳನ್ನು ಕೈಗೆತ್ತಿಕೊಂಡು ಪರಿಹಾರಕ್ಕಾಗಿ ಹೋರಾಡುವವರು ಮಾತ್ರವೇ ಜನಪ್ರತಿನಿಧಿಗಳಾಗಲು ಅರ್ಹರು ಎಂಬ ಕಟ್ಟೆಚ್ಚರ ನಮ್ಮ ನಾಡಿನ ಪ್ರಜ್ಞಾವಲಯವನ್ನು ಆವರಿಸುತ್ತದೆಂದು ಆಶಿಸಬೇಕಾಗಿದೆ.

[signature]


ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ :೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨

## ಪತ್ರಗಳು

'ಹೊಸತು' ವಿಶೇಷಾಂಕ ತಲಪಿದೆ. ಪತ್ರಿಕೆ ಅಂದವಾಗಿದೆ, ತೂಕವಾಗಿದೆ. ಸಾಕಷ್ಟು ವಿಚಾರ ಪೂರಕವಾಗಿದೆ. ಓದಲು, ಓದಿ ಮೆಲುಕು ಹಾಕಲು, ಅರ್ಥ ಮಾಡಿಕೊಳ್ಳಲು ಸಾಕಷ್ಟು ಆಹಾರವನ್ನು ಒಳಗೊಂಡಿದೆ. ನಿಧಾನವಾಗಿ ಓದುತ್ತೇನೆ. 'ಹೊಸತು' ಸದಾ ಹೊಸ ಹೊಸದಾಗಿರಲಿ. ಅದರ ಆಶಯ ವಾಕ್ಯ ''ನೆಮ್ಮದಿಯ ನಾಳೆ'' ನನಸಾಗಲಿ ಎಂದು ಪ್ರಾರ್ಥಿಸುತ್ತೇನೆ.

ಮಲ್ಲೇಶ್ವರಂ — *ನೀಲತ್ತಹಳ್ಳಿ ಕಸ್ತೂರಿ*

ಈ ಸಲದ 'ಹೊಸತು' ವಿಶೇಷಾಂಕ ಮಾರ್ವಲೆಸ್. ನಿಮ್ಮ ಸಾಹಸಕ್ಕೆ ಕೃತಜ್ಞತೆಗಳು.

ಶಹಾಪುರ — *ವಿಶ್ವಾರಾಧ್ಯ ಸತ್ಯಂಪೇಟೆ*

'ಹೊಸತು' ವಿಶೇಷ ಸಂಚಿಕೆ ತಲುಪಿದೆ, ವಂದನೆಗಳು; ಅಂದವಾಗಿದೆ, ಅಭಿನಂದನೆಗಳು. ತಮ್ಮ ನೇತೃತ್ವದಲ್ಲಿ ವಿಶೇಷ ಸಂಚಿಕೆಯನ್ನು ರೂಪಿಸಿದ ಎಲ್ಲರನ್ನೂ ಅಭಿನಂದಿಸುತ್ತೇನೆ.

ಮೈಸೂರು — *ಸಿ. ನಾಗಣ್ಣ*

'ಹೊಸತು' ವಿಶೇಷಾಂಕ ಅದ್ಭುತ ಮತ್ತು ಅರ್ಥಪೂರ್ಣವಾಗಿದೆ. ವಿಶೇಷಾಂಕಗಳು ಹೇಗಿರಬೇಕು ಎಂಬುದಕ್ಕೆ ಇದೊಂದು ಮಾದರಿ. ಎಲ್ಲ ಒಳ್ಳೆಯ ಲೇಖಕರು ಇದರಲ್ಲಿದ್ದಾರೆ. ಇದಕ್ಕೆ ನಿಮ್ಮ ನಿರ್ಮಲ ಪ್ರೀತಿ ಸ್ನೇಹವೇ ಕಾರಣ. ಅಭಿನಂದನೆಗಳು.

ಹೊಸ ವರ್ಷದ ಹಾರ್ದಿಕ ಶುಭಾಶಯಗಳು.

*ಕುಂ. ವೀ.*

'ಹೊಸತು' ವಿಶೇಷ ಸಂಚಿಕೆಯಲ್ಲಿ ಡಾ: ಕೊನ್ರಾಡ್ ಎಲ್ಸ್ಟ್‌ರ ಅಭಿಪ್ರಾಯ (ಡಾ: ನಾಡಕರ್ಣಿಯವರ ಲೇಖನ) ಕುತೂಹಲಕಾರಿಯಾಗಿದೆ. ಮಧ್ಯಯುಗದ ವಿಶ್ವವಿಜೇತ ಇಸ್ಲಾಂಗೆ ಭಾರತವನ್ನು ಇಸ್ಲಾಂಮಯ ಮಾಡಲು ಅಸಾಧ್ಯವಾಯಿತು. ಹಿಂದೂ ಧರ್ಮದ ವರ್ಣಪದ್ಧತಿ ಸಾಮಾಜಿಕ ವೈಷಮ್ಯಕ್ಕೆ ಕಾರಣವಾಗಿದ್ದರೂ ಅದರ ಲಾಭ ಇಸ್ಲಾಂಗೆ ಆಗದೆ ಹೋದುದು ಆಶ್ಚರ್ಯಕರವೇ. ವರ್ಣಪದ್ಧತಿಯ ಬಿಗಿ ಚೌಕಟ್ಟು ಹಿಂದುಗಳನ್ನು ಬಹು ಸಂಖ್ಯಾತರಾಗಿಯೇ ಉಳಿಸಿತು. ಆದರೆ ವರ್ಣಪದ್ಧತಿಯ ಹೊರಗಿದ್ದ ಬೌದ್ಧ ಸಮಾಜ ಉಳಿಯಲಾಗಲಿಲ್ಲ. ೧೨ನೇ ಶತಮಾನದವರೆಗೆ ಭಾರತದ ಪೂರ್ವ-ಪಶ್ಚಿಮ ಪಾರ್ಶ್ವಗಳಲ್ಲಿ – ಈಗಿನ ಆಫ್ಘಾನಿಸ್ತಾನ, ಪಾಕಿಸ್ತಾನ ಮತ್ತು ಬಾಂಗ್ಲಾ ದೇಶಗಳಲ್ಲಿ – ಅಶೋಕ ಮತ್ತು ಕಾನಿಷ್ಕರ ಕಾಲದಿಂದ ಬೌದ್ಧರು (ಮಹಾಯಾನ) ಬಹುಸಂಖ್ಯಾತರಿದ್ದರು. ಅಲ್ಲಿದ್ದ ಬೌದ್ಧ ರೆಲ್ಲ ಏನಾದರು? ಹಿಂದು ಸಮಾಜದಲ್ಲಿ ಬೆರೆತರೆಂಬ ವಾದವಿದೆ. ಆದರೆ ಅವರ ಮತಾಂತರವಾಯಿತೆಂದೇ ಮಹಾಬೋಧಿ ಸಂಘದ ಸಂಸ್ಥಾಪಕ ದೇವಮಿತ್ತ ಧರ್ಮಪಾಲ ಮತ್ತು ಸಿಲ್ವೆನ್ ಲೆವಿಯವರ ಅಭಿಪ್ರಾಯ. ಅಲ್ ಬೆರೂನಿ ತನ್ನ ಒಡೆಯ ಘಜ್ನಿ ಮಹಮ್ಮದ್, ಜಲಾಲಬಾದ್ ಮತ್ತು ತಕ್ಷಶಿಲಾ ಪ್ರದೇಶಗಳಲ್ಲಿ ಬೌದ್ಧ ಮಠಗಳನ್ನೆಲ್ಲ ನಾಶಗೊಳಿಸಿದನೆಂದು (ಕ್ರಿ.ಶ. ೧೦೧೫) ಹೇಳಿರುವ. ಈ ವಿವರದಿಂದ ವರ್ಣ ವ್ಯವಸ್ಥೆ ಇಂದು ಎಷ್ಟೇ ದೂಷಣೆಗೆ ಪಾತ್ರವಿರುವುದಾದರೂ ಇತಿಹಾಸದಲ್ಲಿ ಹಿಂದು ಸಮಾಜ, ಪ್ರಪಂಚದ ಇತರ ಸಮಾಜಗಳಂತೆ ಇಸ್ಲಾಂ ಆಕ್ರಮಣಗಳಿಂದ ನಾಶಗೊಳ್ಳದಂತೆ ಉಳಿಸಿದೆ ಎಂಬುದೇ ಐತಿಹಾಸಿಕ ಸತ್ಯ.

ಸಾಗರ — *ಬ. ನಾ. ರಘುರಾಮ*

[ಭೌಗೋಳಿಕ ಅಂಶವನ್ನು ಬಿಟ್ಟು ವರ್ಣವ್ಯವಸ್ಥೆಯು ಹಿಂದು ಸಮಾಜವನ್ನು ರಕ್ಷಿಸಿತೆಂದು ಹೇಳುವುದು ವಿಪರ್ಯಾಸ. ಆ ವ್ಯವಸ್ಥೆಯಿಂದಾಗಿಯೇ ಅದು ಸಿದ್ಧಿಸಿತೆನ್ನಲು ಪುರಾವೆಯೇನೂ ಇಲ್ಲ.

*- ಸಂಪಾದಕ*]

'ಹೊಸತು' ಹೊಸ ವರ್ಷದ ವಿಶೇಷ ಸಂಚಿಕೆಯಲ್ಲಿ ವಿಸ್ತಾರ ಮತ್ತು ಗಾಢವಾದ ಲೇಖನಗಳ ಹೊಂದಾಣಿಕೆ ತುಂಬಾ ಚೆನ್ನಾಗಿ ಮೂಡಿಬಂದಿರುತ್ತದೆ. ''ನೆಮ್ಮದಿಯ ನಾಳೆ ನಮ್ಮದು'' ಮನಮುಟ್ಟುತ್ತದೆ. ತಮಗೆ ಮತ್ತು ತಮ್ಮ ಸಹೋದ್ಯೋಗಿಗಳಿಗೆ ನನ್ನ ಅಭಿನಂದನೆಗಳು.

ಬೆಂಗಳೂರು — *ಡಾ॥ ಎಸ್. ಬಿಸಲಯ್ಯ*

ವಿಶೇಷಾಂಕವೆಂದರೆ ಒಂದಷ್ಟು ಬಣ್ಣ, ಬಣ್ಣದ ಸಿನಿಮಾ ಪುಟಗಳು, ವರ್ಷ ಭವಿಷ್ಯ, ಹಳಸಲು ಲೇಖನಗಳು ಇಷ್ಟೇ ಎಂಬ ನನ್ನ ಅಭಿಪ್ರಾಯ 'ಹೊಸತು' ವಿಶೇಷಾಂಕ ನೋಡಿದ ಮೇಲೆ ಬದಲಾಯಿತು.

ವೈಚಾರಿಕ ಬರಹಗಳಿಂದ ಸಮೃದ್ಧವಾದ ಮತ್ತು ಓದಿದ ನಂತರ ಒಂದಿಷ್ಟು ಚಿಂತನೆಗೆ ಹಚ್ಚುವಂತೆ ಮಾಡಿದ ತಮಗೆ ಅಭಿನಂದನೆ. 'ಹೊಸತು' ಯಾರ ಕೈಲಾದರೂ ಇದ್ದರೆ, ಅವರು ಪ್ರಗತಿಶೀಲರು ಎಂದರ್ಥೈಸಿಕೊಳ್ಳಬಹುದು. ಇಂತಹ ಪತ್ರಿಕೆಗಳು ನಾಡಿನಗಲ ವ್ಯಾಪಿಸಿದರೆ ಎಂದೂ ಕರ್ನಾಟಕ 'ಗುಜರಾತ್' ಆಗುವುದಿಲ್ಲ. ೨೦೦೪ರ ಜನವರಿ ಎಂದು ಬರುವುದೋ? ವಿಶೇಷಾಂಕಕ್ಕಾಗಿ....

ವೇಮಗಲ್ — *ವಿಶ್ವನಾಥ ಎಲ್. ವೇಮಗಲ್*

ಶಿಶುನಾಳ ಶರೀಫರ ''ಕೋಡಗನ ಕೋಳಿ ನುಂಗಿತ್ತಾ'' ಹಾಡಿನ ವ್ಯಾಖ್ಯಾನವನ್ನು ಪ್ರೊ. ಭೀಮಪ್ಪ ಆರ್. ಸುರಪುರ ಬಹಳ ಸಮರ್ಥವಾಗಿ ಮಾಡಿದ್ದಾರೆ. ಇದು ಕನ್ನಡಕ್ಕೆ ಗೌರವ ತರುವ ಕೆಲಸ. ಪ್ರೊ. ಕೆ. ಎಸ್. ಭಗವಾನ್, ಅರವಿಂದ ಚೊಕ್ಕಾಡಿ, ಜಿ. ಶ್ರೀನಿವಾಸ ರಾಜು, ಡಾ॥ ಎಚ್. ಎಸ್. ರಾಘವೇಂದ್ರರಾವ್ ಮುಂತಾದವರ ಲೇಖನಗಳು ಸೋಪಜ್ಞತೆಯಿಂದ ಓದುಗನನ್ನು ಆಕರ್ಷಿಸುತ್ತವೆ. ಓದಿನ ಅನುಭವ ದೊರೆಯಬೇಕಾದರೆ ಇಂಥ ಲೇಖನಗಳು ಬೇಕು.

ಸುಳ್ಯ — *ಕಿರಣ*

ಪ್ರವೀಣ್ ಭಾಯಿ ತೊಗಾಡಿಯಾ ಇನ್ನೆರಡು ವರ್ಷದಲ್ಲಿ ಭಾರತ ಹಿಂದೂರಾಷ್ಟ್ರವಾಗುತ್ತದೆ ಎಂದು ಹೇಳಿದ ಬೆನ್ನಿಗೆ ವಿ.ಹಿಂ.ಪ. ನಾಯಕರಾದ ಅಶೋಕ್ ಸಿಂಘಾಲ್ ಕೂಡ ಈ ಮಾತಿಗೆ ದನಿಗೂಡಿಸಿದ್ದಾರೆ. ಅಂದರೆ ಮುಸಲ್ಮಾನರನ್ನು ಮುಸ್ಲಿಂ ದೇಶಗಳಿಗೆ ಕ್ರಿಶ್ಚಿಯನ್ನರನ್ನು ರೋಮ್‌ಗೆ ಅಟ್ಟಲಾಗುವುದು. ನನಗೆ ಈ ಮಾತು ಕೇಳಿ ತುಂಬಾ ಸಂತೋಷವಾಯಿತು. ಏಕೆಂದರೆ ವಿದೇಶಗಳಿಗೆ ನಾವು ಇವರನ್ನು ಅಟ್ಟಿದರೆ, ವಿದೇಶದಲ್ಲಿ, ಮುಖ್ಯವಾಗಿ ಕೊಲ್ಲಿ ರಾಷ್ಟ್ರಗಳಲ್ಲಿ ದುಡಿಯುವ ನಮ್ಮ ಸಹೋದರ ಸಹೋದರಿಯರನ್ನು ಅವರೂ ಹಿಂದಕ್ಕೆ ಅಟ್ಟುತ್ತಾರೆ. ಇನ್ನಾದರೂ ಜೊತೆಯಲ್ಲಿರಬಹುದಲ್ಲವೆ?! ಹಬ್ಬ ಹರಿದಿನ ಆಚರಿಸಬಹುದಲ್ಲವೆ? ಪಾನೀಯ ಸಾಮ್ರಾಟರಾದ ಪೆಪ್ಸಿ, ಕೋಕಾ ಕೋಲವನ್ನು ಓಡಿಸಿದರೆ ನಮ್ಮ ರೈತರಿಗೆ ಸುಗ್ಗಿಯೋ ಸುಗ್ಗಿ. ನಮ್ಮ ರೈತರು ಎಳ ನೀರು ಬೆಳೆದರೂ ಆರಾಮವಾಗಿ ಬದುಕಿ ಕೊಳ್ಳುತ್ತಾರೆ. ಇದರ ಪುಣ್ಯ ಖಂಡಿತವಾಗಿಯೂ ಸಂಘ ಪರಿವಾರಕ್ಕೆ ಸಲ್ಲುತ್ತದೆ. ಕೊಲ್ಲಿ ರಾಷ್ಟ್ರಗಳವರು ಹೆಚ್ಚಾಗಿ ಆಹಾರ ಧಾನ್ಯಗಳಿಗೆ ನಮ್ಮನ್ನೇ ನೆಚ್ಚಿಕೊಂಡಿದ್ದಾರೆ. ನಾವು ರಫ್ತು ಮಾಡದಿದ್ದರೆ ಅವರೂ ಕೂಡ ತೈಲೋತ್ಪನ್ನಗಳನ್ನು ನಿಲ್ಲಿಸುತ್ತಾರೆ. ನಮಗೆ ತೈಲದ ಕೊರತೆ ಬರುವುದು ಖಂಡಿತ. ನಮ್ಮಲ್ಲಿ ಸಿಗುವ ತೈಲ ನಮ್ಮ ಉಪಯೋಗಕ್ಕೆ ಸಿಗುವುದು ಶೇ. ೧೦ ಮಾತ್ರ. ನಾವು ಮತ್ತೆ ನಮ್ಮ ಪೂರ್ವ ಕಾಲದ ಎತ್ತಿನ ಗಾಡಿ, ಕೈಗಾಡಿ, ಕುದುರೆ ಗಾಡಿಗೆ ಮೊರೆ ಹೋಗುತ್ತೇವೆ! ನಮ್ಮ ಯುದ್ಧ ಟ್ಯಾಂಕ್‌ಗಳಿಗೂ, ವಿಮಾನಗಳಿಗೂ ಪೆಟ್ರೋಲ್ ಇಂಧನ ಇಲ್ಲದೆ ನಾವು ಮತ್ತೆ ಪುರಾಣ ಕಾಲದ ಕುದುರೆಗಳಿಂದ ಎಳೆಯುವ ರಥ ಬಂಡಿಗಳಿಗೆ ಮೊರೆ ಹೋಗುತ್ತೇವೆ! ವಾಹ್ ಎಂತಹ ಸಂತೋಷದ ವಿಷಯ ಅಲ್ಲವೆ? ಪರಿಸರ ಮಾಲಿನ್ಯ ಎಂಬುದೇ ಇರುವುದಿಲ್ಲ. ಬುದ್ಧಿಜೀವಿಗಳ, ಕಮ್ಯೂನಿಸ್ಟರ ಸೊಲ್ಲಡಗಿಸಬಹುದು. ಇನ್ನು ವಿದೇಶೀ ಸಂಸ್ಕೃತಿಯ ಫ್ಯಾಷನ್, ನೃತ್ಯಗಳನ್ನು ನಿಲ್ಲಿಸಿದರೆ ನಮ್ಮ ಭರತನಾಟ್ಯ, ಒಡಿಸ್ಸಿ, ಕೂಚಿಪುಡಿ, ಕಥಕ್ಕಳಿ ವಿಜೃಂಭಿಸುವುದು ಖಂಡಿತ. ಈ ತನಕ ಅಣ್ಣ ತಮ್ಮಂದಿರು ಅಕ್ಕ ತಂಗಿಯರ ಥರ ಇದ್ದು ಬಾಳ್ವೆ ನಡೆಸುತ್ತಿದ್ದ ಹಿಂದೂ ಮುಸ್ಲಿಂ ಕ್ರಿಶ್ಚಿಯನ್ನರನ್ನು ಕಚ್ಚಾಡಿಸಿ ಓಟು ಪಡೆದು ಮತಾಂಧ ಕೋಮುವಾದಿಗಳು ಅಧಿಕಾರಕ್ಕೆ ಬರುತ್ತಿದ್ದಾರೆ. ಈ ಮುಸ್ಲಿಂ, ಕ್ರಿಶ್ಚಿಯನ್ನರು ದೇಶ ಬಿಟ್ಟು ತೊಲಗಿದ ನಂತರ ಯಾರು ಯಾರನ್ನು ಕಚ್ಚಾಡಿಸಬಹುದು. ಅದಕ್ಕೂ ಒಂದು ಉಪಾಯ ಈಗಾಗಲೇ ಕಂಡು ಹಿಡಿದಿರಲೂಬಹುದು. ಪಕ್ಕದ ಮನೆ ಮಗುವನ್ನು ಬಾವಿಗೆ ತಳ್ಳಿ ಆಳ ನೋಡುವ ಇಂತಹ ಸಮಯ ಸಾಧಕರ ಹಿಂದೂ ರಾಷ್ಟ್ರ ಎಂದು ಉದಯವಾಗುತ್ತದೆ ಎಂದು ನಾವು ಕಾದು ನೋಡೋಣ ಅಲ್ಲವೆ?

ಮಂಗಳೂರು — *ಆಶಾ ಜಿ. ಬೋಳೂರು*

# ನ್ಯಾಯಾಂಗ ಮತ್ತು ಮೌಲ್ಯಗಳು

## ಒಂದು ಚಿಂತನೆ

ಎನ್. ಪಿ. ಜಗದೀಶ್

**ಪ್ರ**ಜಾಪ್ರಭುತ್ವದಲ್ಲಿ ನ್ಯಾಯಾಂಗ ಅತ್ಯಂತ ಪ್ರಮುಖ ಪಾತ್ರವನ್ನು ಇಂದಿನವರೆಗೂ ಕೂಡ ವಹಿಸಿಕೊಂಡು ಬಂದಿದೆ. ಅತಿ ಪ್ರಾಚೀನ ಪ್ರಜಾಪ್ರಭುತ್ವ ರಾಷ್ಟ್ರವಾದ ಇಂಗ್ಲೆಂಡ್ ಇದಕ್ಕೆ ಮಾದರಿ ಎನ್ನಬಹುದು. ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಈ ಮೂರೂ ರಾಜ್ಯಾಂಗದ ಪ್ರಮುಖ ಅಂಗಗಳು. ಈ ಪ್ರತಿಯೊಂದು ಅಂಗವೂ ಸ್ವತಂತ್ರ ಹಾಗೂ ಪರಮೋಚ್ಚವಾಗಿದ್ದು, ವಿಧಿ-ವಿಧಾನಗಳಿಗೆ ಅನುಸಾರವಾಗಿ ತಮ್ಮ ತಮ್ಮ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿರುವುದು ಸರಿಯಷ್ಟೆ. ಭಾರತಕ್ಕೆ ಸ್ವಾತಂತ್ರ್ಯ ಬಂದು ೫೦ ವರ್ಷಗಳು ಗತಿಸಿರುವ ಹಿನ್ನೆಲೆಯಲ್ಲಿ ಮತ್ತು ಭಾರತದ ಸ್ವಾತಂತ್ರ್ಯಾನಂತರದ ಇತಿಹಾಸವನ್ನು ಅವಲೋಕಿಸಿದಾಗ ಶಾಸಕಾಂಗ ಮತ್ತು ಕಾರ್ಯಾಂಗಗಳು ಪದೇ-ಪದೇ ತಮ್ಮ ಕಾರ್ಯ ನಿರ್ವಹಣೆಯಲ್ಲಿ ಎಡವಿದಂತಹ ಸಂದರ್ಭಗಳಲ್ಲಿ ನ್ಯಾಯಾಂಗ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಧ್ಯ ಪ್ರವೇಶಿಸಿ ಅಂತಹ ತಪ್ಪುಗಳನ್ನು ಒರೆ ಹಚ್ಚಿ ನಿಷ್ಪಕ್ಷಪಾತವಾದ ನಿಲುವು ತಳೆದು ನಮ್ಮ ಕಾರ್ಯಾಂಗ ವ್ಯವಸ್ಥೆ ಎಂದಿನಂತೆ ನಡೆದುಕೊಂಡು ಹೋಗಲು ಅನುವು ಮಾಡಿಕೊಟ್ಟಿದೆ. (ಉದಾ: ತುರ್ತು ಪರಿಸ್ಥಿತಿ ಮತ್ತು ಇತ್ತೀಚಿನ ಗುಜರಾತ್ ಚುನಾವಣೆಯ ವಿಷಯದಲ್ಲಿ ಚುನಾವಣಾ ಆಯೋಗದ ಸ್ವತಂತ್ರ ಪಾತ್ರವನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿ ಹಿಡಿದಿರುವುದು ಇತ್ಯಾದಿ.)

ಭಾರತದಲ್ಲಿ ನ್ಯಾಯಾಂಗದ ಪಾತ್ರವು ನ್ಯಾಯ ವಿತರಣೆಗೆ ಮಾತ್ರ ಸೀಮಿತವಾಗಿರದೆ ಅನೇಕ ಸಂದರ್ಭಗಳಲ್ಲಿ ಜನಸಾಮಾನ್ಯರು ಸಲ್ಲಿಸುವ ಸಾರ್ವಜನಿಕ ಹಿತಾಸಕ್ತಿ ಅರ್ಜಿಗಳನ್ನು ಕುರಿತಂತೆ ತೀರ್ಪು ನೀಡುವಾಗ ತನ್ನ ಕಾರ್ಯವ್ಯಾಪ್ತಿಯನ್ನು ಮೀರಿ (ಸಂಬಂಧಿಸಿದ ವಿಷಯ ಶಾಸಕಾಂಗ ಅಥವಾ ಕಾರ್ಯಾಂಗಗಳಿಗೆ ಸಂಬಂಧಪಟ್ಟಿದ್ದರೂ ಕೂಡ) ಮಧ್ಯ ಪ್ರವೇಶಿಸಿ ರಾಷ್ಟ್ರದ ಹಿತದೃಷ್ಟಿಯಿಂದ ಆದೇಶಗಳನ್ನು ಹೊರಡಿಸಿರುವ ಪ್ರಕರಣಗಳು ಅನೇಕವಿವೆ.

ಅವಲೋಕಿಸಿದಾಗ, ಕೆಳ ಹಂತದಲ್ಲಿ ಮುನ್ಸಿಫ್/ನ್ಯಾಯಾಧೀಶರು ನೇರವಾಗಿ ಲಿಖಿತ ಮತ್ತು ಮೌಖಿಕ ಪರೀಕ್ಷೆಗಳ ಮೂಲಕ ಆಯ್ಕೆಯಾಗುತ್ತಿದ್ದಾರೆ. ಹಾಗೆಯೇ, ಜಿಲ್ಲಾ ನ್ಯಾಯಾಧೀಶರೂ ಆಯ್ಕೆಯಾಗುತ್ತಿದ್ದಾರೆ. ಆದರೆ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳನ್ನು ೬೩ ಮತ್ತು ೩೭, ಅಂದರೆ, ಶೇ. ೬೩ ಪ್ರಮಾಣದ ನ್ಯಾಯಾಧೀಶರನ್ನು ಉಚ್ಚ ನ್ಯಾಯಾಲಯದಲ್ಲಿ ವೃತ್ತಿಪರ ವಕೀಲರುಗಳ ಅರ್ಹತೆ ಮತ್ತು ಘನತೆಗೆ ಅನುಸಾರವಾಗಿ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ನ್ಯಾಯಾಧೀಶರ ಸ್ಥಾನಕ್ಕೆ ಶಿಫಾರಸ್ಸು ಮಾಡುವ ಪದ್ಧತಿ ರೂಢಿಯಲ್ಲಿದೆ. ಉಳಿದಂತೆ ಶೇ. ೩೭ರಷ್ಟು ಕೆಳ ಹಂತದಿಂದ ಬಂದ ಜಿಲ್ಲಾ ನ್ಯಾಯಾಧೀಶರ ಜೇಷ್ಠತಾ ಪಟ್ಟಿಯಲ್ಲಿ ಹಿರಿಯರಾದಂತಹ ಜಿಲ್ಲಾ ನ್ಯಾಯಾಧೀಶರನ್ನು ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ನೇಮಕ ಮಾಡುವ ಕ್ರಮ ಅನುಸರಿಸಲಾಗುತ್ತಿದೆ.

ನೇರವಾಗಿ ವಕೀಲಿ ವೃತ್ತಿಯಿಂದ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ನೇಮಕಗೊಳ್ಳಲು ನಿರ್ದಿಷ್ಟವಾದ ಅರ್ಹತೆ, ಸ್ಥಾನಮಾನ ಇತ್ಯಾದಿ ಇತ್ತೀಚೆಗೆ ಅಷ್ಟಾಗಿ ಕಂಡು ಬರುತ್ತಿಲ್ಲ. ಆದರೆ ಸಂವಿಧಾನದಲ್ಲಿ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಲು ಕನಿಷ್ಠ ೧೦ ವರ್ಷಗಳ ವಕೀಲಿ ವೃತ್ತಿ ಅನುಭವ ಸಾಕೆಂದು ಹೇಳಲಾಗಿದೆ.

ಪೂರ್ವಭಾವಿಯಾಗಿ ಮ್ಯಾಜಿಸ್ಟ್ರೇಟರು (ಮುನ್ಸಿಫ್), ಜಿಲ್ಲಾ ನ್ಯಾಯಾಧೀಶರು ಇವರುಗಳ ಆಯ್ಕೆಯನ್ನು ಲಿಖಿತ ಮತ್ತು ಮೌಖಿಕ ಪರೀಕ್ಷೆಗಳ ಮುಖಾಂತರ ಆಯ್ಕೆ ಮಾಡುತ್ತಿರುವ ಸಂದರ್ಭದಲ್ಲಿ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಇಂತಹ ಪರೀಕ್ಷೆಗಳಿಗೆ ಒಳಗಾಗದೆ ಮನಸೋಇಚ್ಛೆ, ಅದರಲ್ಲೂ ಮುಖ್ಯವಾಗಿ ಸದರಿ ಉಚ್ಚ ನ್ಯಾಯಾಲಯಗಳಲ್ಲಿ ಹೆಸರಿಸಲ್ಪಡುವ ಹಿರಿಯ ವಕೀಲರುಗಳನ್ನು ಕೂಡ ಕಡೆಗಣಿಸಿ ಅವರಿಗೆ

ಸದರಿ ಆದೇಶಗಳು ಕಾರ್ಯರೂಪಕ್ಕೆ ಬಂದು ಜನಮನ್ನಣೆಯನ್ನು ಪಡೆದು ಆ ಸಂದರ್ಭದಲ್ಲಿ ಉದ್ಭವಗೊಂಡ ಸಂದಿಗ್ಧ ಪರಿಸ್ಥಿತಿಯನ್ನು ಸುಧಾರಿಸಿರುವ ನಿದರ್ಶನಗಳು ಕೂಡ ಅನೇಕ. "ತುಂಗಾ ಉಳಿಸಿ" – ಪರಿಸರ ಚಳುವಳಿಯ ಪ್ರಾಮುಖ್ಯತೆಯನ್ನು ಗಮನಿಸಿದ ಸರ್ವೋಚ್ಚ ನ್ಯಾಯಾಲಯ ಕುದುರೆಮುಖ ಗಣಿಗಾರಿಕೆಯನ್ನು ೨೦೦೫ಕ್ಕೆ ನಿಲ್ಲಿಸುವಂತೆ ನೀಡಿರುವ ತೀರ್ಪು, ಉಚ್ಚ ಹಾಗೂ ಶ್ರೇಷ್ಠ ನ್ಯಾಯಾಲಯಗಳು ನಿರ್ವಹಿಸಿದ ಪಾತ್ರ ಇತ್ಯಾದಿ ಈ ಸಾಲಿನಲ್ಲಿವೆ.

ಭಾರತದಲ್ಲಿಯ ನ್ಯಾಯಾಂಗ ವ್ಯವಸ್ಥೆ ಪ್ರಾಚೀನವಾದದ್ದು. ಭಾರತ ಸ್ವಾತಂತ್ರ್ಯಪೂರ್ವದಲ್ಲಿ ರಾಜ ಮನೆತನಗಳು ಮತ್ತು ಸಾಮಂತ ರಾಜರುಗಳ ಆಳ್ವಿಕೆಗೆ ಒಳಪಟ್ಟಂತಹ ದೇಶವಾಗಿದ್ದರೂ ಜನಸಾಮಾನ್ಯರಿಗೆ ನ್ಯಾಯಾಲಯಗಳಲ್ಲಿ ನಂಬಿಕೆ ಬರುವ ರೀತಿಯಲ್ಲಿ ನ್ಯಾಯದಾನ ಮಾಡಿರುವ ಸಂಪ್ರದಾಯವನ್ನು ಗಮನಿಸಬಹುದಾಗಿದೆ. ಉದಾ: ಪಂಚಾಯಿತಿಯಲ್ಲಿ, ಒಬ್ಬ ಜನಪ್ರಿಯ ವ್ಯಕ್ತಿ ಪಂಚಾಯಿತಿ ಕಟ್ಟೆಗೆ ಬಂದು ಅವಿದ್ಯಾವಂತನಾದರೂ ತೀರ್ಪು ನೀಡುತ್ತಿದ್ದ ಹಾಗೂ ನ್ಯಾಯದಾನವನ್ನು ಯಾರೂ ಕೂಡ ಪ್ರಶ್ನೆ ಮಾಡದೆ ಒಪ್ಪಿಕೊಳ್ಳುತ್ತಿದ್ದಂತಹ ಸಂದರ್ಭಗಳನ್ನು ನಮ್ಮ ಇತಿಹಾಸದಲ್ಲಿ ಕಾಣಬಹುದು. ಅಂಥ ಪ್ರಕ್ರಿಯೆಯಲ್ಲಿ ಒಬ್ಬ ವ್ಯಕ್ತಿಯ ಪಾತ್ರಕ್ಕಿಂತಲೂ ಅದು ಪಂಚಾಯಿತಿಯಲ್ಲಿ ಸೇರಿದ ಹಲವಾರು ಹಿರಿಯರ ಸಂವಾದಗಳಿದ್ದು, ಈ ಸಂವಾದಗಳು ಅತ್ಯಂತ ಪಾರದರ್ಶಕತೆಯಿಂದ ಕೂಡಿದಂಥವು. ನೆರೆದಿದ್ದ ಜನರ ಮುಂದೆ ವಾದ-ಸಂವಾದಗಳಿಗೆ ಅವಕಾಶ ಕೊಟ್ಟು ಎಲ್ಲವನ್ನೂ ಕೂಡ ಆಲಿಸಿ ತೀರ್ಮಾನವನ್ನು ಕೊಡುತ್ತಿದ್ದ ಕಾಲ.

ಈ ಹಿನ್ನೆಲೆಯಲ್ಲಿ ಸದ್ಯದ ನ್ಯಾಯಾಂಗ ವ್ಯವಸ್ಥೆಯನ್ನು



ಇಷ್ಟವಾದ ವಕೀಲರುಗಳ ವೃಂದದ ಹೆಸರುಗಳನ್ನು ಶಿಫಾರಸ್ಸು ಮಾಡಿ ತನ್ಮೂಲಕ ಅವರುಗಳು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಪ್ರಮಾಣ ವಚನ ಸ್ವೀಕರಿಸುವುದು ಸಂವಿಧಾನಬದ್ಧವೇ?

ಸದರಿ ನ್ಯಾಯಾಧೀಶರುಗಳು ಈ ಹಿಂದೆ ಇದೇ ಉಚ್ಚ ನ್ಯಾಯಾಲಯದಲ್ಲಿ ವಕೀಲರಾಗಿ ಸೇವೆ ಸಲ್ಲಿಸುತ್ತಾ ಬಂದಿದ್ದು, ಇದೇ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿಯೂ ಮುಂದುವರಿದಿದ್ದು, ಈ ಹಿಂದೆ ವಕೀಲರುಗಳಾಗಿದ್ದಾಗಿನ ಸಂಬಂಧಗಳನ್ನು ಮುಂದುವರೆಸಿಕೊಂಡು ಹೋಗುವ ನಿದರ್ಶನಗಳೂ ಇವೆ. ಇಂತಹವರುಗಳು ಎಷ್ಟರಮಟ್ಟಿಗೆ ನ್ಯಾಯದಾನ ಮಾಡಬಲ್ಲರು ಎಂಬ ಪ್ರಶ್ನೆ ಉದ್ಭವಿಸುವುದು ಸಹಜವೇ. ಅದಕ್ಕಿಂತಲೂ ಹೆಚ್ಚಾಗಿ, ಇದೇ ನ್ಯಾಯಾಧೀಶರುಗಳು ತಾವು ವಕೀಲರುಗಳಾಗಿದ್ದ ಅವಧಿಯಲ್ಲಿ ಸಂಬಂಧವಿಟ್ಟುಕೊಂಡಿದ್ದಂತಹ ಕಕ್ಷಿದಾರರು ಈ ನ್ಯಾಯಾಧೀಶರುಗಳನ್ನು ಯಾವ ದೃಷ್ಟಿಕೋನದಲ್ಲಿ ನೋಡಬಹುದು ಮತ್ತು ಇದು ಇಡೀ ವ್ಯವಸ್ಥೆಯಲ್ಲಿ ಎಂತಹ ಪರಿಣಾಮಗಳನ್ನು ಉಂಟುಮಾಡಬಹುದು ಎಂಬುದು ಈಗಿನ ಪ್ರಶ್ನೆ. ಆದ್ದರಿಂದ, ನ್ಯಾಯಾಧೀಶರುಗಳ ಆಯ್ಕೆ ಮತ್ತು ಅವರುಗಳ ಮೇಲೆ ಶಿಸ್ತಿನ ಕ್ರಮ ಇತ್ಯಾದಿಗಳ ಬಗ್ಗೆ ನ್ಯಾಷನಲ್ ಜುಡಿಷಿಯಲ್ ಕಮಿಷನ್ ರಚನೆಯಾಗಬೇಕೆಂಬ ಅಭಿಪ್ರಾಯ ನ್ಯಾಯಾಂಗ ಸೇವೆಗಳಲ್ಲಿ ಸ್ವಲ್ಪ ಮಟ್ಟಿಗಾದರೂ ಸುಧಾರಣೆ ತರಬಹುದು.

ಇಂದಿನ ಸನ್ನಿವೇಶದಲ್ಲಿ ಕೆಲವೊಂದು ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳು ಮೈಸೂರಿನ ರೆಸಾರ್ಟ್‌ಗಳಲ್ಲಿ ಕಾಮಲೀಲೆಯಲ್ಲಿ ತೊಡಗಿದ್ದರೆಂಬ ಸುದ್ದಿಯನ್ನು ಪತ್ರಿಕೆಯಲ್ಲಿ ಓದಿ ಜನಸಾಮಾನ್ಯರು ಇಡೀ ನ್ಯಾಯಾಂಗ ವ್ಯವಸ್ಥೆಯ ಬಗ್ಗೆ

ಏನೆಂದಾರು? ನಾನು ಕಳೆದ ತಿಂಗಳು ನನ್ನದೇ ಆದಂತಹ ಪ್ರಕರಣಕ್ಕೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯಕ್ಕೆ ಹೋಗುತ್ತಿದ್ದಾಗ ಅಲ್ಲಿನ ಮುಖ್ಯ ದ್ವಾರದಲ್ಲಿ ಒಬ್ಬ ಅಮಾಯಕ ಹಳ್ಳಿಗ ಮುಖ್ಯ ದ್ವಾರಕ್ಕೆ ಕೈ ಮುಗಿದು ಒಳಗೆ ಪ್ರವೇಶಿಸಿದ್ದು ಇಂದೂ ಸಹ ಜನಸಾಮಾನ್ಯರು ನ್ಯಾಯಾಂಗದ ಬಗ್ಗೆ ಇರಿಸಿಕೊಂಡಿರುವ ಭಾವನೆಗೆ ಒಂದು ನಿದರ್ಶನ.

ವಿಪರ್ಯಾಸವೆಂದರೆ ಒಬ್ಬ ವ್ಯಕ್ತಿ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಕ್ಷಣವೇ ಅವರು ವಿಶೇಷ ಸವಲತ್ತುಗಳಿಗೆ ಅರ್ಹರಾಗುತ್ತಾರೆ. ಎಷ್ಟರ ಮಟ್ಟಿಗೆ ಎಂದರೆ, ಆ ವ್ಯಕ್ತಿಯನ್ನು ಆದಾಯ ತೆರಿಗೆ ಇಲಾಖೆಯವರು ಪ್ರಶ್ನಿಸುವಂತಿಲ್ಲ, ಲೋಕಾಯುಕ್ತರೂ ಪ್ರಶ್ನಿಸುವಂತಿಲ್ಲ, ಸಿಬಿಐ ಕೂಡ ಪ್ರಶ್ನಿಸುವಂತಿಲ್ಲ. ಕರ್ನಾಟಕದ ಮುಖ್ಯ ಮಂತ್ರಿಯೊಬ್ಬರು ತನ್ನ ಕಾಲಾವಧಿಯಲ್ಲಿ ಮದ್ರಾಸು ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿದ್ದಂತಹ ಕರ್ನಾಟಕದವರೇ ಆಗಿದ್ದ ಒಬ್ಬ ನ್ಯಾಯಾಧೀಶರ ಮನೆಯಲ್ಲಿ ತನ್ನ ಎಲ್ಲಾ ಹಣ ಮತ್ತು ಆಸ್ತಿಯನ್ನು ಇಟ್ಟಂತಹ ಪ್ರಕರಣವನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆ ಸಂದರ್ಭದಲ್ಲಿ ಸಿಬಿಐ ಅಧಿಕಾರಿಗಳು ಆ ನ್ಯಾಯಾಧೀಶರಿಗೆ ಇರುವಂತಹ ಸವಲತ್ತುಗಳನ್ನು ಗಮನಿಸಿ ಅಲ್ಲಿ ತನಿಖೆ ಮಾಡದೆ ವಾಪಸ್ಸು ಬಂದದ್ದು ಈಗ ಚರಿತ್ರೆ. ಸಂವಿಧಾನ ಇಂತಹ ಸವಲತ್ತುಗಳನ್ನು ನೀಡಿದ ಹಿನ್ನೆಲೆಯನ್ನು ಅವಲೋಕಿಸಿದಾಗ, ಯಾವುದೇ ರೀತಿಯ ಅಡೆತಡೆಗಳು, ಕಟ್ಟುಪಾಡು ಅಥವಾ ಭಯ-ಭೀತಿ ಇಲ್ಲದೆ ನ್ಯಾಯಾಧೀಶರು ತಮ್ಮ ಕಾರ್ಯನಿರ್ವಹಿಸಬೇಕೆನ್ನುವ ಉದ್ದೇಶದಿಂದಲೇ ಅವರಿಗೆ ಸಂವಿಧಾನವನ್ನು ರಕ್ಷಿಸುವ ಅಧಿಕಾರವನ್ನು ನೀಡಲಾಗಿದೆ ಯೆಂಬುದನ್ನು ಮನಗಾಣಬೇಕಾಗಿದೆ.

## ವಾಲ್ಮೀಕಿಯ ಅಳಲು

ಇಪ್ಪತ್ತೊಂದನೇ ಶತಮಾನದ
ಆದಿಯಲ್ಲಿ ನನ್ನ ಕಥಾನಾಯಕನ
ಸಲುವಾಗಿ ಹೀಗೆಲ್ಲಾ
ಹಿಂಸಾಚಾರ ಆಗತ್ತೇಂತ ಮುಂಚೇನೇ
ಗೊತ್ತಾಗಿದ್ರೆ... ಕಾಂಡ ಕಾಂಡಗಳಲ್ಲಿ
ಖಂಡಿತ ಅವನ ಚರಿತ್ರೆಯನ್ನು
ಬರೆದಿಡುತ್ತಿರಲಿಲ್ಲ!

ವಿ. ವಿಜಯೇಂದ್ರ ರಾವ್
೨೭-ಸಿ, ಟೈಪ್ III ಕ್ವಾರ್ಟರ್ಸ್, ಬ್ಲಾಕ್ ೨೦
ನೈವೇಲಿ-೬೦೭ ೮೦೩. (ತಮಿಳುನಾಡು)

ಆದರೆ ಇಂತಹ ಅಧಿಕಾರವನ್ನು ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳು ಯಾವ ರೀತಿ ಸದುಪಯೋಗ ಅಥವಾ ದುರುಪಯೋಗಪಡಿಸಿಕೊಂಡಿದ್ದಾರೆ ಎಂಬುದನ್ನು ಗಮನಿಸಿದಾಗ ತಮ್ಮ ಸ್ವಾರ್ಥ ಸಾಧನೆಗಾಗಿ, ತಮ್ಮ ಕಾಮಲೀಲೆಗಾಗಿ, ಇಡೀ ಪೊಲೀಸ್ ಇಲಾಖೆಯನ್ನು ಮೂಕ ಪ್ರೇಕ್ಷಕರನ್ನಾಗಿಸಿದ್ದರೆಂಬ ವರದಿಯನ್ನು ಪತ್ರಿಕೆಯಲ್ಲಿ ಓದಿ ನ್ಯಾಯಾಂಗದ ಬಗ್ಗೆ ಇಡೀ ಜನಸಮುದಾಯಕ್ಕೆ ಇದ್ದಂತಹ ಕಳಕಳಿಗಳಿಗೆ ಎಂತಹ ಪೆಟ್ಟು ಬಿದ್ದಿದೆ ಎಂಬುದನ್ನು ಊಹಿಸಬಹುದು. ಆ ವರದಿಗಳಲ್ಲಿ ಸಂತ್ಯಾಂಶ ವಿತ್ತೇ ಎಂಬುದು ಇಂದಿಗೂ ಊಹೆಯಾಗಿಯೇ ಉಳಿದಿದೆ.

ಇಂದಿನ ನ್ಯಾಯಾಂಗ ವ್ಯವಸ್ಥೆಯಲ್ಲೂ ಸುಧಾರಣೆಗಳಾಗಬೇಕಾಗಿರುವುದು ಇಂದಿನ ತುರ್ತು ಅಗತ್ಯವಾಗಿದೆ. ಈವರೆಗೂ ಆಗಿರುವುದು ಅತಿ ಸ್ವಲ್ಪ. ಹಾಗೆಯೇ ನ್ಯಾಯಾಂಗದ ಕಾರ್ಯವಿಧಾನಗಳೂ ಸಮುದಾಯದ ಮುಕ್ತ ಚರ್ಚೆಗೆ ಮತ್ತು ಟೀಕೆಗಳಿಗೆ ಗುರಿಯಾಗಬೇಕೇ ಎನ್ನುವುದು ಈಗ ಚರ್ಚಿತವಾಗುತ್ತಿರುವ ವಿಷಯ. ಆದರೆ ಈ ಪ್ರಕ್ರಿಯೆಗೆ ನ್ಯಾಯಾಂಗ ನಿಂದನೆ ಕಾನೂನು ಅಡ್ಡ ಬರುತ್ತದೆಯೇ? ಈ ಕಾನೂನು ನಿಂದನೆ ಕಾಯ್ದೆಯಡಿಯಲ್ಲಿ ನ್ಯಾಯಾಧೀಶರ ಮತ್ತು ನ್ಯಾಯಾಲಯದ ಸ್ಥಾನಮಾನವನ್ನು ಪರಮೋಚ್ಚ ಮಟ್ಟಕ್ಕೇರಿಸಿ ಅಂದರೆ ಕಾನೂನು ತಜ್ಞರು ತಿಳಿದಂತೆ ಇದನ್ನು ಸಂವಿಧಾನಕ್ಕಿಂತಲೂ ಹೆಚ್ಚಿನ ಮಟ್ಟಕ್ಕೇರಿಸುವುದರಿಂದ ಈ ಕಾನೂನು ವ್ಯವಸ್ಥೆಯ ಬಗ್ಗೆ ಜನಸಾಮಾನ್ಯರು ಹಾಗಿರಲಿ, ತಜ್ಞರೇ ಚಕಾರ ಎತ್ತುತ್ತಿಲ್ಲ. ಏಕೆಂದರೆ, ಈ ವ್ಯವಸ್ಥೆಯನ್ನು ಯಾವುದೇ ಉದ್ದೇಶದಿಂದ ಪ್ರಶ್ನಿಸಿದರೂ ಕೂಡ ನ್ಯಾಯಾಂಗ ನಿಂದನೆ ಆಗುತ್ತದೆಂಬ ಭೀತಿಯು ಎಲ್ಲರನ್ನು ಕಾಡುತ್ತದೆ.

ಎನ್. ಪಿ. ಜಗದೀಶ್
ನಂ. ೩೦. ೩ನೇ ಮೇನ್, ೨ನೇ ಕ್ರಾಸ್, ಕಲ್ಯಾಣನಗರ
ಬೆಂಗಳೂರು - ೫೬೦ ೦೭೨.

# ಬೆಂಗಳೂರು - ಮೈಸೂರು ಹೆದ್ದಾರಿ

'**ಕಾರಿಡಾರ್**' ಎಂದು ಕರೆಯಲಾಗುವ ಬೆಂಗಳೂರು-ಮೈಸೂರು ಹೆದ್ದಾರಿ ಯೋಜನೆಯ ವಿರುದ್ಧವಾಗಿ ಸಾಮಾನ್ಯವಾಗಿ ಕೆಳಕಂಡ ಅಂಶಗಳನ್ನು ವ್ಯಕ್ತಪಡಿಸಲಾಗುತ್ತಿದೆ :

೧. ಬೆಂಗಳೂರು-ಮೈಸೂರು ನಡುವಣ ರಾಜ್ಯ ಹೆದ್ದಾರಿ – ೧೭ನ್ನು ಚತುಷ್ಪಥ ರಸ್ತೆಯನ್ನಾಗಿ ಪರಿವರ್ತಿಸುವುದರಿಂದ, ಸಂಚಾರಕ್ಕೆ ಅನುಕೂಲ ಮಾಡಿಕೊಡಬಹುದು.
೨. ಮೈಸೂರು-ಬೆಂಗಳೂರು ನಡುವಣ ರೈಲು ಮಾರ್ಗವನ್ನು ಜೋಡಿ ಮಾರ್ಗವನ್ನಾಗಿ ಮಾಡುವುದರಿಂದ, ಶೀಘ್ರ ಪ್ರಯಾಣಕ್ಕೆ ಅನುಕೂಲ ಮಾಡಿಕೊಡಬಹುದು.
೩. ಕಾರಿಡಾರ್‌ನ ಉದ್ದಕ್ಕೂ ಐದು ಕಡೆಗಳಲ್ಲಿ ಉಪನಗರಗಳನ್ನು ನಿರ್ಮಿಸುವುದರಿಂದ ಸುತ್ತಮುತ್ತಲಿನ ಸಾಮಾಜಿಕ ವ್ಯವಸ್ಥೆಯ ಮೇಲೆ ದುಷ್ಪರಿಣಾಮ ಬೀರುತ್ತದೆ.
೪. ರಸ್ತೆಯ ಇಕ್ಕೆಲಗಳಲ್ಲಿ ಗೋಡೆ ನಿರ್ಮಿಸುವುದರಿಂದ, ರೈತರು ತಮ್ಮ ಜಮೀನುಗಳಿಂದ ದೂರವಾಗುತ್ತಾರೆ.
೫. ರೈತರು ತಮ್ಮ ಜಮೀನುಗಳಿಗೆ ಹೋಗಲು ೮-೧೦ ಕಿ.ಮೀ. ನಡೆದು ಹೋಗಬೇಕಾಗುತ್ತದೆ.
೬. ಗೋಡೆಗಳ ನಿರ್ಮಾಣದಿಂದ ಹಲವಾರು ಗ್ರಾಮಗಳು ಇಬ್ಭಾಗವಾಗಿ ಗ್ರಾಮೀಣ ಸಂಸ್ಕೃತಿಯ ನಾಶವಾಗುತ್ತದೆ.
೭. ಕಾರಿಡಾರ್ ರಸ್ತೆಯಲ್ಲಿ ಇತರ ವಾಹನಗಳಿಗೆ ಪ್ರವೇಶವಿಲ್ಲ.

ಮೊದಲನೆಯ ಅಂಶವು ಒಪ್ಪಬಹುದಾದುದೇ. ಇದಕ್ಕೂ ಖರ್ಚು ತಗಲುತ್ತದೆ. ಏಕೆಂದರೆ, ಸ್ವಲ್ಪವಾದರೂ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳಲೇ ಬೇಕಾಗುತ್ತದೆ, ಊರುಗಳ ಮಧ್ಯೆ ಮನೆಗಳನ್ನೂ, ಅಂಗಡಿ ಮುಂಗಟ್ಟುಗಳನ್ನೂ ಒಡೆದು ಪರಿಹಾರ ನೀಡಬೇಕಾಗುತ್ತದೆ, ಹಲವಾರು ಜನರು ತಮ್ಮ ತಲೆ ತಲಾಂತರಗಳಿಂದ ವಾಸ ಮಾಡುತ್ತಿದ್ದ ಮನೆಗಳನ್ನು ಕಳೆದು ಕೊಳ್ಳಬೇಕಾಗುತ್ತದೆ, ಈಗಿರುವ ಬಹುಪಾಲು ಎಲ್ಲ ಸಾಲು ಮರಗಳನ್ನೂ ಕಡಿದು ಹಾಕಬೇಕಾಗು ತ್ತದೆ. ಆದರೆ, ಇದನ್ನು ಎಂದಾದರೂ ಮಾಡಲೇಬೇಕಾದುದು. ಈಗಲೇ ಮಾಡಿದರೆ, ನಾಳೆಗಿಂತ ಖರ್ಚು ಕಡಿಮೆ. ಜನಸಾಮಾನ್ಯರಿಗೂ ತೃಪ್ತಿಯಾಗುತ್ತದೆ. ಆದರೆ ಒಂದು ಮಾತು. ಈ ಕೆಲಸವು ಕಾರ್ಯಗತವಾದರೂ, ಇನ್ನು ಒಂದೂವರೆ ಎರಡು ದಶಕಗಳಲ್ಲಿ ವೇಗದ ಮತ್ತು ಕ್ಷಿಪ್ರ ಪ್ರಯಾಣಕ್ಕೆ ಒಂದು ಕಾರಿಡಾರ್ ಬೇಕೇಬೇಕಾಗುತ್ತದೆ ಎಂಬುದನ್ನು ಗಮನಿಸಬೇಕು.

ಎರಡನೆಯ ಅಂಶವು ಅತ್ಯಂತ ಸಾಧುವಾದುದು. ಇದು ಜನಸಾಮಾನ್ಯರಿಗೆ ಬಹಳ ಉಪಯೋಗವಾಗುವುದು. ಉಳ್ಳವರಿಗೂ ಬಹಳ ಅನುಕೂಲವಾಗುವುದರಲ್ಲಿ ಸಂಶಯ ವಿಲ್ಲ. ಜೋಡಿ ಮಾರ್ಗದಿಂದ ಕ್ರಾಸಿಂಗುಗಳ ಉಪದ್ರವವಿಲ್ಲದೆ, ಸುಮಾರು ಎರಡೂವರೆ ಘಂಟೆಗಳ ಅವಧಿಯಲ್ಲಿ ಪಯಣಿಸಬಹುದು. ತಡೆರಹಿತ ರೈಲುಗಳು ಸುಮಾರು ಒಂದೂವರೆ ಘಂಟೆಗಳಲ್ಲೇ ಕ್ರಮಿಸಬಹುದು. ಹೆಚ್ಚು ರೈಲುಗಳನ್ನೂ ಓಡಿಸಬಹುದು.

ಆದರೆ, ಕರ್ನಾಟಕದ ಯಾವ ರೈಲು ಮಾರ್ಗ ಯೋಜನೆಯೂ ಭಾರತೀಯ ರೈಲ್ವೆ ಅಧಿ ಕಾರಿಗಳಿಗೆ, ಕಾರ್ಯಗತ ಯೋಗ್ಯವಲ್ಲ. ಆದರೆ ನಮ್ಮ ನೆರೆ ರಾಜ್ಯದ ಎಲ್ಲಾ ಯೋಜನೆಗಳೂ ಯೋಗ್ಯವಾದುವೇ! ಇದಕ್ಕೆ ನಮ್ಮ ಸರ್ಕಾರಗಳೇ ಕಾರಣ. ರೈಲ್ವೆ ಸಮಾಚಾರವು ಕೇಂದ್ರ ಸರ್ಕಾರಕ್ಕೆ ಸೇರಿದ್ದು, ನಮಗೇಕೆ ಅದರ ಉಸಾಬರಿ, ಎಂಬ ಧೋರಣೆ. ನಮ್ಮ ಶಾಸಕರಿಗಂತೂ ಇದರ ಬಗ್ಗೆ ಕಾಳಜಿಯೇ ಇಲ್ಲ. ರಾಜ್ಯದಲ್ಲಿ ಯಾವ ಪಕ್ಷವೇ ಅಧಿ ಕಾರದಲ್ಲಿರಲಿ, ಕೇಂದ್ರದಲ್ಲಿ ಯಾವ ಪಕ್ಷವೇ ಅಧಿಕಾರದಲ್ಲಿರಲಿ, ಎಲ್ಲ ಪಕ್ಷಗಳ ಶಾಸಕರೂ ಸಂಸದರೂ, ಒಟ್ಟಾಗಿ ಕಲೆತು, ರಾಜ್ಯದ ಹಿತಾಸಕ್ತಿಯ ಕಾರ್ಯಕ್ರಮಗಳು ಕೈಗೂಡುವುದಕ್ಕೆ ಶ್ರಮ ಪಡಬೇಕು. ರೈಲ್ವೇ ಮಂತ್ರಿಗಳಾಗಿದ್ದವರು ಬಹು ಮಂದಿ ಕರ್ನಾಟಕದವರೇ. ಆದರೆ ಒಬ್ಬ ವ್ಯಕ್ತಿ ಮಾತ್ರ ಕರ್ನಾಟಕಕ್ಕೆ ಬಹಳಷ್ಟು ಅನುಕೂಲ ಮಾಡಿದ್ದಾನೆ. ಹಲವಾರು ರೈಲು ಮಾರ್ಗಗಳು ವಿಶಾಲ ಗೇಜಾಗಿ ಪರಿವರ್ತನೆಗೊಂಡು, ಪ್ರತಿಷ್ಠಿತ ರೈಲುಗಳು ಓಡಾಡುತ್ತಿವೆ.

ಬೆಂಗಳೂರು-ಮೈಸೂರು ನಡುವಣ ಜೋಡಿ ಮಾರ್ಗಕ್ಕಾಗಲಿ, ಇದರ ವಿದ್ಯುದೀಕರಣ ಕ್ಕಾಗಲಿ, ಹಾಸನ-ಮಂಗಳೂರಿನ ಮಾರ್ಗ ಪರಿವರ್ತನೆಗಾಗಲಿ, ಬಿಜಾಪುರ-ಗದಗ ಮಾರ್ಗ ಪರಿವರ್ತನೆಗಾಗಲಿ, ಮೈಸೂರು-ಚಾಮರಾಜನಗರ, ಶಿವಮೊಗ್ಗ-ತಾಳಗುಪ್ಪ ಮಾರ್ಗ ಪರಿವರ್ತನೆಗಾಗಲಿ, ಶಿವಮೊಗ್ಗ-ಹೊನ್ನಾವರ, ಚಾಮರಾಜನಗರ-ಮೇಟುಪಾಳ್ಯಂ, ಮುಂತಾದ ಹೊಸ ಮಾರ್ಗಗಳಿಗಾಗಲೀ ನಮ್ಮ ಶಾಸಕರು, ಸಂಸದರು ಶ್ರಮಿಸುವರೇ?

ಮೂರನೆಯ ಅಂಶವನ್ನು ಎಲ್ಲರೂ ಒಪ್ಪಲೇಬೇಕು. ಈ ಐದು ಇಂದ್ರಪುರಿಗಳು ಭೋಗ ನಗರಗಳಾಗುತ್ತವೆ. ಸುತ್ತಲಿನ ಜನರ ಮೇಲೆ ದುಷ್ಪರಿಣಾಮ ಬೀರುತ್ತವೆ. ನೇರವಾಗಿ ಹೇಳುವುದಾದರೆ ದಾಸ್ಯ ಮತ್ತು ವೇಶ್ಯಾವೃತ್ತಿಯ ಕೇಂದ್ರಗಳಾಗಿಬಿಡುತ್ತವೆ. ಇವುಗಳನ್ನು ಕೈಬಿಟ್ಟರೆ, ಕಾರಿಡಾರ್ ನಿರ್ಮಿಸಲು ಬಹುತೇಕ ಜನರಿಗೆ ಅಭ್ಯಂತರವಿರುವುದಿಲ್ಲ. ನಮ್ಮ ಏಳಿಗೆಗೆ ಕಾರಿಡಾರ್ ಬೇಕೇ ಹೊರತು ವಿಲಾಸೀ ಉಪನಗರಗಳಲ್ಲ.

ನಾಲ್ಕನೆಯ ಅಂಶಕ್ಕೆ ಸಂಬಂಧಿಸಿದಂತೆ, ಯೋಜನೆಯಲ್ಲಿ ಮಾರ್ಪಾಟು ಮಾಡಿ, ಗ್ರಾಮಗಳ ಬಳಿಯೇ ಕಾರಿಡಾರ್ ಹಾದು ಹೋಗುವಂತೆ ಮಾಡಿ, ಅದನ್ನು ದಾಟಲು ಸಬ್‌ವೇಗಳನ್ನು ನಿರ್ಮಿಸಿದರೆ ಕಾರಿಡಾರ್‌ನಿಂದಾಗಬಹುದಾದ ಅನಾನುಕೂಲವನ್ನು ಮಿತಗೊಳಿಸಬಹುದು, ಅಲ್ಲದೇ ಐದನೆಯ ಅಂಶದ ಸಮಸ್ಯೆಯೂ ಬಗೆಹರಿಯುತ್ತದೆ.

ಆರನೆಯ ಅಂಶವು ಸರಿಯಾದರೂ, ಕಾರಿಡಾರು ಗ್ರಾಮದ ಮಧ್ಯೆ ಹೋಗದಂತೆ ನಿರ್ಮಿಸಬಹುದು. ಕಾರಿಡಾರೇನೂ ರೋಮನ್ ರಸ್ತೆಗಳಂತೆ ನೇರವಾಗಿಯೇ ಇರಬೇಕಾಗಿಲ್ಲ, ಗ್ರಾಮದ ಆಚೆ ಹಾದು ಹೋಗಬಹುದು.

ಏಳನೆಯ ಅಂಶವು ಬಹುಮುಖ್ಯವಾದರೂ ಕಾರಿಡಾರ್‌ನ ಉದ್ದೇಶವೇ ತಡೆರಹಿತ ವೇಗದ ಪ್ರಯಾಣ. ಇದರಲ್ಲಿ ಇತರ ನಿಧಾನಗತಿಯ ವಾಹನಗಳ ಪ್ರವೇಶವಾದರೆ ಹೇಗೆ ?

ವೇಗದ, ಶೀಘ್ರಗತಿಯ ಪ್ರಯಾಣದ ಸೌಲಭ್ಯದಿಂದ ಬಹುರಾಷ್ಟ್ರೀಯ ಕಂಪನಿಗಳವರಿಗೆ, ಅನಿವಾಸಿ ಭಾರತೀಯರಿಗೆ, ಸಿರಿವಂತರಿಗೆ ಮಾತ್ರ ಅನುಕೂಲ ಎನ್ನುವುದು ತಪ್ಪು. ಜನಸಾಮಾನ್ಯರಿಗೂ ಲಾಭವಿದೆ. ತಡೆರಹಿತ ಬಸ್ಸುಗಳಿಂದ, ತಡೆರಹಿತ ರೈಲುಗಳಿಂದ, ಮಿತವಾದ ತಡೆಯ ಬಸ್ಸು – ರೈಲುಗಳಿಂದ ಜನ ಸಾಮಾನ್ಯರಿಗೆ ಅನುಕೂಲ ವಾಗುತ್ತಿಲ್ಲವೇ ? ಮೈಸೂರು – ಬೆಂಗಳೂರು ನಡುವೆ ಒಂದು ಕಾಲದಲ್ಲಿ ತಡೆರಹಿತ ಬಸ್ಸು ಎರಡೂಕಾಲು ಘಂಟೆಗಳಲ್ಲಿ ಹೋಗುತ್ತಿತ್ತು. ಈಗ ಮೂರೂಕಾಲು ಘಂಟೆ ಕಾಲ ಬೇಕಾಗಿದೆ.

ಇದು ಕ್ಷಿಪ್ರತೆಯ, ವೇಗದ ಯುಗ. ನಾವು ಇನ್ನೂ ಎತ್ತಿನಗಾಡಿಗೆ ಅಂಟಿಕೊಂಡಿದ್ದರೆ ಆಗದು. ವೇಗವಾಗಿ, ನಿರಪಾಯವಾಗಿ ಸಂಚರಿಸಲು ಬೇಕಾದ ಅನುಕೂಲಗಳನ್ನು ಮಾಡಿಕೊಳ್ಳಲೇಬೇಕು. ಬೇರೆ ವಿಧಿಯಿಲ್ಲ.

ಒಟ್ಟಿನಲ್ಲಿ ಉಪನಗರಗಳ ನಿರ್ಮಾಣವನ್ನು ಕೈಬಿಟ್ಟು, ಕಾರಿಡಾರ್ ನಿರ್ಮಿಸಿದರೆ, ಎಂದಾದರಾಗಲಿ, ಇದರಿಂದ ಎಲ್ಲರಿಗೂ ಅನುಕೂಲವಿದೆ. ನಮ್ಮ ಪ್ರತಿರೋಧವು ಉಪ ನಗರಗಳಿಗೆ ಇರಬೇಕೇ ಹೊರತು, ಕಾರಿಡಾರ್ ರಸ್ತೆಗಲ್ಲ.

ಎಂ. ಜಿ. ಶ್ರೀನಿವಾಸನ್
೨೫೪, ೫ನೇ ಮೆಯಿನ್, ೧೪ನೇ ಕ್ರಾಸ್, ಜಯನಗರ, ಮೈಸೂರು-೫೭೦ ೦೧೪

# ಸಾವಿನಂಚಿನಲ್ಲಿ ಸಾರ್ವಜನಿಕ ಉದ್ಯಮಗಳು

**ರಾ. ನಂ. ಚಂದ್ರಶೇಖರ**

**ಕ**ರ್ನಾಟಕದಲ್ಲಿ ಈಗ ಸಾರ್ವಜನಿಕ ವಲಯ ಎಂದು ಕರೆಯಲಾಗುವ ಮಾದರಿ ಉದ್ಯಮವು, ಆಗಿನ ಮೈಸೂರು ರಾಜ್ಯದಲ್ಲಿ ಭದ್ರಾವತಿಯಲ್ಲಿರುವ ಮೈಸೂರು ಕಬ್ಬಿಣ ಮತ್ತು ಉಕ್ಕು ಉದ್ಯಮದಂತಹ ೩೭ ಸಂಸ್ಥೆಗಳು ಸ್ವಾತಂತ್ರ್ಯ ಪೂರ್ವದಲ್ಲೇ ಅಸ್ತಿತ್ವದಲ್ಲಿದ್ದವು. ಇವುಗಳ ಉದ್ದೇಶ ನಾಡಿನ ಪ್ರಕೃತಿ ಸಂಪತ್ತನ್ನು ನಾಡಿನ ಸರ್ವತೋಮುಖ ಬೆಳವಣಿಗೆಗೆ ಬಳಸುವುದು ಮತ್ತು ಉದ್ಯೋಗಗಳನ್ನು ಸ್ಥಳೀಯರಿಗೆ ನೀಡಿ ಅವರ ಬದುಕು ಹಸನು ಮಾಡುವುದು ಹಾಗೂ ಬರುವ ಆದಾಯವನ್ನು ನಾಡಿನ ಮೂಲಭೂತ ಸೌಲಭ್ಯ ಕಲ್ಪಿಸಲು ಬಳಸುವುದೇ ಆಗಿತ್ತು. ಈ ಉದಾತ್ತ ಉದ್ದೇಶದಿಂದ ಸ್ಥಾಪಿತವಾದ ಉದ್ಯಮಗಳು ಇಂದು ರೋಗಗ್ರಸ್ತ ಹಾದಿಯಲ್ಲಿ ಸಾಗಿ ಮುಚ್ಚುವ ಹಂತಕ್ಕೆ ತಲುಪಿವೆ. ಆರ್ಥಿಕ ಹಾಗೂ ಸಾಮಾಜಿಕ ಮೂಲ ಪರಿಕರದ ವಿಸ್ತರಣೆಗಾಗಿ ಸ್ಥಾಪಿತವಾದ ಈ ಉದ್ಯಮಗಳಿಗೊದಗಿರುವ ಸ್ಥಿತಿಯ ಬಗ್ಗೆ ಎಲ್ಲ ಕನ್ನಡಿಗರು ಚಿಂತಿಸಬೇಕಿದೆ.

ಕರ್ನಾಟಕದಲ್ಲಿ ಒಟ್ಟು ೮೦ ಸಾರ್ವಜನಿಕ ಉದ್ಯಮಗಳು ಅಸ್ತಿತ್ವದಲ್ಲಿದ್ದು ೨೦೦೦-೦೧ರ ಸಾಲಿಗೆ ಅವುಗಳ ಒಟ್ಟು ಬಂಡವಾಳ ೧೮೯೭೫.೭೯ ಕೋಟಿ ರೂ.ಗಳಾಗಿದ್ದು ೧,೬೮,೦೦೦ ಜನರಿಗೆ ಉದ್ಯೋಗ ಒದಗಿಸಿವೆ. ಆ ಸಾಲಿನ ವಹಿವಾಟು ೧೧,೨೫೮.೭೪ ಕೋಟಿ ರೂಪಾಯಿಗಳಾಗಿದ್ದು ೭೧.೧೫ ಕೋಟಿಗಳಷ್ಟು ನಷ್ಟ ಅನುಭವಿಸಿವೆ. ಪಕ್ಕದ ಮಹಾರಾಷ್ಟ್ರದಲ್ಲಿ ೩೯ ಸಾರ್ವಜನಿಕ ಉದ್ದಿಮೆಗಳಿದ್ದು ೩೦೦.೨೭ ಕೋಟಿ ಮತ್ತು ತಮಿಳುನಾಡು ೬೨ ಉದ್ದಿಮೆಗಳಿಂದ ೨೨.೧೭ ಕೋಟಿ ರೂಪಾಯಿ ಲಾಭಗಳಿಸಿವೆ. ಕರ್ನಾಟಕಕ್ಕೆ ಪ್ರತಿಷ್ಠೆಯನ್ನು ತಂದುಕೊಟ್ಟ ಸರ್ಕಾರಿ ಸ್ವಾಮ್ಯದ ಉದ್ಯಮಗಳು ಅಧಿಕಾರಶಾಹಿಗಳ ನಿರ್ಲಕ್ಷ್ಯ ಮತ್ತು ಆಳುವವರ ಸ್ವಾರ್ಥದಿಂದ ಒಂದೊಂದಾಗಿ ಮುಚ್ಚಿ ಹೋಗುತ್ತಿವೆ. ಸರ್ಕಾರವು ಈಗಾಗಲೇ ಚಾಮುಂಡಿ ಮೆಷಿನ್ ಟೂಲ್ಸ್, ಮೈಸೂರು ಮ್ಯಾಚ್ ಕಂಪೆನಿ, ಮೈಸೂರು ಲ್ಯಾಂಪ್ಸ್ ವರ್ಕ್ಸ್, ಎನ್.ಜಿ.ಇ.ಎಫ್.ಗಳನ್ನು ಮುಚ್ಚಲು, ಮೈಸೂರು ಎಲೆಕ್ಟ್ರಿಕಲ್ಸ್ ಇಂಡಸ್ಟ್ರಿಯನ್ನು ಖಾಸಗೀಕರಣ ಗೊಳಿಸುವ ಬಗ್ಗೆ ಆದೇಶ ಹೊರಡಿಸಿದೆ.ಕರ್ನಾಟಕ ಟಂಗ್‌ಸ್ಟನ್ ಮೋಲಿ ನಿಯಮಿತವನ್ನು ಕಾರ್ಯ ಚಟುವಟಿಕೆಗಳು ಪ್ರಾರಂಭವಾಗುವ ಮುನ್ನವೇ ಮುಚ್ಚಲಾಯಿತು. ಎನ್.ಜಿ.ಇ.ಎಫ್., ಮೈಸೂರು ಲ್ಯಾಂಪ್ಸ್ ಹಲವು ದಶಕಗಳು ದೊಡ್ಡ ಲಾಭವನ್ನು ಮಾಡಿದ್ದವು. ಅವು ನಷ್ಟದ ಹಾದಿ ಹಿಡಿದದ್ದಕ್ಕೆ ಕಾರಣ ಹುಡುಕಿ ಸರಿಪಡಿಸುವ ಪ್ರಯತ್ನ ಮಾಡಬೇಕಿತ್ತು ಎಂದು ತಜ್ಞರು ಹೇಳುತ್ತಾರೆ. ಇವುಗಳ ಈ ಸ್ಥಿತಿಗೆ ತಕ್ಷಣ ಹೊಳೆಯುವ ಸಂಗತಿ ಎಂದರೆ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ತಾಂತ್ರಿಕ ಮತ್ತು ಆಡಳಿತಾತ್ಮಕ ಮಾರ್ಪಾಡು ಮಾಡಿಕೊಳ್ಳದೆ ಹೋದದ್ದು, ಸ್ಪರ್ಧಾತ್ಮಕ ಪ್ರಪಂಚದಲ್ಲಿ ಮೆಟ್ಟಿನಿಲ್ಲಲು ಬೇಕಾದ ಉದ್ಯಮಶೀಲತೆ ಮತ್ತು ಬಂಡವಾಳದ ಕೊರತೆ. ಗಾಬರಿ ಹುಟ್ಟಿಸುವ ಸಂಗತಿ ಎಂದರೆ ಲಾಭದಾಯಕವಾಗಿರುವ ಕರ್ನಾಟಕ ಸಾಬೂನು ಕಾರ್ಖಾನೆಯನ್ನು ಖಾಸಗೀಕರಣ ಮಾಡುತ್ತಾರೆ ಎನ್ನುವ ಮಾತು. ಈ ಉದ್ಯಮಗಳ ಮುಚ್ಚುವಿಕೆಯಿಂದ ಲಕ್ಷಾಂತರ ಜನ ಉದ್ಯೋಗ ಕಳೆದುಕೊಂಡಿದ್ದಾರೆ.

ಕರ್ನಾಟಕದ ಸರ್ಕಾರ ಕೈಗಾರಿಕಾ ರಂಗವನ್ನು ವಿಸ್ತರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದೆ. ಇಂದು ಕರ್ನಾಟಕದಾದ್ಯಂತ ಆಯಕಟ್ಟಿನ ಸ್ಥಳಗಳಲ್ಲಿ ೧೫೯ ಕೈಗಾರಿಕಾ ಪ್ರದೇಶಗಳಿವೆ. ಬೆಂಗಳೂರಿನ ಪೀಣ್ಯ ಕೈಗಾರಿಕಾ ಪ್ರದೇಶ ಏಷ್ಯಾ ಖಂಡದಲ್ಲೇ ಹೆಚ್ಚು ವಿಸ್ತಾರ ಉಳ್ಳದ್ದು. ಇಲೆಕ್ಟ್ರಾನಿಕ್ ಸಿಟಿ, ಮಂಗಳೂರಿನ ಯಯ್ಯಾಡಿ, ಶಿವಮೊಗ್ಗ, ಬೆಳಗಾವಿ, ಎಲ್ಲೆಡೆ ಮಹತ್ವ ಪ್ರದೇಶಗಳಿವೆ, ತಂತ್ರಜ್ಞಾನದ ಉದ್ಯಾನ ಪ್ರಾರಂಭವಾಗುತ್ತಿವೆ. ಹೊಸ ಕೈಗಾರಿಕಾ ನೀತಿ, ತಾಂತ್ರಿಕ, ಹಣಕಾಸು ನೆರವಿಗೆ ಸಂಸ್ಥೆಗಳಿವೆ. ಇಷ್ಟಿದ್ದೂ ಏಕೆ ನಮ್ಮ ರಾಜ್ಯ ಕೈಗಾರಿಕೆಯಲ್ಲಿ ಪ್ರಥಮ ಸ್ಥಾನದಿಂದ ಏಳನೆ ಸ್ಥಾನಕ್ಕಿಳಿದಿದೆ ಎನ್ನುವುದು ಯಕ್ಷಪ್ರಶ್ನೆ ಆಗಿ ಉಳಿದಿದೆ.

ಕರ್ನಾಟಕ ಸರ್ಕಾರವು ರೂಪಿಸಿರುವ ಯೋಜನೆಗಳು ಯಶಸ್ವಿಯಾಗಿ ಅನುಷ್ಠಾನ ಆದರೆ ಪರಿಸ್ಥಿತಿ ಸುಧಾರಿಸುತ್ತದೆ. ಯೋಜನೆ ಯಶಸ್ವಿಯಾಗಿ ನಮ್ಮ ರಾಜ್ಯ ಕೈಗಾರಿಕಾ ಕ್ಷೇತ್ರದಲ್ಲಿ ಮರಳಿ ಉನ್ನತ ಸ್ಥಾನಕ್ಕೇರಬೇಕಾದರೆ, ಸರ್ಕಾರದ ಜೊತೆಗೆ ಸಾರ್ವಜನಿಕರು ಸಕ್ರಿಯವಾಗಿ ಪಾಲ್ಗೊಂಡು ಸಹಕರಿಸಬೇಕು.

ಸರ್ಕಾರದ ಕಾರ್ಯಗಳನ್ನು ಪ್ರಾಮಾಣಿಕವಾಗಿ ವಿಶ್ಲೇಷಿಸಿ, ಸೂಕ್ತ ಕಾಲದಲ್ಲಿ ತಿಳುವಳಿಕೆ ನೀಡುವ, ಎಚ್ಚರಿಸುವ ಕೆಲಸವನ್ನು ಸಂಘಸಂಸ್ಥೆಗಳು ಮಾಡಬೇಕು.

**ಉದ್ಯೋಗ:**

ಕರ್ನಾಟಕದಲ್ಲಿ ಉದ್ಯೋಗಕ್ಕೆ ಸಂಬಂಧಿಸಿದಂತೆ ಎರಡು ರೀತಿಯ ಸಮಸ್ಯೆಗಳಿವೆ. ರಾಜ್ಯದಲ್ಲಿರುವ ಎಲ್ಲ ಕೇಂದ್ರ ಕೈಗಾರಿಕೆ, ಕಚೇರಿಗಳಲ್ಲಿ ಕನ್ನಡಿಗರಿಗೆ ಸೂಕ್ತ ಅವಕಾಶ ದೊರೆಯುತ್ತಿಲ್ಲ. ಖಾಸಗೀ ಕ್ಷೇತ್ರದಲ್ಲೂ ಇದೇ ಪರಿಸ್ಥಿತಿ ಮುಂದುವರಿದಿದೆ. ಕನ್ನಡಿಗರಿಗೆ ಅವಕಾಶವಿದ್ದ ರಾಜ್ಯ ಸರ್ಕಾರಿ ಸ್ವಾಮ್ಯದ ಉದ್ಯಮಗಳೆಲ್ಲ ಒದೊಂದಾಗಿ ಮುಚ್ಚಿಹೋಗುತ್ತಿವೆ. ಇನ್ನು ಕೆಲವು ಖಾಸಗೀಕರಣ ವಾಗುತ್ತಿವೆ. ಇದು ಸಮಸ್ಯೆಯ ಒಂದು ಮುಖವಾದರೆ ಇನ್ನೊಂದು ಮುಖ ಇನ್ನೂ ಘೋರವಾಗಿದೆ. ಜಾಗತೀಕರಣದಿಂದ ಬದಲಾದ ಸನ್ನಿವೇಶದಲ್ಲಿ ಉದ್ಯೋಗಾವಕಾಶಗಳು ಕಮ್ಮಿಯಾಗುತ್ತಿವೆ. ಜನಸಂಖ್ಯೆ ಹೆಚ್ಚಳದಿಂದ ನಿರುದ್ಯೋಗಿಗಳು ಹೆಚ್ಚುತ್ತಿದ್ದಾರೆ.

ಉದ್ಯೋಗ ವಿನಿಮಯ ಕೇಂದ್ರಗಳ ಜೀವಂತ ದಾಖಲೆಗಳ ಆಧಾರದ ಮೇಲೆ ಒಟ್ಟು ಉದ್ಯೋಗಾಕಾಂಕ್ಷಿಗಳ ಸಂಖ್ಯೆಯು ನವೆಂಬರ್



ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ

### ಸಾರ್ವಜನಿಕ ಮತ್ತು ಖಾಸಗಿ ವಲಯದ ಉದ್ಯೋಗ ವಿವರ (ಲಕ್ಷಗಳಲ್ಲಿ)

| ವಿವರ | ಮಾರ್ಚ್ ೨೦೦೦ | ಮಾರ್ಚ್ ೨೦೦೧ | ಸೆಪ್ಟೆಂಬರ್ ೨೦೦೧ (ತಾತ್ಕಾಲಿಕ) | ಶೇಕಡವಾರು ಬದಲಾವಣೆ ಸೆಪ್ಟೆಂಬರ್ ೨೦೦೧ ಮಾರ್ಚ್ ೨೦೦೧ |
|---|---|---|---|---|
| ೧. ಕೇಂದ್ರ ಸರ್ಕಾರ | ೧.೩೩ | ೧.೨೯ | ೧.೨೮ | -೦.೭೮ |
| ೨. ರಾಜ್ಯ ಸರ್ಕಾರ | ೫.೫೬ | ೫.೬೧ | ೫.೬೧ | - |
| ೩. ಅರೆ ಕೇಂದ್ರ ಸರ್ಕಾರದ ಸಂಸ್ಥೆ | ೧.೮೪ | ೧.೮೦ | ೧.೭೩ | -೩.೮೯ |
| ೪. ಅರೆ ರಾಜ್ಯ ಸರ್ಕಾರದ ಸಂಸ್ಥೆ | ೧.೭೪ | ೧.೭೩ | ೧ .೭೦ | -೧.೭೩ |
| ೫. ಸ್ಥಳೀಯ ಸಂಸ್ಥೆ | ೦.೬೭ | ೦.೬೯ | ೦.೬೦ | -೧೩.೦೦ |
| ೬. ಖಾಸಗಿ ವಲಯ (ಕಾಯಿದೆ) | ೬.೮೦ | ೬.೯೨ | ೬.೮೩ | -೧.೩೦ |
| ೭. ಖಾಸಗಿ ವಲಯ (ಕಾಯಿದೆ ಅಲ್ಲದೆ) | ೦.೭೦ | ೦.೭೫ | ೦.೭೩ | -೨.೬೬ |
| ಒಟ್ಟು ಸಾರ್ವಜನಿಕ ವಲಯ | ೧೧.೧೪ | ೧೧.೧೩ | ೧೧.೦೧ | -೧.೦೮ |
| ಒಟ್ಟು ಖಾಸಗಿ ವಲಯ | ೭.೫೦ | ೭.೬೭ | ೭.೫೬ | -೧.೪೩ |
| **ಒಟ್ಟು** | **೧೮.೬೪** | **೧೮.೮೦** | **೧೮.೫೭** | **-೧.೨೨** |

೨೦೦೧ರ ಅಂತ್ಯದಲ್ಲಿ ೨೦.೨೧ ಲಕ್ಷಗಳಿದ್ದು ಈ ಸಂಖ್ಯೆಯು ಮಾರ್ಚ್ ೨೦೦೧ರಲ್ಲಿ ೧೯.೫೨ ಲಕ್ಷಗಳಿದ್ದು ಈ ಅವಧಿಯಲ್ಲಿ ೩.೫೩%ರಷ್ಟು ಏರಿಕೆ ಆಗಿದೆ. ಈ ಸಂಖ್ಯೆಯು ೧೯೯೬ರ ಏಪ್ರಿಲ್‌ನಲ್ಲಿ ೧೭.೪ ಲಕ್ಷವಿತ್ತು. ಅಂದರೆ ಸರಾಸರಿ ವರ್ಷಕ್ಕೆ ೧೮%ರಷ್ಟು ನಿರುದ್ಯೋಗ ಹೆಚ್ಚುತ್ತಿದೆ. ನಿರುದ್ಯೋಗಿಗಳಲ್ಲಿ ೧೫,೩೫೦ ಜನ ಸ್ನಾತಕೋತ್ತರ ಪದವೀಧರರು, ೧,೬೫,೪೮೦ ಪದವೀಧರರು, ವೃತ್ತಿಪರ ಶಿಕ್ಷಣ ಪಡೆದವರು ೧,೨೪,೫೯೦ ಜನ ಇದ್ದಾರೆ ಎಂಬುದು ಆತಂಕವನ್ನುಂಟು ಮಾಡುವ ಸಂಗತಿ ಆಗಿದೆ. ಉದ್ಯೋಗ ವಿನಿಮಯ ಕೇಂದ್ರದಲ್ಲಿ ದಾಖಲು ಮಾಡಿಸದವರ ಸಂಖ್ಯೆಯನ್ನೂ ತೆಗೆದುಕೊಂಡರೆ ಸಂಖ್ಯೆ ಇನ್ನೂ ಹೆಚ್ಚು ಆಗುತ್ತದೆ.

ಕೈಗಾರಿಕಾ ಗುಂಪುವಾರು ಸಂಘಟಿತ ವಲಯ ಉದ್ಯೋಗವನ್ನು ಗಮನಿಸಿದಾಗ ಸಾಮಾಜಿಕ ಮತ್ತು ವೈಯಕ್ತಿಕ ಸೇವೆಗಳಲ್ಲಿ ಉದ್ಯೋಗದ ಪ್ರಮಾಣವು ಮಾರ್ಚ್ ೨೦೦೧ರ ಅಂತ್ಯಕ್ಕೆ ೭.೫೨ ಲಕ್ಷಗಳಿದ್ದು ಸೆಪ್ಟೆಂಬರ್ ೨೦೦೧ರ ಅಂತ್ಯಕ್ಕೆ ೭.೫೪ ಲಕ್ಷಗಳಿಗೆ ಏರಿದೆ. (ಸುಮಾರು ೨೦೦೦ ಹೆಚ್ಚಳ). ಉತ್ಪಾದನಾ ವಲಯದ ಪ್ರಮಾಣವು ಮಾರ್ಚ್ ಅಂತ್ಯದಲ್ಲಿ ೬.೧೮ ಲಕ್ಷಗಳಿದ್ದು ಸೆಪ್ಟೆಂಬರ್ ೨೦೦೧ರ ಅಂತ್ಯದಲ್ಲಿ ೬.೦೧ ಲಕ್ಷ ಎಂದರೆ ಸುಮಾರು ೧೭೦೦೦ದಷ್ಟು ಇಳಿಕೆ ಕಂಡುಬರುತ್ತದೆ. ಹಣಕಾಸು, ವಿಮೆ, ಆಸ್ತಿ ಮತ್ತು ವ್ಯವಹಾರಗಳ ಸೇವೆಗಳಲ್ಲಿನ ಉದ್ಯೋಗವು ೧.೩೮ ಲಕ್ಷಗಳಿಂದ ಸುಮಾರು ೧.೩೩ ಲಕ್ಷಗಳಿಗೆ ಇಳಿಕೆಯಾಗಿದ್ದು ಸುಮಾರು ೫೦೦೦ದಷ್ಟು ಇಳಿಕೆ ತೋರಿದೆ. ಉಳಿದ ವಲಯಗಳಲ್ಲಿ ಸ್ವಲ್ಪ ಇಳಿಕೆಯಾಗಿರುವುದು ಕಂಡುಬಂದಿದೆ.

ರಾ.ನಂ. ಚಂದ್ರಶೇಖರ
ಶ್ರೀಲಕ್ಷ್ಮಿ ಕೆಮಿಕಲ್ಸ್, ನಂ. ೬, ರಾಘವೇಂದ್ರ ಕಾಂಪ್ಲೆಕ್ಸ್, ೨ನೇ ಅಡ್ಡರಸ್ತೆ, ಸಿಕೆಜಿ ಗಾರ್ಡನ್, ಬೆಂಗಳೂರು-೫೬೦ ೦೨೭

## ಸಾದರ ಸ್ವೀಕಾರ

**ವೀರೇಂದ್ರ ಪಾಟೀಲ** (ಜೀವನ)
*ಸಂ: ಬಾಲಚಂದ್ರ ಜಯಶೆಟ್ಟಿ*
**ಪುಟ : ೧೨೪** **ಬೆಲೆ : ರೂ. ೬೦**
**ಸಿದ್ಧಲಿಂಗೇಶ್ವರ ಪ್ರಕಾಶನ**
ಸರಸ್ವತಿ ಗೋದಾಮು, ಗುಲ್ಬರ್ಗಾ-೫೮೫ ೧೦೧

**ಡಾಲರ್ ಹಕ್ಕಿ** (ಕವನ ಸಂಕಲನ) *ಶಾಂತಾ ನಾಗರಾಜ್*
**ಪುಟ : ೭೨** **ಬೆಲೆ : ರೂ. ೩೬**
**ಆತ್ರೇಯ ಪ್ರಕಾಶನ**, ನಂ. ೪೧೬೧, ೯ನೇ ಮೆಯಿನ್
ಸುಬ್ರಮಣ್ಯನಗರ, ಬೆಂಗಳೂರು-೫೬೦ ೦೨೧

**ಬಿಡುಗಡೆ** (ಲೇಖನ ಸಂಗ್ರಹ) ಸಂ : ಕಗ್ಗೆರೆ ಪ್ರಕಾಶ್
**ಪುಟ: ೧೬೦** **ಬೆಲೆ: ರೂ ೫೦**
**ಕಗ್ಗೆರೆ ಪ್ರಕಾಶನ**, ಅಂಚೆ : ೯೧೫೧, ಕೆಂಪೇಗೌಡನಗರ, ಮಾಗಡಿ ಮುಖ್ಯರಸ್ತೆ, ವಿಶ್ವನೀಡಂ, ಬೆಂಗಳೂರು-೯೧

**ಜಾಲಿಯ ಹೂವು** (ಕವನ ಸಂಕಲನ)
*ಪ್ರಕಾಶ್ ಗಂಗಲವಾಯಿ ಪಾಳ್ಯಂ*
**ಪುಟ : ೭೮** **ಬೆಲೆ : ರೂ. ೬೦**
**ಶ್ರಮ ಸಂಸ್ಕೃತಿ ಪ್ರಕಾಶನ**, ದೇವನೂರು ರಸ್ತೆ,
ವಿಜಯನಗರ, ತುಮಕೂರು-೫೭೨ ೧೦೨

**ಕವಿ ವಾಲ್ಮೀಕಿಗಾದ ಅನ್ಯಾಯ** (ಶೋಧನಾತ್ಮಕ ಕೃತಿ)
ಗ. ಸು. ಭಟ್ಟ ಬೆತ್ತಗೇರಿ
**ಪುಟ : ೬೪** **ಬೆಲೆ: ರೂ. ೪೦**
**ಸುಮುಖ ಪ್ರಕಾಶನ**, 'ಕಾವ್ಯಶ್ರೀ' ಮೂರು ಕಾವೇರಿ, ಕಿನ್ನಿಗೋಳಿ-೫೭೪ ೧೫೦, ದ.ಕ.ಜಿಲ್ಲೆ

**ಮಾರುಕಟ್ಟೆಯಲ್ಲಿ ಬಳಕೆದಾರ** (ಲೇಖನಗಳು)
*ವೈ. ಜಿ. ಮುರಳೀಧರ*
**ಪುಟ : ೪೦** **ಬೆಲೆ: ರೂ. ೧೬**

**ಆಪತ್ಕಾಲಕ್ಕೆ ಅಂತರ್ಜಾಲ** (ಲೇಖನಗಳು)
*ಎನ್. ಪಿ. ಶ್ರೀಕಾಂತ*
**ಪುಟ : ೪೮** **ಬೆಲೆ: ರೂ. ೨೦**

**ಬಣ್ಣದ ಮೀನು** (ಮಕ್ಕಳ ಕಥೆಗಳು)
*ಪಳಕಳ ಸೀತಾರಾಮಭಟ್ಟ*
**ಪುಟ : ೪೮** **ಬೆಲೆ: ರೂ. ೨೦**

**ನಾಳೆ ನಮ್ಮದು** (ಲೇಖನ ಸಂಗ್ರಹ) ಜಾನಕಿ ಸುಂದರೇಶ್
**ಪುಟ : ೭೨** **ಬೆಲೆ : ರೂ. ೩೦**
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು:*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ: ೫೧೫೯, ಬೆಂಗಳೂರು-೧

**ಜೀವನ ಜೋಕಾಲಿ** (ಕವನ ಸಂಕಲನ)
ನಾಗೇಂದ್ರ ಬಿರಾದಾರ
**ಪುಟ : ೭೦** **ಬೆಲೆ: ರೂ. ೩೨**
ಶರತ್ ಪ್ರಕಾಶನ, ಮಂಠಾಳ-೫೮೫ ೪೧೯, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

**ಆಂಜನೇಯ** (ಸ್ತೋತ್ರ ಸಂಗ್ರಹ)
*ಸಂ: ಟಿ. ವಿ. ಮೆಂಕಟರಮಣಯ್ಯ*
**ಪುಟ : ೧೨೦** **ಬೆಲೆ: ರೂ. ೫೦**
**ಟಿ. ವಿ. ವೆಂಕಟರಮಣಯ್ಯ**, ಇಡಬ್ಲ್ಯುಎಸ್-೨೧೮, ಕೆ.ಎಚ್.ಬಿ. ಕಾಲೋನಿ, ೩ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು-೫೬೦ ೦೭೯

**ಹೂವುಗಳಿಗೊಂದು ಪತ್ರ** (ಲೇಖನಗಳು)
*ಸಿ. ಕೆ. ಶಶಿಕಲಾ*
**ಪುಟ : ೬೨** **ಬೆಲೆ : ರೂ. ೪೫**

**ಮುಕ್ತಾಹಾರ** (ಮುಕ್ತಕಗಳು) *ಸಿ. ಪಿ. ಕೆ.*
**ಪುಟ : ೭೬** **ಬೆಲೆ : ರೂ. ೫೦**

**ಚಿಕ್ಕೆ ಚೂರು** (ಹನಿಗವನಗಳು) *ಸಿ. ಪಿ. ಕೆ.*
**ಪು: ೧೨೪** **ಬೆಲೆ: ರೂ. ೬೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಚಿತ್ರಭಾನು ಪ್ರಕಾಶನ**, ೨೨೬೫/೧೯, 'ಭಾರತಿ'
೬ನೇ ಅಡ್ಡರಸ್ತೆ, ವಿನಾಯಕನಗರ, ಮೈಸೂರು-೫೭೦ ೦೧೨

**ಪುಟ್ಟಾಪುಟ್ಟಿಯ ಹಾಡುಗಳು** (ಮಕ್ಕಳ ಪದ್ಯಗಳು)
ಅಶೋಕ ಚೊಳಚಗುಡ್ಡ
ಪುಟ : ೫೨ ಬೆಲೆ : ರೂ. ೨೫

**ಮಜಾಗಟಾ** (ಮಕ್ಕಳಿಗಾಗಿ ಮನರಂಜನೆ) ಎಂ. ಎಸ್. ಪೂಜಾರ
**ಪುಟ : ೪೮** **ಬೆಲೆ : ರೂ. ೧೫**

**ಕಾಮನ ಬಿಲ್ಲು** (ಮಕ್ಕಳ ಕವಿತೆಗಳು)
ಅರುಣಕುಮಾರ ರಾಜಮಾನೆ
ಪುಟ : ೩೦ ಬೆಲೆ: ರೂ. ೨೫

**ಕನ್ನಡ ನೂರುಮಕ್ಕಳ ನೂರು ಕವನಗಳು**
(ಮಕ್ಕಳ ಕವನಗಳು) *ಸಂ: ಶಂಕರ ಹಲಗತ್ತಿ*
**ಪುಟ : ೬೩** **ಬೆಲೆ : ರೂ. ೨೦**
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು:*
**ಚಿಲಿಪಿಲಿ ಪ್ರಕಾಶನ**, ೪ನೇ ಅಡ್ಡರಸ್ತೆ, ಶಿವಾನಂದನಗರ, ಧಾರವಾಡ-೫೮೦ ೦೦೧

# ಸುಧಾರಣಾ

**ಮಾರುತಿ ದಾಸಣ್ಣವರ**

ಶಿವಪುರದ ಹೊಲ್ಯಾರು ಈಗೀಗ ಸ್ವಲ್ಪ ಸುದಾರ್ಸಾಕ ಹತ್ಯಾರ; ಮೇಲ್ಜಾತ್ಯಾವ್ರ ಜೋಡೀನಽ ಸರಕಾರಿ ನಳದಾಗ ನೀರ ತುಂಬ್ತಾರ; ಹುಡುಗೋರ್ನ ಸಾಲೀಗಿ ಕಳಸ್ತಾರ; ''ಹುಡುಗಿ ಚೆಂದದಾಳ ಸೂಳಿ ಬಿಡ್ರ್ಯೋ'' ಅನ್ನೂ ಸಾಹುಕಾರರ ಹೇಸಿತನದ ಒಳಗುದಿ ಮಾತಿಗೆ, ಕಿಮ್ಮತ್ತ ಕೊಟ್ರೂ ಎಲ್ಲಾ ಹೆಣ್ಮಕ್ಕಳ್ನ ಮದಿವಿ ಮಾಡಿಕೊಟ್ಟಾರ. ಆದರೂ ಮೇಲ್ಜಾತಿಯವರ ಹರದ ಚಪ್ಪಲ್ ಗಟ್ಟಿಮಾಡಿ ಕೊಟ್ಟ ಅವರಿಂದ ತಂಗಳ ರೊಟ್ಟಿ ಬಳ್ಳೊಳ್ಳಿ ಖಾರ, ಉಪ್ಪಿನ ಕಾಯಿ ತಂದ ತಿನ್ನೂದು; ಹನಮಪ್ಪನ ಓಕಳಿಗೆ ಹಲಿಗಿ ಬಾರಿಸಿ, ಪೂಜಾರಿ ಮ್ಯಾಲಿಂದ ಒಗಿಯೂ ನೈವೇದ್ಯಕ್ಕ ಉಡಿ ಒಡ್ಡೂದು; ಹಳೇ ಗೌಡರ, ದೇಸಾಯರ ಮನಿಗೋಳಿಗಿ ಹೋಗಿ ಹಲಿಗಿ ಬಾರಿಸಿ ಕ್ಯಾಂ ಕ್ಯಾಂ ಕ್ಯಾಂಗುಡುಗುಡು..... ಅಂತ ಮುಗತಾಯ ಮಾಡಿ ಮುಜುರಿ ಮಾಡೂದು, ಹಿಂಗ ಕೆಲವೊಂದು ಸಂಪ್ರದಾಯ ಉಳಿಸಿಕೊಂಡ ಬಂದಾರ.

ಹೊಲಿಗೇರ್ಯಾಗ ಒಂದ ದೊಡ್ಡ ಬಸರೀ ಗಿಡಾ ಐತಿ, ಹಳೀದು. ಆ ಭೀಮಗಾತ್ರದ ಗಿಡದ ಕೆಳಗಽ ಹೊಲ್ಯಾರೆಲ್ಲ ಮೀಟಿಂಗ್ ಮಾಡ್ತಾರ. 'ಭೀಮ', 'ಕರ್‍ಯಾ', 'ಸಂತ' ಇವರೆಲ್ಲಾ ಅಲ್ಲೇ ಕುಂತ ತಮ್ಮ ನೋವಾ, ಆಪತ್ತಾ ಮಾತಾಡಿ ಬಾಯಿ ಚಟಾ ಮತ್ತ ದಣು ಆರಿಸಿಕೋತಾರ; ಅವರೊಳಗಽ ಒಬ್ಬ ಒಂದೀಟ ಸಾಲಿ ಕಲತಾಂವ ಅದಾನ. ಅಂವಽ ಹನುಮ. ಅಂವ ಯಾವಾಗೆಲ್ಲಾ ಸಾಲಿ, ಶಿಕ್ಷಣ, ಸರಕಾರಿ ಸ್ಕೀಮು, ಸುದಾರಣಾ ಅಂತನಽ ಮಾತಾಡತಿರತಾನ. ''ಕೇರ್‍ಯಾಗ ಒಂದ ಗುಡಿ ಇಲ್ಲಾ . ಒಂದು ಗುಡಿ ಕಟ್ಟಸಬೇಕು, ವರ್ಷಽಽ ಜಾತ್ರಿ ಮಾಡಬೇಕು, ಒಂದ ಕ್ವಾಣಾ ಕಡೀಬೇಕು'' ಅಂತ ಉಳದಾವ್ರ ಮಾತಾಡತಿರಬೇಕಾದ್ರ ಇಂವ ಬಂದು ಆ ಸ್ಕೀಮು, ಈ ಸ್ಕೀಮು, ಸುದಾರಣಾ ಅಂತ ಅವರಿಗಿ ಕಿರಿಕಿರಿ ಮಾಡಿ ಬಿಡ್ತಾನ. ಹಿಂಗಾಗಿ ಅಂವಂದ್ರ ಅವರ್‍ಯಾರಿಗೂ ಆಗಿ ಬರೂದಿಲ್ಲ.

ಹನುಮಗ ಎಷ್ಟೊಂದ ಕನಸದಾವು! ತನ್ನ ಜನಾ ಎಲ್ಲಾ ಓದುವಂಗಾಗಬೇಕು. ಎಲ್ಲಾರೂ ಸುದಾರಸಬೇಕು. ಹಿಂಗಽ ಏನೇನೋ. ಅಂವಗ ಒಬ್ಬ ಮುದಿಕಿ ಅವ್ವ, ಒಬ್ಬ ಮುಗ್ಧ ಹೇಂತಿ, ಒಂದ ಮಗಾ ಅದಾರ. ಅದರ 'ಶೆಟ್ಟೆಪ್ಪ' ಅನ್ನೂ ಹಳೀ ಹೆಸರ ಬಿಟ್ಟ ಇಂವಽ 'ಆನಂದ' ಅಂತ ಸುದಾರಿಸಿದ ಮಂದೀ ಹಾಂಗ ಅದನ ಬದಲ ಮಾಡ್ಯಾನ. ಆ ಹುಡುಗನೂ ಬಾಳ ಚುಳಕ ಐತಿ. ಯಾವಾಗೆಲ್ಲ ಏನರ ಒಂದ ಪ್ರಶ್ನೆ ಕೇಳಽತಿರತೈತಿ. ''ಯಪ್ಪಾ ನಾವ್ಯಾಕ ಊರಾನವರಿಗಿ 'ಮುಜರಿ' ಮಾಡಬೇಕು? ಅವರೆಲ್ಲಾ ಯಾಕ್ರೋ, ಏನ್ರ್ಯೋ ಅಂದ್ರೂ ನೀವ ಮಾತ್ರ ಓರೀಯಪ್ಪಾ, ಹೂನ್ರಿಯಪ್ಪಾ, ಅಂತೀರೆಲ್ಲಾ ಯಾಕ?'' ಹೀಂಗಽ ಏನೇನೋ. ಹನುಮ ''ನಮ್ಮ ಮಂದಿ ಸುದಾರ್ಸಬೇಕಪ್ಪಾ'' ಅಂತ ಉತ್ತರಾ ಹೇಳತಾನ.

* * *

ಮೂರೂ ಚೆಂಜೀ ಮುಂದ ಇದ್ದಕ್ಕಿದ್ದಾಂಗನಽ ಹೊಲ್ಯಾರ್ನ ಪಂಚಾಯಿತಿ ಕಟ್ಟೆಗಿ ಕರಿಸಿದರು. ಪಂಚಾಯಿತಿ ಕಟ್ಟೆಗಿ ಕರಸೂದು ಅಂದ್ರ ಏನೋ ದೊಡ್ಡ ತಪ್ಪ ಮಾಡಿದ್ಧಂಗಽನ, ಹೊಲ್ಯಾರೆಲ್ಲಾ ಗಡ್ಡ್ ಗಡ್ಡ್ ನಡಗಾಕಽ ಹತ್ತಿದರು. ಹನಮಗ ಮಾತ್ರ ಹಾಕ ಕರದಾರನ್ನೂದು ಥಟ್ಟನಽ ತಿಳಿದಽ ಹೋತು. ಹೊಲ್ಯಾರ ಕೇರಿಗೆಂತ ಒಂದ 'ಸಮಾಜ ಮಂದಿರ' ಮುಂಜೋರಾಗಿತ್ತು. ಅದರ ರೊಕ್ಕಾ ಗುಳುಂ ಮಾಡಬೇಕಂತ ಚೇರಮನ್ ಬಸಪ್ಪನಾರು ಒಂದಿಷ್ಟ ಹೊಲ್ಯಾರ ಹೆಬ್ಬಟ್ಟ ಒತ್ತಿಸಿಕೊಂಡ ಬಿಡಿಒ ಆಫೀಸಿಗೇ, ಮನೀಗೆ ಎಡತಾಕಾಕತ್ತಿದ್ದ. ಅದರ ಮರ್ಮ ಗೊತ್ತಾಗಿ ಹನುಮ, ಬಿಡಿಒ ಸಾಹೇಬರಿಗೆ ಬೆಟ್ಯಾಗಿ ವಿಚಾರ ಮಾಡಿದ. ಹೊಲ್ಯಾರಿಗಿ ಬರೂ ದುಡ್ಡ ಹೊಡೀಬೇಕಂತ ಹೊಂಚ ಹಾಕಿದ ಚೇರಮನ್ ಸಾಹೇಬರಿಗೆ ಹನುಮನ ಅಧಿಕ ಪ್ರಸಂಗತನದಿಂದ ಸಿಟ್ಟೂ ಬಂತು; ಅಸಹ್ಯನೂ ಆತು. ''ಇವನವ್ವನ ಈ ಹೊಲ್ಯಾ ಸೂಳಿಮಗಾ ಒಳೇ ಗಂಟಬಿದ್ದಲಾ'' ಅಂತ ಕೈ ಕೈ ಹಿಚಿಕಿಕೊಳ್ಳಾಕ ಹತ್ತಿದರು ಚೇರಮನ್‌ರು. ಈ ಮಂದಿರದ ದುಡ್ಡಿನ ಮ್ಯಾಲ ಗೌಡ್ರದೂ ಕಣ್ಣ ಬಿತ್ತು. ಆದರ ಓದಿದವ್ರಲ್ಲಾ ಬಿಟ್ಟಾವ್ರಲ್ಲಾ ''ದುಡ್ಡ ಬಂದಮ್ಯಾಲ ನೋಡಿದರಾತ'' ಅಂತ ಸುಮ್ನಿದ್ದರು. ಚೇರಮನ್ನರಿಗೂ ಗೌಡ್ರಿಗೂ ಮೊದಲಿಂದ್ಲೂ ಹಾಂವಿಗೆ ಮುಂಗ್ಲಿಗೆ ಇದ್ದಾಂಗಿತ್ತು. ಒಬ್ಬರನ್ನ ನೋಡಿದ್ರ ಒಬ್ರು ಗುರ್‍ರ್ಽಽ ಅಂತಿದ್ರು.

ಹೊಲ್ಯಾರೆಲ್ಲ ತೋಯಿಸಿಕೊಂಡ ಹದ್ದಿನ ಹಿಂಡಿನ್ಯಾಂಗ ಬುದುಬದು ಬಂದು ದೂರ ಕುತ್ರು. ಪೌಳೆಲ್ಲ ಬಿರ್‍ರ್ಽಽನ ಬಿಗದಿತ್ತು. ಊರ ಮಂದೆಲ್ಲಾ ಕೂಡಿದ್ರೂ ಹಾಲಿಗಿ ಹೆಪ್ಪ ಹಾಕಿದ್ಹಾಂಗಿತ್ತು. ಎಲ್ಲಾರೂ ಇವರ್ನಽ ಹರಕೊಂಡು ತಿನ್ನಾವ್ರಂಗ ನೋಡಾಕ ಹತ್ತಿದ್ರು. ನಾಕ ಬೇಗಳಾ ಬೇದ, ನಾಕ ಮಚ್ಚಲೇ ಹೊಡದರೂ ಸಹಿಸಿಕೊಳ್ಳೂ ಹೊಲ್ಯಾರಿಗೆ ಈ ಮೌನಾ ತಡಕೊಳ್ಳಾಕಾಗದಽ ಚಟ, ಚಟ ಚಡಪಡ ಸಾಕ ಹತ್ತಿದ್ರು. ಆಕಾರ ನೋಡಿಕೊಂಡ ಚೇರ್‌ಮನ್‌ರು ಎದ್ದ ನಿಂತ ಸುರು ಮಾಡಿದರು. ''ನೋಡ್ರೆಪಾ, ನಮ್ಮೂರಿಗೆ ಒಂದ ಸಮಾಜ ಮಂದಿರಾ ಮುಂಜೋರಾಗೇತಿ. ಲಗೂನಽ ಅದರ ಬಜೆಟ್ ಹಾಕಿಸಿ ಕಟ್ಟಡ ಚಾಲೂ ಮಾಡಸಬೇಕಂದ್ರ ಈ ಹೊಲ್ಯಾರ ಹನಮ ಅದಕ ಅಡ್ಡಗಾಲ ಹಾಕಾಕ ಹತ್ಯಾನ. ಅದು ಅಲ್ಲೇ ಹೊಲಿಗೇರ್‍ಯಾಗಽ ಆಗಬೇಕಂತಾನ; ಊರಾಗ ಕಟ್ಟಿಸಿದರ ನಾಕ ಮಂದಿ ಕುಂದ್ರಬೌದು ನಿಲ್ಲಬೌದು, ಹೋಗಿ ಅದನ್ನ ಹೊಲಿಗೇರ್‍ಯಾಗ ಕಟ್ಟಿದರ ಏನ ಬಂದಾಂಗಾತು?'' ಅಂತಂದು ತಮ್ಮ ಒಳಗುದಿ ತೋಡಿಕೊಂಡರು. ಆಗ ಉಳದ ಊರ ಹಿರ್‍ಯಾರು ಕಿಡಿಕಿಡಿ ಆದರು. ''ಇನ್ನ ನಂದೂ ಒಂದೀಟ ತೋರಿಸಿಕೋದಿದ್ರ ಈ ಚೇರಮನ್ ಬಸ್ಯಾ ಮಗಾ ಹೀರೋ ಆಕ್ಯಾನ'' ಅಂತಂದು ಸಮಯಕ್ಕ ಕಾದಾವ್ರಂಗ ಗೌಡ್ರು ಊರ



ಮಂದಿ ಸಿಟ್ಟಿಲ್ಲಾ ತಮಗಽ ಬಂದಾವ್ರಂಗ ''ಯಾಕ್ರೋ ಹೊಲ್ಯಾ ಸೂಳಿಮಕ್ಕಳಿರ್ರ್ಯಾ ಊರಾಗ ಇರಬೇಕಂತೀರ್ರ್ಯೋ ಏನ ಹಾಳಾಗಿ ಹೋಗಬೇಕಂತೀರ್ರ್ಯೋ? ಏನೋ ಇರ್ಲಿ ಅಂತ ಸರಕಾರಿ ನಳದಾಗ ನೀರ ತುಂಬಾಕ ಬಿಟ್ಟದ್ದು, ಸಾಲ್ಯಾಗ ನಿಮ್ಮ ಮಕ್ಕಳಾ ಓದಾಕ ಬಿಟ್ಟದ್ದು, ಮುಗಳ್ಯಾಗ ಸೊಕ್ಕ ಬಂದೈತೇನ್ರಲೇ, ನಿಮಗ್ಯಾಕ ಬೇಕ್ರ್ಯಾ ಸಮಾಜ ಮಂದಿರಾ'' ಅಂತ ಗುಡುಗಿದರು. ಹನುಮ ಧೈರೆ ಮಾಡಿ ''ಗೌಡರಽ ಅದು ಹೊಲ್ಯಾರಿಗೆಂತಽ ಸಪರೇಟ ಮುಂಜೋರಾಗೇತ್ರಿ'' ಅಂತ ಏನೇನೋ ಹೇಳಾಕ ಹೊಂಟ. ಪಟ್ಟನ ಸಂತ (ಹೊಲ್ಯಾರ ಹಿರ್ಯಾ) ಅವನ್ನ ದೂಡಿ ಪರಿಸ್ಥಿತಿ ಹತೋಟಿಗಿ ತರಾವ್ರಂಗ ಅಡ್ಡ ಬಂದ ಹೇಳಿದ: ''ಯಪ್ಪಾ ನಮಗೇನ ತಿಳಿತೈತ್ರಿ 'ಅಽ' ಅಂದ್ರೆ 'ಆಽ' ಬರಾಂಗಿಲ್ಲರೀ, ಎಲ್ಲಾ ಅಂವಽ ಮಾಡ್ಯಾನರಿ. ನಾವ ಹೊತ್ತ ಹೊಂಟ್ರ ನಿಮ್ಮ ಹೊಲದಾಗ ದುಡ್ಯಾವ್ರಿ, ನೀವ ಹೆಂಗ ಹೇಳ್ತೀರ್ರ್ಯೋ ಹಂಗಽ ಕೇಳ್ತೀವ್ರಿಯಪ್ಪಾ.'' ಇಷ್ಟ ಹೇಳಿ 'ಸಂತ' ಎರಡೂ ಕೈ ಮುಂದ ಮಾಡಿ ಉದ್ದಕಽ ದಂವೀದ ಕಾಲ ಬಿದ್ದ. ''ಅಲ್ಲೋ ಸಂತಾ, ಹಿಂಗ ಸಹನದಿಂದ ಕೇಳಿದರ ಬರೋಬರಿ ಆಗತಾವ. ಹನಮನಂಗ ಬೇವಾರ್ಸಿತನಾ ಮಾಡಿದರ ಹೆಂಗ? ನಾವಾಽ ಎಲ್ಲಾ ತಗೋತೀವೇನ? ನಿಮಗೂ ಅದರಾಗಽ ಒಂದೀಟ ಕೊಡತ್ತು.'' ಬಸಪ್ಪನಾರು ತಾವಽ ಹೊಲ್ಯಾರ ಪಾಲಿನ ದ್ರೇವ್ರನ್ನಾವ್ರಂಗ ಅಭಯ ನೀಡೇಬಿಟ್ರು. ''ಮುಗೀತಲ್ರೀಯಪ್ಪಾ ನಮಗೇನ ಒಂದ ಸಣ್ಣ ಗುಡಿಯಾದರೂ ಸಾಕರಿ ನಿಮ್ಮ ಹೆಸರು ಹೇಳಿಕೊಂಡ ಜಾತ್ರಿ ಮಾಡ್ತುರ್ರೀ'' ಅಂತ ಹೇಳಿ 'ಸಂತ' ಅದಕೊಂದ ಆಕಾರಾ ಕೊಟ್ಟೇ ಬಿಟ್ಟ.

ಮುಂದ ಮಾತಾಡೂದೇನೂಯಿರ್ಲಿಲ್ಲ. ಹೊಲ್ಯಾರಿಗೆಲ್ಲಾ ಗುಡ್ಡದಾಂಗ ಬಂದಿದ್ದು ಮಂಜಿನ್ಯಾಂಗ ಕರಿಗಿ ಹ್ವಾದಾಂಗಾತು. ಅಲ್ಲದಽ ಒಂದ ಗುಡಿ ಕಟ್ಟೂದು, ಜಾತ್ರಿ ಮಾಡೂದು, ಇದನೆಲ್ಲಾ ನೆನೆಸಿಕೊಂಡ ಖುಷಿ ಆತು. ಹನಮಗ ಕಣ್ಣಿಗ್ಗಿ ಕಾಳಮಾಸ ಬಂದಂಗಾತು. ಸುಮ್ಮಽನ ತಲಿ ಹಿಡಿಕೊಂಡ ಕುಂತಿದ್ದ. ಅವನೊಳಗಿನ ನೋವೆಲ್ಲಾ ದೊಡ್ಡದೊಂದ ನಿಟ್ಟುಸಿರಾಗಿ ಹೊರಗ ಬಂತು. ಅಂವ ಕಣ್ಣ ತೆರದ ನೋಡೂದರಾಗಽ ಹೊಲ್ಯಾರೆಲ್ಲಾ ಎದ್ದ ಹೋಗಿ ಚೇರಮನ್ ಬಸಪ್ಪನಾರಿಗೇ ಮತ್ತ ಗೌಡರಿಗೇ ದೂರದಿಂದ ನೆಲಾ ಮುಟ್ಟಿ ನಮಸ್ಕಾರ ಮಾಡಾಕ ಹತ್ತಿದ್ರು. ಹನಮ ಅವಮಾನಕ್ಕಿಂತಽ ತನ್ನ ಮಂದಿ ಎಂಥಾ ತಗ್ಗಿನ್ಯಾಗ ಬಿದ್ರು ಅನ್ನೂದು ಅರಿವಾಗಿ ಹಂಗಽ ಕಲ್ಲಿನ್ಯಾಂಗ ಕುಂತಽಬಿಟ್ಟಿದ್ದ. ಹನುಮನ್ನ ನೋಡಿ ಬಸಪ್ಪನಾರು ''ನೋಡ ಮಗನಾ ನಾನಽ ಗೆದ್ದಿ'' ಅನ್ನಾವ್ರಂಗ ಹೆಗಲ ಮ್ಯಾಲಿನ ಶಾಲ ಝಾಡಿಸಿ ಒಮ್ಮಿ ಕೆಮ್ಮಿ, ನಕ್ಕ, ಹೊಂಟಹೋದ್ರು. ಜನಾ ಎಲ್ಲಾ ಗಬ-ಗುಬು, ಗಬ-ಗುಬು ಏನೇನೋ ಮಾತಾಡಿಕೋತಽ ಅಲ್ಲಿಂದ ಬಯಲಾತು. ಹನುಮ ಎದ್ದ ನಿಂತ; ಅಷ್ಟೊತ್ತಾಗಲೇ ತನ್ನ ಸಮಂದೆಲ್ಲಾ ಕರ್ರಽಽನ ಕತ್ತಲದಾಗ ಕರಗಿ ಹೊಂಟಿದ್ದು; ಅವ್ರು ಅಂಥಾ ಕತ್ತಲದಾಗೂ ತಡವರಿಸದ್ದಾಂಗ ನೆಟ್ಟಗ ನಡ್ಯಾಕ ಹತ್ತಿದ್ರು; ''ಅವರಿಗೆ ಕತ್ತಲನ್ನೂದು ಎಷ್ಟು ಒಗ್ಗೇತೆಲಾ'' ಅಂತ ಅಂದಕೊಂಡ ಅವನೂ ಅವರ ಹಿಂದಽ ನಡದ, ಆ ಕತ್ತಲದಾಗ.

* * *

ಮರದಿವಸನಽ ''ಹೊಲ್ಯಾರ ಹನಮನ್ನ ಕಡೀತಾರಂತ'' ಅನ್ನೂ ಸುದ್ದಿ ರೆಕ್ಕಿ, ಪುಚ್ಚ ಪಡಕೊಂಡ ಗಾಳ್ಯಾಗ ಹಾರ್ಯಾಡ್ಯಾಕ ಹತ್ತು. ''ಎಲ್ಲಾ ಹೊಲ್ಯಾರೂ ಬಸಪ್ಪನಾರ ಕಾಲ ಹಿಡದಾರಂತ; ಇಂವಗೇನ ಬಂದಿತ್ತಪಾ ದುರಗವ್ವನ ಬ್ಯಾನಿ. ಹೋಗಿ ತಪ್ಪಾತರೀಯಪ್ಪಾ ಅಂದಿದ್ರ ಏನು ಮಾನ ಮುಕ್ಕಾಗಿತ್ತು? ಮದಲಽ ದೊಡ್ಡ ಮಂದಿ, ಏನ ಮಾಡ್ತಾರೋ ಏನೋ, ಇಂವ ಏನ ದೊಡ್ಡ ಸುದಾರಣಾ ಮಾಡಾಕ ಹೊಂಟಾನ ಸುದಾರಣಾ.'' ಇಂತಾ ಮಾತಗೋಳೆಲ್ಲಾ ಗಾಳ್ಯಾಗ ತೇಲ್ಯಾಡಿಕೋತ ಬಂದ ಮುದಿಕಿ ಸಾತವ್ವನ ಕಿವಿಗಿ ಬೀಳೂತಲೇ ಮುದಿಕಿ ಹಣಿ ಹಣಿ ಬಡಕೋತ ಬಡಗಿ ಊರಿಕೋತ ಹೋಗಿ ಚೇರಮನ್‌ರ ಕಾಲ ಹಿಡೀತು. ''ಯಪ್ಪಾ ನಮ್ಮ ಹನಿಮ್ಯಾನ್ನ ಏನೂ ಮಾಡಬ್ಯಾಡ್ರಿ, ನಾವೆಲ್ಲಾ ನಿಮ್ಮ ಅನ್ನಾ ಉಂಡ ಬದಿಕಿದಾವ್ರೀಯಪ್ಪಾ, ನಿನ್ನೆ ಹುಟ್ಟಿ ಇಂದ ಕಣ್ಣ ತೆರದಽತ್ರೀಯಪ್ಪಾ ಅದಕೇನ ಗೊತ್ರೀಯಪ್ಪಾ ನೀವ ಎಂಥಾ ದೊಡ್ಡವರಂತ'' ಎಂದು ಕಾಲಮ್ಯಾಗ ಉಳ್ಯಾಡಾಕ ಹತ್ತಿದಳು. ''ಅಂತೂ ತಮ್ಮ ಪ್ಲ್ಯಾನ ಬರೋಬರಿ ಮಾಡೇತಿ ಕೆಲಸಾ'' ಅಂತ ಮನಸಿನ್ಯಾಗ ಅಂದಕೊಂಡ ಚೇರಮನ್‌ರು ''ಇರ್ಲಿರ್ಲಿ ನಿನ್ನ ಮಗ್ಗ ಬುದ್ದಿ ಹೇಳ, ದೊಡ್ಡ ಪುಂಡಾಗ್ಯಾನಂವಾ ಇನ್ನೊಂದ ಸಲ ಅಂವೇನರಾ ಮಂದಿರದ ಸುದ್ದಿಗಿ ಬಂದಾ ಅಂದ್ರ ನೀನು, ನಿನ್ನ ಸೊಸಿ, ಮಮ್ಮಕ್ಳು ಬಿಕ್ಸಾ ಬೇಡಬೇಕಕ್ಕೈತಿ ಬಿಕ್ಸಾ'' ಅಂತ ಬೆದರಿಸಿ ಕಳಿಸಿದರು. ಮುದಿಕಿ ಗೌಡ್ರ ಹತೇಕ ಹೋದಳು; ಅವರೂ ಹಿಂಗಽ ಅಂದ್ರು.

ಮನಿಗಿ ಬಂದ ಮುದಿಕಿ ಅತಗೋತ ಕುತ್ತು. ಸಂಜೀತನಾ ದುಡದ ದಣದ ಹೆಣಾ ಆಗಿ ಮನಿಗಿ ಹನಮ ಬರೂದಕನಽ ಮುದುಕಿ ಸುರುವಽ ಮಾಡಿದಳು. ''ಬಾಳ ದಿರಿಬೇ ಬರೂ ಕೆಲಸಾ ಮಾಡೇದಿ ಬಾರಪಾ ಜೋಕಮಾರಾ, ಊರಾಗಽ ನಿನ್ನ ಕಡೀತಾರಂತ ಸುದ್ಯಾಗೇತಿ, ಮನ್ಯಾಗ ತಿನ್ನಾಕ ಕೂಳಿಲ್ಲಾ ಸುದಾರಣಾ ಮಾಡ್ತಾನಂತ ಸುದಾರಣಾ'' ಅಂತಂದು ಗೋಳೋ ಅಂತ ಅಳಾಕ ಹತ್ತಿದಳು. ಇದೇನೂ ತಿಳೀಲಾರ್ದಽ ಸುಮ್ಮನಽ ಪಿಳಿಪಿಳಿ ಕಣ್ಣ ಬಿಟಗೋತ ಕುಂತಿದ್ದ ಪುಟ್ಟ ಮಗು 'ಆನಂದ'ನ ನಾಲಗೀ ತುದೀ ಮ್ಯಾಲಽ ಒಂದ ಪ್ರಶ್ನೆ ಬಂತು; ಆದರ ಅಪ್ಪನ ಮಕಾ ನೋಡಿ ಕೇಳಾಕ ಧೈರೆ ಬರಲಿಲ್ಲ. ಮುದುಕಿ ಮುಂದವರದ ಹೇಳಿದಳು. ''ಇನ್ನ ಆ ಮಂದಿರದ ಸುದ್ದಿಗಿ ಹ್ವಾದಿ ಅಂದ್ರ ನನ್ನಾಣೆ, ನಿನ್ನ ಮಗನಾಣೆ.'' ಒಳಗ ಅವನ ಹೇಂತಿನೂ ಅಳಾಕಹತ್ತಿದ್ಳು.

* * *

ಹೊಲ್ಯಾರ ಹೆಸರಿಗೆ ದುಡ್ಡೇನೋ ಬಂತು. ಆದರ ಸಿಕ್ಕಿದ್ದು ಚೇರಮನ್ ಬಸಪ್ಪನಾರ ಕೈಯಾಗ. ಅವ್ರು ಅದರಾಗಿಂದ ಅರ್ಧಾ ತಿಂದ, ಉಳಿದ ಅರ್ಧಾದರಾಗ, ಅರ್ಧಾ ಹೊಲ್ಯಾರಿಗೆ ಕೊಡೂದಂತ ಠರಾವಾತು. ಗೌಡ್ರು ಲೆಕ್ಕಾ ಕೇಳಿದ್ದಕ್ಕೆ ''ಕಾಗದಪತ್ರಾ, ತಿರಿಗ್ಯಾಟ, ಲಂಚ, ಅದೂ ಇದೂ ಅಂತ ಖರ್ಚಾಗೇತಿ'' ಅಂದು ಏನೇನೋ ರೀಲ ಬಿಟ್ರು. ''ಮಗಾ ತಿಂದಾನ, ಖರೇ ಏನೇನೋ ಸುಳ್ಳ ಬೊಗಳಾಕಹತ್ಯಾನ, ಅವನವ್ವನ ಈ ಚೇರಮನ್‌ನ್ನು ಕಟಿಗೊಂಡ ಪಾಪ ಹೊಲ್ಯಾರ್ನ ಸಿಕ್ಕಾಪಟಿ ಬೇದ್ನಿ , ಆದರ ಈ ಮಗಾ ನನಗ ಏನೂ ಸಿಗದ್ಹಾಂಗ ಮಾಡಿದಲಾ'' ಅಂತಂದು ತಮ್ಮ ಅಸಮಾಧಾನದ ಬೆಂಕಿ, ಒಳಗಽ ಇಟಗೊಂಡ ಬುಸು ಬುಸು, ಬುಸುಗುಡಾಕ ಹತ್ತಿದರು. ''ಟೈಮು ಬರ್ಲಿ ತಡೀಲೇ ಮಗನಾ, ನಿನಗ ಮಾಡ್ತಾನ'' ಅಂದು ಕರಾ ಕರಾ ಹಲ್ಲ ತಿಂದ್ರು.

ಹೊಲಿಗೇರ್ಯಾಗ ದೊಡ್ಡ ಬಸರೀಗಿಡದ ಮುಂದ ಗುಡಿ ಕಟ್ಟಡ ಚಾಲೂ ಆತು. ಹೊಲ್ಯಾರಿಗೆಲ್ಲಾ ಹುರುಪಽ ಹುರುಪ. ಹನಮಗ ಮಾತ್ರ ಒಂದ ನಮೂನಿ ಆಗಿತ್ತು. ಅಂವಗೇನ ಆ ಕಟ್ಟಡದ ಕೆಲಸಕ್ಕ ಹೋಗಾಕ ಮನಸಽ ಬರಲಿಲ್ಲ; ಅಂವ ಹೋಗಲೂ ಯಿಲ್ಲ. ಆಗ ಹೊಲ್ಯಾರ ಹಿರ್ಯಾರೆಲ್ಲಾ ಒಂದ ಮಿಂಟಿಂಗ್ ಮಾಡಿ ಮುದಿಕಿ ಸಾತವ್ವನ ಕರದ ಹೇಳಿದರು. ''ನೋಡ ಚಿಗವ್ವಾ, ಇದ ದೇವರ ಕೆಲಸ. ಅದಕ್ಕಾಗಿ ಮನಿಗೊಂದಾಳ ನಿತ್ತ ದುಡ್ಯಾಕಹತ್ತಿದ್ದ್ಯೂ. ನಾಕಮಂದಿ ಬೇಕಂದೀ ಹನಮನ್ನ ಕೆಲಸಕ್ಕ ಕಳಸ; ಇಲ್ಲಂದ್ರ ನಿಮ್ಮನ್ನ ಸಮಾಜದಿಂದ ಹೊರಗಿಡತ್ತ್ಯೂ ನೋಡ'' ಎಂದು ಹೆಸರಿಸಿದರು. ಮುದುಕಿ ಮನಿಗೆ ಹೋಗಿ ಅತ್ತ ಕರದ, ಹನುಮನ್ನ ಗುಡಿ ಕೆಲಸಕ್ಕ ಕಳಿಸಿದಳು.

ಹನಮ ಅದಕ್ಕ 'ಗುಡಿ' ಅಂತಿರಲಿಲ್ಲ, ಸಮಾಜ ಮಂದಿರಂತಽನಽ ಅಂತಿದ್ದ. ಆದರೂ ಅದು ಗುಡಿ ರೂಪ ತಾಳಿಕೋತ ಬೆಳ್ಯಾಕಹತ್ತಿತು. ಹನಮನ ಕನಸಗೊಳೆಲ್ಲಾ ಆ ಸಮಾಜ ಮಂದಿರ ಅನ್ನೂ ಗುಡಿಯೊಳಗ ಒಂದೊಂದ ಹಾರ ಆಗಾಕ ಹತ್ತಿದ್ದು. ಸಮಾಜ ಮಂದಿರ ಕಟ್ಟಸಬೇಕು, ಅದರಾಗ ಗಾಂಧೀಜಿ, ಅಂಬೇಡ್ಕರ್‌ರ ಫೋಟೋ ಹಾಕಬೇಕು; ದೊಡ್ಡ ಸಾಹೇಬರ್ನ ಕರಸಬೇಕು; ಅವರಿಂದ ''ಜಾತಿ ಅನ್ನೂದು ಇಲ್ಲ, ಎಲ್ಲಾರೂ ಒಂದಽ'' ಅಂತ ಜನರಿಗೆ ತಿಳಿವಳಿಕಿ ಹೇಳಿಸಬೇಕು. ತನ್ನ ಜನರನ್ನ ಸುದಾರ್ಸಬೇಕು; ಅಂತ ಏನೇನೋ ಕನಸ ಇಟಗೊಂಡಿದ್ದ.

ಗುಡೀ ಮುಗೀತು; ಗೌಡ್ರು ದೇವರಿಗಿ ಒಂದ ಕ್ವಾಣಾನೂ ಬಿಟ್ರು. ಇನ್ನ ದೇವ್ರಾ ತಂದ ಕುಂಡ್ರಿಸಿ ಜಾತ್ರಿ ಮಾಡೂದೊಂದಽ ಬಾಕಿ ಇತ್ತು. ಅದಾಗಲೇ ದೇವ್ರು ಅವರಿವರ ಮೈಯಾಗ ಬಂದ ''ನನ್ನ ಯಾವಾಗ ತರತೀರ್ರ್ಯೋ'' ಅಂತ ಕೂಗ್ಯಾಡಾಕ ಹತ್ತಿದ್ದು. ಕೆಲವರ ಮೈಯಾಗ ದುರಗವ್ವ, ಕೆಲವರ ಮೈಯಾಗ ದ್ಯಾಮವ್ವಾ , ಮರೆವ್ವ, ಜಡೆಪ್ಪ, ಕರೆವ್ವ , ಹಿಂಗಽ ಮನಿಸಿಗಿ ಬಂದಾಗ ಬರಾಕ ಹತ್ತಿದ್ದೂ. ಕಡೀಗೂ ಈ ಕಾಂಪಿಟೇಶನ್‌ದಾಗ ದುರಗವ್ವನ ಗೆದ್ಳು.

ಜಾತ್ರಿ ಸಮೀಪ ಬಂದಾಂಗ ತಯ್ಯಾರಿನೂ ಜೋರಾಗೇ ನಡದಿತ್ತು. ಕಡೀಗೂ ದೇವ್ರಾ ತರೂ ಕೆಲಸ ಹನಮನ ಪಾಲಿಗೆ ಬಂತು. ಚೇರಮನ್‌ರ ಮತ್ತ ಗೌಡರ ಇಚ್ಛಾದಂಗ ಹರೇದ ಜೋಗ್ಯಾರ್‍ನ್ನ ಹಾಡಾಕ ಕರಿಸಿದರು. ಜೋಗ್ಯಾರ ಬಂದ ಕೂಡ್ಲೆ, ಊರ ಹಿರ್ಯಾರ ಅನಿಸಿಕೊಂಡಾವ್ರೆಲ್ಲಾ ವಾಸನೆ ಹಿಡಕೊಂಡ ಬರೂ ನಾಯಿ ಹಂಗ ಹೊಲೆಗೇರಿ ಕಡೆಗೆ ಧಾವಿಸಿ ಬಂದ್ರು. ದೇವ್ರ ಬಂದು ಅಗಸಿ ಬಾಗಲದಾಗ ಕುಂತಿತ್ತು. ಅದನ್ನ ಕರಕೊಂಡ ಬರಾಕ ಹಲಗಿ ಮ್ಯಾಳ ಮತ್ತು ಜೋಗತ್ಯಾರ್ನ ಕರಕೊಂಡ ಒಬ್ಬ ಭಗತನ್ನ ಬಂಡಾರ್ದಾಗ ಮುಣಗಿಸಿ ರೆಡಿ ಮಾಡಿ ಭಕ್ತ ಸಮೂಹ ಹೊಂಟಿತು.

ದೇವಿನ್ನ ಹೊತಗೊಂಡ ಭಕ್ತ, ಆವೇಶಕ್ಕ ಒಳಗಾದಾವ್ರಂಗ ಉಶ್ಽಽ, ಉಶ್ಽಽ ಅಂತಿದ್ದ. ಭಕ್ತಾದಿಗಳೆಲ್ಲಾ ದೇವೀ ಮೈಮಾದ ಮಬ್ಬಿನ್ಯಾಗ, ಹೊಗ್ಯಾಗ ನಡದಾಂಗ ನಡದಿದ್ರು. ಗುಡಿ ಸುತ್ತಿ ಬಂದ್ರೂ ದೇವಿ ಒಳಗ ಹೋಗಲಿಲ್ಲ. ಒಂದ ನೆತ್ತರ ಬಲಿ ಬೇಕಽ ಅಂತ ಹಟಾ ಹಿಡದಳು. ಗಡಬಡಿಸಿ ಓಡಿಹೋಗಿ ಒಂದ 'ಹುಂಜಾ' ತಂದ, ಕೊಯ್ದು ದೇವೀ ಮ್ಯಾಲ ನಿವಾಳಿಸಿ ಒಗದ್ರು. (ಅದಽ ಭೀಮನ ಮನ್ಯಾಗ ಗೌಡರಿಗೆ ಅಂದಿನ

ವಿಶೇಷ ಅಡಿಗ್ಯಾತು). ಕೂಡಲೇ ದೇವಿ ದುಡುದುಡು ಮೆಟ್ಟಿಲಾ ಹತ್ತಿ ಒಳಗ ಹೋಗಿ ಸಿದ್ಧಪಡಸಿದ ಗದ್ದಿಗೀ ಮ್ಯಾಲ ಆರಾಮ ಕುಂತ್ಲು. ಆಗ ಆಕೀ ಪೂಜಾರಿ ಯಾರ ಆಗ ಬೇಕು ಅನ್ನೂ ಗದ್ಲ ಸುರುವಾತು. ಪೂಜಾರಿ ತನಕ್ಯಾಗೇ ಕಳದ ಒಂದ ವಾರದಿಂದ 'ಸಂತಾ', 'ಭೀಮಾ' ಇಬ್ಬರೂ ಗುಡೀ ಕಸಾ ಹೊಡೀತಿದ್ರು; ನಾಽಽ ನೀಽಽ ಅನ್ನೂದರಾಗಽ ಬಲಿಷ್ಠನಾದ ಭೀಮನಽ ಗಂಟಿ, ಧೂಪಾರತಿ ಹಿಡಿದ ತಡಬಡ ತಡಬಡ ಕೈ ಅಳಿಗ್ಯಾಡಸಾಕ ಸುರುವಽ ಮಾಡಿದ. ತಕ್ಷಣ ಅವನ ಮೈಯಾಗ ದೇವಿ ಬ್ಯಾರೇ ಬಂದು ಕೂಗ್ಯಾಡಾಕಽ ಹತ್ತಿದಳು. ಆಗ 'ಸಂತ' ಮೆತ್ತಗಾದ.




ಹನಮ, ತಾನಽ ಹೊಳ್ಯಾಗ ಮುಣಗಿ ಮೊದಲ ತನ್ನ ಕಾಲಿಗಿ ಹತ್ತಿದ ಕಲ್ಲನ್ನಽ ಕೆಂಪ ಅರಿವಿ ಹೊಚ್ಚಿ ಪೂಜೆ ಮಾಡಿ ತಂದಿದ್ದು, ಈಗ ಅದಽ ಕಲ್ಲಽ ದೇವ್ಯಾಗಿ ಕುಂತಿದ್ದು, ಆಕಿ ಜಾತ್ರಿ ನಡದಿದ್ದು, ನೆನಿಸಿಕೊಂಡ ನಕ್ಕ, ಒಬ್ನ ಅದ ಯಾರಿಗೂ ಕೇಳಲಿಲ್ಲ; ಕೇಳಿದ್ರೂ ಯಾರಿಗೂ ತಿಳೀತಿರಲಿಲ್ಲ. ಅದಾಗಲೇ ಸೂರ್ಯನ್ನ ಕತ್ತಲ ನುಂಗಾಕ ಹತ್ತಿತ್ತು. ಕತ್ತಲ ಕೇರೀ ತುಂಬ ಮೆತ್ತಿಕೊಂಡ ಕೂಡ್ಲೆ ಗ್ಯಾಸುಗಳು ಹೊತ್ತಿಕೊಂಡವು. ಹಲಗಿ ಸಪ್ಪಳ ಜೋರಾತು. ಜ್ಯೋಗತ್ಯಾರೂ ತಮಗ ಬಂದಾಂಗ ಹಾಡಾಕ ಹತ್ತಿದ್ರು. ಎಲ್ಲಾರೂ ಒಂದ ನಮೂನಿ ಮೈಮ್ಯಾಗ ಬಂದಾವ್ರಂಗ ಕಾಣತಿದ್ರು. ಅಪ್ಪನ ಹತೇಕ ನಿಂತಿದ್ದ ಆನಂದ ಕೇಳಿತು "ಯಪ್ಪಾ ಸಮಾಜ ಮಂದಿರದಾಗ ದೇವ್ರಾ ಕುಂಡ್ರಸ್ತಾರೇನ?" ಕೇಳಿಯೂ ಕೇಳದವ್ರಂಗ ಹನಮ ಕಣ್ಣಬಿಟ್ಟ ಭೀಮನ ಮನೀಕಡಿಂದ ಬರೂ ಮಂದಿನ್ನ ನೋಡಾಕ ಹತ್ತಿದ್ದ. ಮಂದೀ ನಡು ಒಂದ ಕ್ವಾಣ ಇತ್ತು. ಅದರ ಕೊಳ್ಳಾಗ ಹಸರ ಹುಲ್ಲ ಕಟ್ಟಿದ್ರು. ಅದರ ಮುಂದ ಹಲಿಗಿ ಗತ್ತಿನ ಜೋಡಿ ಕುಣಕೋತಽ ಒಂದ ಮನಿಶ್ಯಾ ಕೈಯಾಗ ಹರತಂದ ಈಳಿಗಿ ಹಿಡಕೊಂಡ ಬರಾಕಹತ್ತಿತ್ತು. ಮೈ ತುಂಬ ಬಂಡಾರ. ಸಾಕ್ಷಾತ್ ಯಮದೈತನ ಅವತಾರ. ಹಲಗಿ ಸಪ್ಪಳ ಇನ್ನೂ ಜೋರಾತು. ಕ್ವಾಣ ದೇವೀ ಗುಡಿ ಸುತ್ತ ಹಾಕಿ ಬಂದ ದೇವಿ ಮುಂದ ನಿಂತ್ಯು. ಎರಡ ಹಗ್ಗಾ ಹಚ್ಚಿ ಅದನ್ನ ಹಿಡದಿದ್ರು. ಹಲಿಗಿ ಸಪ್ಪಳ ಇನ್ನೂ ಜೋರಾತು. ಜನಾ ಎಲ್ಲಾ ಕಲ್ಲಿನ ಗೊಂಬೀಹಂಗ ಉಸರ ಬಿಗಿ ಹಿಡದ ಗಪ್ಽಽಽನಽ ನಿಂತಿತ್ತು. ಈಳಿಗಿ ಹಿಡದ ವ್ಯಕ್ತಿ ದೇವಿಗಿ ಅಡ್ಡ ಬಿದ್ದು ಎದ್ದ ಬಂತು; ಕ್ವಾಣದ ಮೃತ್ಯು ಆಗಿ ಈಳಿಗಿ ಎತ್ತಿ.... ಒಂದ.... ಎರಡ.... ಮೂರ....ಬಂಡಾರ ಒಗದ್ರು; ಮೂರ ಕಡತಿನ್ಯಾಗ ಕ್ವಾಣೆನ ರುಂಡಾ, ಮುಂಡಾ ಬ್ಯಾರೇ ಆದವು. 'ದೇವಿ, ದೇವಿ' ಅಂದು ಬಂಡಾರ ಒಗದು ರಕ್ತಾ ಮುಚ್ಚಿದರು. "ದೇವಿ ಒಂದ ಹನಿ ನೆತ್ತರಾನೂ ನೆಲಕ ಬೀಳಗೊಡಲಿಲ್ಲ" ಅಂದ್ರು ಭಕ್ತಾದಿಗಳು. ಅಲ್ಲೀ ತನಕಾ ಬಿಗಿಹಿಡಿದ ಉಸರ ಸಡ್ಲಬಿಟ್ಟ, ದೇವಿಗಿ ನಮಸ್ಕಾರ ಮಾಡಿ ಭಕ್ತರೆಲ್ಲಾ ಚದುರಿದರು.

* * *

ರಾತ್ರಿ ಹನ್ನೊಂದ ಗಂಟೆ ಸುಮಾರಿಗೆ ಭಕ್ತರೆಲ್ಲಾ ಕ್ವಾಣದ ಅಡಿಗಿ ಉಂಡ ಕುಂಡಿಗಿ ಕೈ ಒರಿಸಿಕೊಂಡ ತಾಯಿ ಗುಡಿ ಮುಂದ ಜಮಾ ಆದರು. ಗೌಡರೂ ಭೀಮನ ಮನ್ಯಾಗ ಹುಂಜಿನ ಸಾರ ಉಂಡು ಬುದಗ್ಗಽನಽ ಹೊರಬಿದ್ದ, ಯಾರೂ ನೋಡಿಲ್ಲ ಅನ್ನೂದನ್ನ ಖಾತ್ರಿ ಮಾಡಿಕೊಂಡು, ಅವಸರಾ ಮಾಡಿ ಕತ್ತಲದಾಗ ಮರೀ ಆದ್ರು. ನಡುರಾತ್ರಿ ಹೊತ್ತಿಗಿ ತಾಯೀ ಗುಡಿ ಮುಂದ ಜೋಗ್ಯಾರ ಹಾಡಿನ ಪ್ರೋಗ್ರ್ಯಾಂ ಸುರು ಆತು. ಆಗ ಅದಕ್ಕೆಂದೇ ಬಂದಿದ್ದ ಕೆಲವು ಊರಾನ್ನ ಹುಡುಗೋರ ಗುಂಪು, ಕುಡದು, ಹರೇದ ಜೋಗ್ಯಾರ್ನ ಕಾಡಾಕ ಹತ್ತಿದರು. ಆಗ ಅಲ್ಲೇ ಕುಂತಿದ್ದ ಚೇರಮನ್‌ರಿಗೆ ಸಂಗಟ ಆತು. ಆ ಹುಡಿಗ್ಯಾರ ರಕ್ಷಕರ ತಾಂವಽಽ ಅನ್ನಾವ್ರಂಗ "ಏಯ್ ಹಂಗ್ಯಾಕ್ರ್ಯೋ ಕಿಸಬಾಯಿಗೊಳಾ ಮುಗಳ್ಯಾಗ ಹಲ್ಲ ಬಂದಾವೇನ, ಸುಮ್ಮ ಕುಂಡರ್‍ತಿರೋ ಏನ ಎದ್ದ ಹೊಕ್ಕೀರ್‍ಯೋಽ" ಎಂದು ದಬಾಯಿಸಿ ಬಿಟ್ರು. ಆ ಹುಡುಗರ ಗುಂಪಿನ್ಯಾಗ ಗೌಡರ ಮಗಾನೂ ಇದ್ದ. ನೆವದಾಗ ನೆವಾ ಅಂವ ಎದ್ದು ಚೇರಮನ್‌ರನ್ನ ಬಾಯ್ಗಿ ಬಂದಾಂಗ ಬೈಯ್ದ. ಸುದ್ದಿ ತಿಳದ ಗೌಡ್ರೂ ಧಾವಿಸಿ ಬಂದ್ರು. ಅವರ ಜೊತೆ ಒಂದ ಗ್ಯಾಂಗಽ ಇತ್ತು. ಅವರೂ ಸಿಟ್ಟಿನ್ಯಾಗ ಸಿಟ್ಟ ಹಿಂದಿನ ಸಿಟ್ಟೆಲ್ಲಾ ತಗದು "ಅವಳಿಕಿನ ನೋಡೇ ಬಿಡಬೇಕ" ಅಂತ ಹಲ್ಲ ಮಸಕೋತ ಬಂದಿದ್ರು. ಯಾರೋ ಹೋಗಿ ಚೇರಮನ್‌ರ ಮನ್ಯಾಗ ಹೇಳಿದರು. ಅವರ ಮನೀಕಡಿಂದನೂ ಒಂದ ಗ್ಯಾಂಗ ಬಂದಽ ಬಿಟ್ಟಿತು. ಎರಡೂ ಪಾರ್ಟಿ ಯುದ್ಧಕ್ಕಽ ನಿಂತಾಂಗಾತು. ಜಗಳಾತು, ಹೊಡದಾಟಾತು. ಆ ಮಂದಿ ಈ ಮಂದಿ ಕೂಡಿ ತಣ್ಣಗ ಮಾಡಿದರು. ಇಲ್ಲೀತನಕಾ ಪೂಜಾರಿ ಭೀಮನ ಮೈಯಾಗ ಮೂರು ಸಲ ಬಂದಿದ್ದ ದೇವಿ ಈಗ ಮಾತ್ರ ಗೌಡರ ಕಂಟ್ರೀ ಸಾರಾಯಿಯ ಮಾದಕತೆಗೆ ಮೋಹಗೊಂಡು, ಮತ್ತಳಾಗಿ ಮಲಿಗಿ ಬಿಟ್ಟಿದ್ಲು. ಅಂದ ರಾತ್ರಿ ಇಡೀ ಕೇರಿಗಿ ಕೇರಿನಽ ಗೌಡರ ಸರಾಯಿ ನಿಶೆದಾಗ ತೇಲ್ಯಾಡಾಕಹತ್ತಿತ್ತು.

* * *

ಎಲ್ಲಾ, ಹನಮ ಗೇನಿಸಿದಾಂಗಽ ಆಗಿತ್ತು. ಅಂವೇನ ಆವತ್ತ ಊಟಾ ಮಾಡಲಿಲ್ಲ. "ಈ ಗದ್ದಲದಾಗ - ನೀ, ಇಲ್ಲಿರೂದ ಬ್ಯಾಡ ನಡಿ' ಅಂತಂದು ಹನಮನ್ನ ಅವನ ತಾಯಿ 'ಸಾತವ್ವ' ಕರಕೊಂಡ ಬಂದ ಮನ್ಯಾಗ ಹಾಕಿ ಒಳಚಿಲಕಾ ಹಾಕಿದಳು. ಅಂವಗೇನ ರಾತ್ರೆಲ್ಲಾ ನಿದ್ದಿ ಬರಲಿಲ್ಲ. ಪಡಸಾಲ್ಯಾಗ ಹನಮನ ಹೇಂತಿ, ಸಾತವ್ವ ಮುದಿಕಿ, ಜಗಳದ ಬಗ್ಗೇನಽ ಏನೋ ಮಾತಾಡಾಕ ಹತ್ತಿದ್ರು. 'ಆನಂದ' ಏನೋ ಹೊಲ್ಯಾಕ ಹತ್ತಿತ್ತು. ಹನಮನ ಮನಸು ತನ್ನ ಮುರುದು ಬಿದ್ದ ಕನಸುಗಳ ಶೋಧದೊಳಗ ತೊಡಗಿತ್ತು. ಏನಾಗಬೇಕಾದದ್ದು ಏನಾತು!!, ಯಾಕಾತು? ಹಿಂಗಽ ಏನೇನೋ ಗೇಣಿಕಿ ಹಾಕೊತ್ತ ಒಂದ ನಿಟ್ಟುಸಿರ ಬಿಟ್ಟ; ಮಗ್ಗಲು ಬದಲಿಸಿದ. "ಯಲಾ ಇವನಽ ಇವೇಂನ ಹೊಲ್ಯಾಕ ಹತ್ಯಾನ ಈ ರಾತ್ರ್ಯಾಗ?" ಅಂತಂದು ಅದನ್ನ ಇಸಗೊಂಡ. "ಈ ಕಿಸೇ ಹರದಽತಿ ಹೊಲ್ಯಾಕತ್ತೇನಿ" ಎಂದು ಆ ಆನಂದ ತಂದು ಅಪ್ಪನ ಕೈಯಾಗ ಕೊಟ್ಟಿತು. ಹನಮ ಅದನ್ನ ನೋಡಿ ನಕ್ಕ. "ಹುಚ್ಚಾ ದಾರಕ್ಕ ಗಂಟಽ ಹಾಕಿಲ್ಲೋ ಹಿಂಗ ನೀ ಬೆಳ ತನಕಾ ಹೊಲದರೂ ಮುಗಿಯೂದಿಲ್ಲ ಮಗನಾ; ನೀ ಎಂದ ಸುದಾರಸ್ತೀಯೋ ಏನೋ" ಅಂದ. ಹುಡಗನಿಗೆ ಪಕ್ಕನಽ ನೆನಪಾತು. ಅದಽ ಪ್ರಶ್ನೆ, ಎಷ್ಟೋ ದಿನಗಳಿಂದ ಅವನ ತೆಲಿ ತಿಂತಿದ್ದ ಪ್ರಶ್ನೆ, ಕೇಳೇಬಿಟ್ಟ; "ಯಪ್ಪಾ, ಈ ಸುದಾರಣಾ, ಸುಧಾರಣಾ, ಅಂತಿತ್ತೀಯಲ್ಲಾ ಹಂಗಂದ್ರ ಏನು?" ಹನಮ ಒಂದ ಕ್ಷಣ ಗಲಿಬಿಲಿಗೊಂಡ. ತಕ್ಷಣ ಏನ ಹೇಳಬೇಕನ್ನೂದಽ ಅಂವಗ ತಿಳೀಲಿಲ್ಲ. ಯಾಕೋ ಏನೋ ಈ ಶಬ್ದಾನಽ ಈಗ ಹೊಸದಾಗಿ ಕೇಳಿದಂಗ ಅನಸಾಕ ಹತ್ತಿತು. "ನೀ ಈಗ ಮಲಕೋ, ರಾತ್ರಿ ಬಾಳ ಆಗೇತಿ, ನಾಳಿ ಹೇಳ್ತನ" ಅಂತಂದು ಹುಡುಗನ್ನ ಮಲಗಿಸಿದ. "ಹೌದು 'ಸುದಾರಣಾ' ಅಂದ್ರ ಖರೇನ ಏನು ? ಗುಡೀ ಅನ್ನೂ ಸಮಾಜಮಂದಿರ, ಅದರ ಮುಂದಿನ ಟೊಳ್ಳು ಬಸರೀಗಿಡ, ಗಂಟು ಹಾಕದ ಹೊಲಿಗಿ, ಸುದಾರಣಾ ಅಂದ್ರ ಏನು? ಅನ್ನೂ ಪ್ರಶ್ನೆ, ಇವೆಲ್ಲಾರೂ ಎಲ್ಲ್ಯೋ ಸಂಬಂಧ ಇದ್ದಾಂಗ ಅನಸಾಕಹತ್ತು.

* * *

ಬೆಳಕ ಹರ್‍ಯೂದರಾಗಽ ಭಾರೀ ಖತರ್‌ನಾಕ್ ಸುದ್ದಿ ಒಂದು ಊರಾಗ ಹಬ್ಬಿ ಬಿಟ್ಟಿತು. ನೀರಿಗಿ ಹೋದ ಹನಮನ ಹೇಂತಿ ಆ ಭಯಂಕರ ಸುದ್ದಿ ತಂದ ಹನಮಗ ಹೇಳೇಬಿಟ್ಲು. "ಚೇರಮನ್ ಬಸಪ್ಪನಾರ್ನ ಕಡದಾರಂತೆ!!" ಹನಮಗ ನಂಬಾಕಽ ಆಗಲಿಲ್ಲ. ಆದರೂ ಒಂದ ರೀತಿ ವಿಲಕ್ಷಣವಾದ ಆನಂದ ಆದಂಗಾತು. "ಯಾರ ಕಡದಿರಬಹುದು?" ಅಂತ ತೆಲಿ ಕೆರಕೊಳ್ಳೂದರಾಗಽ ಹುಡುಗ ಆನಂದ ಕಣ್ಣ ತಿಕ್ಕೋತಽ ಎದ್ದ ಬಂದ ಕೇಳಿತು. "ಯಪ್ಪಾ ನಿನ್ನಿ ಹೇಳ್ತನ ಅಂದಿದ್ದೆಲ್ಲಾ ಸುದಾರಣಾ ಅಂದ್ರ ಏನಂತ, ಹೇಳು." ಅಷ್ಟರೊಳಗಽಽ ಹನಮನ ಕಿವಿ ನೆಟ್ಟಗಾದುವು. ಧಪ್...ಧಫ್... ಬೂಟಿನ ಸಪ್ಪಳ!!! ಹನಮ ಹೊರಗ ಬಂದ. ಅವನ ಹಿಂದಿಂದ ಹುಡಗ, ಹನಮನ ಹೇಂತಿ, ಸಾತವ್ವ ಮುದಿಕಿ ಎಲ್ಲಾ ಬಂದ್ರು. ಪೊಲೀಸರು!!! ಇಕಾಡ್ಯಾಕ ಬಂದ್ರು ? ಅವರ ಜೋಡಿ ಗೌಡ್ರು, ಭೀಮ ಇದ್ರು. ಉಳದ ಹೊಲ್ಯಾರು ದೂರ ಗುಂಪಾಗಿ ನೋಡಕೋತ ನಿಂತಿದ್ರು. ಪೊಲೀಸರು ಬಂದು ಹನಮನ ಮುಂದ ನಿಂತ್ರು. ಭೀಮ ನಿದ್ದಿಗಣ್ಣಾಂದ ಎದ್ದವ್ರಂಗ "ಇಂವಽ ರಿಯಪ್ಪಾ ನಾ ಕಣ್ಣಾರಽ ನೋಡೇನ್ರಿ" ಅಂದ. ಹನಮ, ಅವನ ಹೇಂತಿ, ಅವ್ವ, ಮಗಾ ಏನೂ ತಿಳೀಲಾರ್ದ ಮುದ್ದ್ಯಾಗಿ ನಿಂತಿದ್ರು.

ಮಾರುತಿ ದಾಸಣ್ಣನವರ
ಕನ್ನಡ ಅಧ್ಯಾಪಕರು, ಜವಹರ ನವೋದಯ ವಿದ್ಯಾಲಯ, ಗಾಳೀಬೀಡು
ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ - ೫೭೧ ೨೦೧

"ಧರ್ಮವನ್ನು ಯಾರು ರಕ್ಷಿಸುವರೋ ಅವರನ್ನು ಧರ್ಮವು ರಕ್ಷಿಸುತ್ತದೆ", ಎಂಬ ನಾಣ್ಣುಡಿ ಉಂಟು. ಒಂದು ಕಾಲದಲ್ಲಿ ಹೀಗೆ ವಿಶಾಲವಾದ ಅರ್ಥ ವ್ಯಾಪ್ತಿಯನ್ನು ಹೊಂದಿದ್ದ ಮತಧರ್ಮಗಳು ಕ್ರಮೇಣ ಆ ವ್ಯಾಪ್ತಿಯನ್ನು ಕಳೆದುಕೊಂಡು ಸಂಕುಚಿತ ಅರ್ಥದಲ್ಲಿ ಇಂದು ನಿರೂಪಿತವಾಗುತ್ತಿವೆ. ಇವತ್ತಿನ ಜಾಗತಿಕ ಸಂದರ್ಭವನ್ನು ಗಮನಿಸಿದರೆ 'ಧರ್ಮ' ಎಂದರೆ 'ಪವಿತ್ರ' ಎಂಬ ಭಾವನೆಗಿಂತಲೂ ಬೆಚ್ಚಿಬೀಳಿಸುವ ಆಯಾಮವನ್ನು ಪಡೆಯುತ್ತಿದೆ. ಪೊರೆವ ತಾಯಿಯಂತೆ ಕಾಪಾಡಲು ಇದ್ದ 'ಧರ್ಮ' ಇಂದು ಸಿಡಿವ ಬಾಂಬಾಗಿ ಕೊಲ್ಲುವುದಕ್ಕೂ ಹೇಸುತ್ತಿಲ್ಲ. ನಮ್ಮ ಇತಿಹಾಸ ಮತ್ತು ವರ್ತಮಾನಗಳ ಆಗುಹೋಗುಗಳು ಈ ಮಾತನ್ನು ಸಮರ್ಥಿಸುತ್ತಿವೆ. ಮತಧರ್ಮಗಳನ್ನು ಯಾವ ಪೂರ್ವಗ್ರಹವೂ ಇಲ್ಲದೆ ತಾತ್ತ್ವಿಕ ಗಂಭೀರತೆಯಲ್ಲಿ, ರಾಜಕೀಯ ಹಾಗೂ ಸಾಂಸ್ಕೃತಿಕ ಕಾಳಜಿಯಲ್ಲಿ ವಿಶ್ಲೇಷಿಸುವುದು ತುರ್ತಾಗಿ ಆಗಬೇಕಾದ ಕೆಲಸ. ಈ ಹಿನ್ನೆಲೆಯಿಂದ ನೋಡಿದರೆ ಜೈನಮತೀಯನಲ್ಲದ ನನಗೆ ಮನುಷ್ಯ ವಿಚಾರ ದಕ್ಷನಾದರೆ, ವೈಷಮ್ಯವನ್ನು ದೂರ ಮಾಡಿದರೆ ತನಗೂ ಕ್ಷೇಮ, ತಾನಿರುವ ಸಮಾಜಕ್ಕೂ ಕ್ಷೇಮ. ಇಂಥ ಒಂದು ವೈಚಾರಿಕ ನೆಲೆಗಟ್ಟಿನ ಮೇಲೆ ಆತ್ಮ ವಿಕಸನದ ಮಾರ್ಗವಾಗಿ ಅಹಿಂಸೆಯ ಪರಿಕಲ್ಪನೆ ಮೂಡಿಬಂದಿದೆ. ವಿಚಾರಶೀಲರಾದ ಜೈನಾಚಾರ್ಯರು ಅಹಿಂಸಾ ತತ್ತ್ವವನ್ನು ಒಡಲು ಉಸಿರು ಒಂದೆಂಬಂತೆ ಜೈನ ಧರ್ಮದಲ್ಲಿ ಸಾಕಾರಗೊಳಿಸಿದ್ದಾರೆ. ಎಂದೇ ಅದು, 'ಅಹಿಂಸಾ ಪರಮೋ ಧರ್ಮಃ' ಎಂದು ಸಾರಿದೆ. "ಜೀವ ದಯೆ ಜೈನಧರ್ಮಂ, ಜೀವಹಿತ ನಂಬುವರ್ಗೆ ಹಿಂಸೆಯ ಮೋಹಂ ಭಾವಿತಮೇ ?" ಎಂದು ಉದ್ಗರಿಸಿದೆ. ಜೈನ ತತ್ತ್ವದ ಪ್ರಕಾರ ಲೋಕದಲ್ಲಿ ಜೀವಗಳು ಜನ್ಮ ತಾಳುವುದಕ್ಕೂ ಅವರು ಪಡುವ ಕಷ್ಟಸುಖಗಳಿಗೂ ಅವರ ಸಾಂಸಾರಿಕ ಪರಿಭ್ರಮಣೆಗೂ ಕಾರಣವೆಂದರೆ ಅವರವರ ಕರ್ಮ ಪರಿಪಾಕವೇ. ಯೋಗಮಾರ್ಗದಿಂದ ಕರ್ಮವನ್ನು ಸವೆಸಿ ನಿರ್ವಾಣವನ್ನು ಪಡೆಯಬೇಕಾಗುತ್ತದೆ. ಹೀಗೆ ಇದು ಮನುಷ್ಯನನ್ನು ವಿಶ್ವದ ಕೇಂದ್ರ

# ಜೈನಧರ್ಮದಲ್ಲಿ ಅಹಿಂಸಾ ಪರಿಕಲ್ಪನೆ

ಪ್ರೊ|| ಶಿವರಾಮಯ್ಯ

ಅತ್ಯಂತ ಮುದ ನೀಡುವ ಸಂಗತಿ ಎಂದರೆ, ಈ ಧರ್ಮವು ಆಕ್ರಮಣಶೀಲ ಪ್ರಕೃತಿಯದಲ್ಲ ಎನ್ನುವುದು. ವಿಚಾರವಂತನಾದ ಯಾವ ವ್ಯಕ್ತಿಯೂ ಈ ಮಾತನ್ನು ಅಲ್ಲಗಳೆಯಲಾರ. ಯಾಕೆಂದರೆ ಇದರಲ್ಲಿ ಸಾಕಾರಗೊಂಡಿರುವ ಅಹಿಂಸಾ ತತ್ತ್ವವೇ ಇದನ್ನು ಸಮರ್ಥಿಸುತ್ತದೆ. ಮತೀಯ ಮೂಲಭೂತವಾದ ಮತ್ತು ಕೋಮುವಾದಗಳ ದಳ್ಳುರಿಯಿಂದ ಉರಿದು ಬೂದಿಯಾಗುತ್ತಿರುವ ಇಂದಿನ ದಿನಗಳಲ್ಲಿ ಜೈನಧರ್ಮ ಪ್ರಣೀತ ಅಹಿಂಸಾ ತತ್ತ್ವಕ್ಕೆ ಮಾತ್ರ ಅದನ್ನು ನಂದಿಸುವ ಸಾಮರ್ಥ್ಯ ಇದೆಯೆಂದರೆ ಉತ್ಪ್ರೇಕ್ಷೆಯಾಗಲಾರದು. ವಿಶ್ವದ ಮುಖ್ಯ ಧರ್ಮಗಳಾದ ಹಿಂದೂ, ಇಸ್ಲಾಂ, ಯಹೂದಿ, ಕ್ರೈಸ್ತ, ಮುಂತಾದ ಮತಧರ್ಮಗಳ ಸಾಲಿನಲ್ಲಿ ಜೈನ ಧರ್ಮವನ್ನು ನಿಲ್ಲಿಸಿ ಪರಿಶೀಲಿಸಿದರೆ ಅದರ ಅಹಿಂಸಾತತ್ತ್ವದ ಹೆಚ್ಚಳ ಕಂಡುಬಂದೀತು. ಇದಕ್ಕೆ ಪೂರಕವಾಗಿ ನಮ್ಮ ಪ್ರಾಚೀನ ಇತಿಹಾಸ ಹಾಗೂ ಸಾಹಿತ್ಯಾದಿ ಕಲೆಗಳೂ ಸಾಕ್ಷಿಯನ್ನು ಒದಗಿಸಬಲ್ಲವು. ಈ ಮಾತನ್ನು ಅನಂತರ ಪರಿಶೀಲಿಸೋಣ.

ಹಿಂಸೆ ಮತ್ತು ಅಹಿಂಸೆಗೆ ಇರುವ ವ್ಯತ್ಯಾಸ ಒಂದೇ ಅಕ್ಷರದಲ್ಲಿದೆ. ಇನ್ನೊಬ್ಬರಿಗೆ ಕೇಡು ಮಾಡುವುದೇ ಹಿಂಸೆ. ತನ್ನಂತೆಯೇ ಪರರನ್ನು ಕಾಣುವುದು ಅಹಿಂಸೆ. ಅನ್ನ ತಿಂದು ನೀರು ಕುಡಿಯುವ ಮನುಷ್ಯ ಮಾತ್ರದವರಿಗೆಲ್ಲ ಈ ಮಾತು ಅರ್ಥವಾಗಬಲ್ಲದು. ಇಲ್ಲವೆಂದರೆ ಅವರ ಅಜ್ಞಾನ ಹಾಗೂ ಮೂಢನಂಬಿಕೆಯೇ ಅದಕ್ಕೆ ಕಾರಣ. ನಾವು ಕೇಳಿದ ಉಚಿತ ಪ್ರಶ್ನೆಗೆ ತಕ್ಕ ಉತ್ತರ ಕೊಡಲಾರದ ಮೂಢಮತಿ ದಬ್ಬಾಳಿಕೆ ಶುರುಮಾಡುತ್ತಾನೆ; ಅದು ಹಿಂಸೆಯಲ್ಲಿ ಪರ್ಯವಸಾನವಾಗುತ್ತದೆ. ಹಿಂಸೆ ಎಂದರೆ ದುರ್ಬಲರ ಮೇಲೆ ಬಲವಂತರು ನಡೆಸುವ ಆಕ್ರಮಣವಾಗಿದೆ. ಸಮಬಲದ ಕಾದಾಟ ಹಿಂಸೆ ಎನಿಸಿಕೊಳ್ಳುವುದಿಲ್ಲ. ಇದನ್ನು ಒಂದು ನಿದರ್ಶನದ ಮೂಲಕ ಹೇಳುವುದಾದರೆ, ಗೋಧ್ರಾ ನರಮೇಧಕ್ಕೆ ಕಾರಣರಾದವರನ್ನು ನ್ಯಾಯಾಂಗಬದ್ಧವಾಗಿ ಶಿಕ್ಷಿಸುವುದು ಹಿಂಸೆ ಎನಿಸಿಕೊಳ್ಳುವುದಿಲ್ಲ. ಆದರೆ ಅದಕ್ಕೆ ಬದಲಾಗಿ ಹಿಂದುತ್ವವಾದಿಗಳು ದೀನಾನಾಥ ಮುಸ್ಲಿಂ ಹೆಂಗಸರು ಮಕ್ಕಳ ಮೇಲೆ ನಡೆಸಿದ ಅತ್ಯಾಚಾರ, ಅಗ್ನಿಸ್ಪರ್ಶ ಇತ್ಯಾದಿ ಹಿಂಸೆ ಎನಿಸಿಕೊಳ್ಳುತ್ತದೆ. ಇದಕ್ಕೆ ತಾರ್ಕಿಕ ಜ್ಞಾನದ ಅಭಾವವೂ ಕಾರಣ ಎನ್ನಬಹುದು. ಯಜ್ಞಯಾಗಾದಿ ಕರ್ಮಕಾಂಡದಲ್ಲಿ ತೊಡಗಿರುವವರಿಗೆ 'ಏಕೆ ಬಲಿ ಕೊಡುವಿರಿ' ಎಂದರೆ, ಉತ್ತರ 'ಇಲ್ಲ'. ಹಾಗೆಯೇ, ರಾಮನು ಅಯೋಧ್ಯೆಯಲ್ಲಿ ಜನಿಸಿದನೇ ? ಎಂಬ ಪ್ರಶ್ನೆಗೆ ಈ ಜನ, ದಾಖಲೆ ಇಲ್ಲ ಎಂದು ಉತ್ತರಿಸಿಯಾರು. ಆದರೆ ಆಕ್ರಮಣಶೀಲರಾಗಿ ತಮ್ಮ ಬುದ್ಧಿಯನ್ನು ಬಾಡಿಗೆಗೆ ನೀಡಿದ ಈ ಭಂಟರು 'ಇದೆಲ್ಲ ಕೇಳುವುದಕ್ಕೆ ನೀನಾರು ?' ಎಂದು ಒಮ್ಮೆಲೇ ಮೈಮೇಲೆ ಬೀಳುತ್ತಾರೆ. ಅಲ್ಲಿಂದಲೇ 'ಹಿಂಸಾಕಾಂಡ' ಶುರುವಾಗುತ್ತದೆ. ತಾತ್ಪರ್ಯವೇನೆಂದರೆ, ಮನುಷ್ಯ ಯಾವಾಗ ಅವಿಚಾರಿಯೂ, ಮೂಢಮತಿಯೂ, ಕಾಮಾಂಧನೂ ಆಗುತ್ತಾನೋ ಆಗ ಅವನು ಹಿಂಸಾಮಾರ್ಗಕ್ಕೆ ತೊಡಗುತ್ತಾನೆ. ಆದರೆ ಇದೇ ಸ್ಥಾನದಲ್ಲಿಟ್ಟು ಧರ್ಮ ವಿವೇಚನೆ ಮಾಡಿರುವುದು ತರ್ಕಸಮ್ಮತವಾಗಿದೆ. ಏಕೆಂದರೆ, ಮನುಷ್ಯನ ಅಸ್ತಿತ್ವವೇ ಇಲ್ಲದಮೇಲೆ ಇಲ್ಲಿ ಏನಿದ್ದರೇನು ಪ್ರಯೋಜನ ? ಜಿನಧರ್ಮದ ಪ್ರಕಾರ ದೇವಾದಿದೇವತೆಗಳೂ ಸಹ ನಿರ್ವಾಣವನ್ನು ಪಡೆಯಬೇಕಾದರೆ ಲೋಕದಲ್ಲಿ ಹುಟ್ಟಿ ಇಲ್ಲಿನ ಕಷ್ಟಕೋಟಲೆಗಳನ್ನು ಹಾಯ್ದು ಹೋಗಬೇಕಾಗಿದೆ. ಕರ್ಮ ಸಂಬಂಧಗಳನ್ನು ಮುರಿದು ಮುಂದೆ ಸಾಗುವುದಕ್ಕೆ ಮನುಷ್ಯಜನ್ಮದಿಂದ ಮಾತ್ರ ಸಾಧ್ಯ. ಆದ್ದರಿಂದ ದೇವತೆಗಳಿಗಿಂತ ಇಲ್ಲಿ ಮನುಷ್ಯನಿಗೇ ಎತ್ತರದ ಸ್ಥಾನ. ವೈದಿಕ ಧರ್ಮೋಕ್ತ ದೇವತೆಗಳಿಗೆ ಇಲ್ಲಿ ಮಹತ್ವವಿಲ್ಲ. ವ್ಯಕ್ತಿ ತನ್ನ ಸ್ವಸಾಮರ್ಥ್ಯದಿಂದ ಮಾತ್ರವೇ ಆತ್ಮವಿಕಾಸದ ಮೂಲಕ ಮುಕ್ತಿಸಾಧನೆ ಮಾಡಬೇಕೆಂದು ಜಿನಧರ್ಮ ಒತ್ತಿ ಹೇಳುತ್ತದೆ. ಪೌರುಷ ಪ್ರಯತ್ನಕ್ಕೆ ಇಲ್ಲಿ ವಿಶೇಷ ಅವಕಾಶವಿದೆ. ಹೀಗೆ ಆತ್ಮ ವಿಕಾಸದತ್ತ ಹೊರಟ ಸಾಧಕನಿಗೆ ಜಿನಧರ್ಮವು ಪಂಚ ಮಹಾವ್ರತಗಳನ್ನು ವಿಧಿಸಿರುವುದು ಅರ್ಥಪೂರ್ಣವಾಗಿದೆ. ಸತ್ಯ, ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂಬ ಈ ಪಂಚಾಣು ವ್ರತಗಳಲ್ಲಿ ಅಹಿಂಸೆಗೇ ಪ್ರಥಮ ಸ್ಥಾನ. ಸಕಲ ಚರಾಚರ ಪ್ರಾಣಿ ಸಂಕುಲಗಳ ಮೇಲಿರುವ ದಯೆ, ಪ್ರೀತಿ, ಅಹಿಂಸೆಯ ಆಚರಣೆಗೆ ಆಧಾರವಾಗಿದೆ. ಮನುಷ್ಯ ಕಾಯಾ ವಾಚಾ ಮನಸಾ ಮಾಡುವ ಕ್ರಿಯೆಗಳೆಲ್ಲವೂ ಇದರಲ್ಲಿ ಸಮಾವೇಶಗೊಳ್ಳುತ್ತವೆ. ನಮ್ಮ ಹಿಂಸಾ ಸಂಕಲ್ಪವೂ ಕೂಡ ಹಿಂಸಾ ಕ್ರೌರ್ಯದಷ್ಟೇ ಪಾಪಪೂರಿತ. ಇದು ಜೈನ ದರ್ಶನದ ಅತ್ಯುನ್ನತ ನೀತಿಯ ಪರಮಾದರ್ಶ ಉಪದೇಶ. ಜನ್ನನ ಯಶೋಧರ ಚರಿತೆ ಈ ಆದರ್ಶವನ್ನು ಕಥಾ ಮಾಧ್ಯಮದಲ್ಲಿ ಹೇಳಿದ ಒಂದು ಅಪೂರ್ವ ಕಲಾಕೃತಿ. ಕೇವಲ ಸಂಕಲ್ಪ ಪಾಪ ಮಾತ್ರದಿಂದ ಏಳೇಳು ಭವದಲ್ಲಿ ಜೀವವು ಬಿದ್ದು ಬರಬೇಕಾಗಿರುವಾಗ ಇನ್ನು ಪ್ರತ್ಯಕ್ಷ ಕೊಲೆಗೈದ ಜೀವವು ಎಂಥ ಭೀಕರ ನರಕಕ್ಕೆ (ಧೂಮಪ್ರಭೆ ಇತ್ಯಾದಿ) ಬೀಳಬಹುದು ಎಂಬುದನ್ನು ತಿಳಿಸುವ ಮೂಲಕ ಹಿಂಸಾರಭಸ ಮತಿಗಳನ್ನು ಸನ್ಮಾರ್ಗಕ್ಕೆ ತರುವುದೇ ಜನ್ನನ ಕಾವ್ಯೋದ್ದೇಶ. ಆದ್ದರಿಂದ ಹಿಟ್ಟಿನ ಕೋಳಿಯನ್ನು ಬಲಿ ಕೊಟ್ಟ ಸಂಕಲ್ಪ ಪಾಪಕ್ಕೆ ಯಶೋಧರ ಮತ್ತು ಅವನ ತಾಯಿ ಚಂದ್ರಮತಿ ಭವಾವಳಿಯಲ್ಲಿ ಬಿದ್ದು ಬಂದರೆ, ಅಮೃತಮತಿ ಮತ್ತು ಅಷ್ಟಾವಂಕರ ಕೊಲೆಪಾತಕ ಕಾಮ ಜೀವನವನ್ನು ಕಂಡು ಹೇಸಿದ ಚಂಡಮಾರಿ ಶಾಖಾಹಾರಿಯಾಗಿ ಪರಿವರ್ತನೆಯಾದರೆ, ಹಿಂಸಾರಭಸ ಮತಿಯಾದ ಮಾರಿದತ್ತನು ವೈರಾಗ್ಯ ದೀಕ್ಷೆಯನ್ನು ಪಡೆದು ಅಹಿಂಸಾವ್ರತವನ್ನು ಹಿಡಿಯುತ್ತಾನೆ.

ಆದ್ದರಿಂದ ಹುಸಿಯದ, ಕದಿಯದ, ಕೊಲ್ಲದ, ಅತಿಕಾಮಿಸದ ಮತ್ತು ಅತಿ ಸಂಗ್ರಹಿಸದ ಈ ಪಂಚಾಣುವ್ರತಗಳು ಕೇವಲ ಜೈನ ಮತಸ್ಥರಿಗೇ ಅಲ್ಲದೆ ಸರ್ವಮಾನವರೂ ಅನುಸರಿಸಲು ಯೋಗ್ಯವಾದುವುಗಳಾಗಿವೆ. ಈ ಪಂಚಾಣುವ್ರತಗಳ ಮೂಲಕ ವಿಶ್ವದೊಡನೆ ನಂಟುತನವನ್ನು ಗಳಿಸಿಕೊಳ್ಳಬಹುದು. ಪರಿಸರಾಂತರ್‌ದೃಷ್ಟಿಯ ಪರಮ ಆದರ್ಶವು ಈ

**ಹಿಂಸೆ ಮತ್ತು ಅಹಿಂಸೆಗೆ ಇರುವ ವ್ಯತ್ಯಾಸ ಒಂದೇ ಅಕ್ಷರದಲ್ಲಿದೆ. ಇನ್ನೊಬ್ಬರಿಗೆ ಕೇಡು ಮಾಡುವುದೇ ಹಿಂಸೆ. ತನ್ನಂತೆಯೇ ಪರರನ್ನು ಕಾಣುವುದು ಅಹಿಂಸೆ. ಹಿಂಸೆ ಎಂದರೆ ದುರ್ಬಲರ ಮೇಲೆ ಬಲವಂತರು ನಡೆಸುವ ಆಕ್ರಮಣವಾಗಿದೆ. ಸಮಬಲದ ಕಾದಾಟ ಹಿಂಸೆ ಎನಿಸಿಕೊಳ್ಳುವುದಿಲ್ಲ. ಇದನ್ನು ಒಂದು ನಿದರ್ಶನದ ಮೂಲಕ ಹೇಳುವುದಾದರೆ, ಗೋಧ್ರಾ ನರಮೇಧಕ್ಕೆ ಕಾರಣರಾದವರನ್ನು ನ್ಯಾಯಾಂಗಬದ್ಧವಾಗಿ ಶಿಕ್ಷಿಸುವುದು ಹಿಂಸೆ ಎನಿಸಿಕೊಳ್ಳುವುದಿಲ್ಲ. ಆದರೆ ಅದಕ್ಕೆ ಬದಲಾಗಿ ಹಿಂದುತ್ವವಾದಿಗಳು ದೀನಾನಾಥ ಮುಸ್ಲಿಂ ಹೆಂಗಸರು ಮಕ್ಕಳ ಮೇಲೆ ನಡೆಸಿದ ಅತ್ಯಾಚಾರ, ಅಗ್ನಿಸ್ಪರ್ಶ ಇತ್ಯಾದಿ ಹಿಂಸೆ ಎನಿಸಿಕೊಳ್ಳುತ್ತದೆ.**

ಅಣುವ್ರತಗಳಲ್ಲಿದೆಯೆಂದರೆ ಉತ್ಪ್ರೇಕ್ಷೆಯಲ್ಲ.

ಜೈನ ಧರ್ಮದ ಪ್ರಕಾರ ಹಿಂಸೆಯಲ್ಲಿ ಎರಡು ವಿಧ. ಸ್ವಹಿಂಸೆ, ಎಂದರೆ ತನಗೆ ತಾನೇ ಹಿಂಸೆಗೆ ಒಡ್ಡಿಕೊಳ್ಳುವುದು. ವಿಕಾಸದ ಹಂತದಲ್ಲಿರುವ ಜೀವವು ದೇವ, ಮಾನವ, ನಾರಕ ಹಾಗೂ ತಿರ್ಯಕ್ ಎಂಬ ಚತುರ್ವಿಧ ಉಪಸರ್ಗ (ತೊಂದರೆ)ಗಳನ್ನು ಗೆದ್ದು ಕೇವಲತ್ವವನ್ನು ಪಡೆಯಬೇಕಾಗುತ್ತದೆ. ವಡ್ಡಾರಾಧನೆಯ ಕಥೆಗಳು ಈ ಬಗೆಯ ಉಪಸರ್ಗಗಳನ್ನು ಗೆದ್ದ ಕೇವಲಿಗಳ ಕಥೆಯಾಗಿದೆ. ಇನ್ನು ಪರಹಿಂಸೆ ಎಂದರೆ ಕಾಯಾ ವಾಚಾ ಮನಸಾ ಸೃಷ್ಟಿಯ ಚರಾಚರ ಜೀವಸಂಕುಲಕ್ಕೆ ತೊಂದರೆ ಕೊಡದಿರುವುದು. ಪಂಚಾಣುವ್ರತಗಳನ್ನು ಪಾಲಿಸುವ ಜೀವ ಯಾವತ್ತೂ ಜೀವ ಹಿಂಸೆಗೆ ಎಡೆಕೊಡುವುದಿಲ್ಲ. ವ್ಯಕ್ತಿ ಉದ್ಧಾರವಷ್ಟೇ ಅಲ್ಲದೆ ತನ್ಮೂಲಕ ಆ ಸಮಾಜದ ವಿಕಾಸವನ್ನೂ ಬಯಸುತ್ತದೆ; ಶಾಂತಿ ಸುಭಿಕ್ಷಗಳಿಗೆ ನಾಂದಿ ಹಾಡುತ್ತದೆ. ಉದಾ:- ವಡ್ಡಾರಾಧನೆಯ ಸುಕುಮಾರಸ್ವಾಮಿಯ ಕಥೆಯಲ್ಲಿ ಬರುವ 'ನಾಗಶ್ರೀ' ಪ್ರಸಂಗವನ್ನು ಪರಿಶೀಲಿಸಬಹುದು: ಬ್ರಾಹ್ಮಣ ಹುಡುಗಿ ನಾಗಶ್ರೀ ಅಕಸ್ಮಾತ್ ಜಿನ ಯತಿಯೊಬ್ಬನಿಂದ ಅಣುವ್ರತಗಳನ್ನು ಸ್ವೀಕರಿಸುತ್ತಾಳೆ. ಆದರೆ ಅವಳ ತಂದೆ ಅವನ್ನು ಹಿಂದಿರುಗಿಸು, ಎನ್ನುತ್ತಾನೆ. ಅದಕ್ಕಾಗಿ ಅವರಿಬ್ಬರು ದಾರಿಯಲ್ಲಿ ಬರುತ್ತಿರುವಾಗ ಕೊಲೆಗಡುಕನನ್ನು, ಸುಳ್ಳುಗಾರನನ್ನು, ವ್ಯಭಿಚಾರಿಯನ್ನು, ಕಳ್ಳನನ್ನು, ಧನದಾಹಿಯನ್ನು– ಹೀಗೆ ಒಬ್ಬರಾದ ಮೇಲೊಬ್ಬರನ್ನು ಸಂಧಿಸುತ್ತಾರೆ. ಅವರು ಮಾಡಿದ ಪಾಪಕ್ಕೆ ಅವರು ವಧಾಸ್ಥಾನಕ್ಕೆ ಒಯ್ಯಲ್ಪಡುತ್ತಾರೆ. 'ಈ ಲೋಕಘಟನೆಗಳಿಂದ ಬರುವ ಪಾಪದಿಂದ ದೂರ ಉಳಿಯಬೇಕಾದರೆ ಪಂಚಾಣುವ್ರತಗಳೇ ದಿಕ್ಕು' ಎಂಬುದನ್ನು ತನ್ನ ತಂದೆಗೆ ಹೇಳಿ ಒಪ್ಪಿಸುವ ಮೂಲಕ ಆ ವ್ರತಗಳನ್ನು ಉಳಿಸಿಕೊಳ್ಳುತ್ತಾಳೆ. ಇಷ್ಟು ಸರಳ ಸುಂದರ ಕಥಾನಕಗಳನ್ನು ಹೇಳುವ ಜಿನಧರ್ಮದತ್ತ ಜನರು ಆಕರ್ಷಿತರಾಗಿದ್ದು ಸಹಜವೇ. ಇಂಥ ವಿಪುಲ ಸಾಹಿತ್ಯ ಜೈನ ವಾಙ್ಮಯದಲ್ಲಿದೆ. ಈ ಆಧುನಿಕ ಯುಗದಲ್ಲಿಯೂ ಸಹ ಗಾಂಧೀಜಿ ಸತ್ಯ-ಅಹಿಂಸೆಗಳೆಂಬ ಆಯುಧಗಳನ್ನು ಹಿಡಿದು ಎಂಥ ಪಾಶವೀ ಶಕ್ತಿಯನ್ನೂ ಮಣಿಸಬಹುದು ಎಂಬುದನ್ನು ಪ್ರಯೋಗಾತ್ಮಕವಾಗಿ ಮಾಡಿ ತೋರಿಸಿದರು. ಆ ಮಾತಿರಲಿ. ಜಿನ ಧರ್ಮವು ಪ್ರಕಾಶಪಡಿಸಿದ ಇನ್ನೊಂದು ಮುಖ್ಯ ವಿಚಾರಧಾರೆ ಎಂದರೆ, ಅದು ಮನುಷ್ಯಕೇಂದ್ರಿತ ನೆಲೆಯಿಂದ ಜೀವಕೇಂದ್ರಿತ ನೆಲೆಯತ್ತ ದಾಟಿ ಲೋಕವನ್ನು ಅರಿಯಲು ಪ್ರಯತ್ನಿಸಿದ್ದು. ಅಹಿಂಸಾ ತತ್ತ್ವದ ಬೇರುಗಳು ಆಳಕ್ಕೆ ಇಳಿದದ್ದು ಈ ಜೀವಕೇಂದ್ರಿತ ನೆಲೆಯಿಂದಲೇ. ಇದಕ್ಕೆ ಅನೇಕಾನೇಕ ನಿದರ್ಶನಗಳನ್ನು ಹೇಳಬಹುದು. ಈಗಾಗಲೇ ಹೇಳಿರುವಂತೆ, ಜೀವಾಜೀವ ಜಗತ್ತಿಗೆಲ್ಲಾ ಅಹಿಂಸಾತತ್ತ್ವವನ್ನು ಪಾಲಿಸಲು, ಅನ್ವಯಿಸಲು ಜಿನಧರ್ಮ ಬೋಧಿಸಿದೆ. ಈ ಮಾತನ್ನು ಮತ್ತೊಂದು ನಿದರ್ಶನದೊಂದಿಗೆ ವಿಶ್ಲೇಷಿಸಬಹುದು: ಆಯುರ್ವೇದ ಔಷಧಿಗಳನ್ನು ಮಾತ್ರ ಶಿಫಾರಸ್ಸು ಮಾಡುವ ಈ ಧರ್ಮವು ಆ ಸಂದರ್ಭದಲ್ಲಿಯೂ ಕೂಡ ಜೀವಂತ ಗಿಡಮೂಲಿಕೆಗಳನ್ನು ಕಿತ್ತು ಉಪಯೋಗಿಸುವುದನ್ನು ನಿಷೇಧಿಸುತ್ತದೆ; ಒಣಗಿದ ಗಿಡಮೂಲಿಕೆಗಳನ್ನು ಮಾತ್ರ ಉಪಯೋಗಿಸಬಹುದು; ಸೌದೆಗಾಗಿ ಹಸಿ ಗಿಡಮರಗಳನ್ನು ಕಡಿಯಬಾರದು; ಒಣಗಿದ ಕಡ್ಡಿ ಪುರಳೆಗಳನ್ನು ಮಾತ್ರ ಉಪಯೋಗಿಸಬಹುದು; ಉಸಿರಾಡುವಾಗ ಬಾಯಿಗೆ ಬಟ್ಟೆ ಕಟ್ಟಿಕೊಳ್ಳಬೇಕು, ನಡೆದಾಡುವಾಗ ಕಾಲಿಗೆ ಬಟ್ಟೆ ಸುತ್ತಿಕೊಳ್ಳಬೇಕು; ನೀರನ್ನು ಶೋಧಿಸಿ ಕುಡಿಯಬೇಕು; ರಾತ್ರಿ ಭೋಜನ ಮಾಡಬಾರದು, ಮುಂತಾಗಿ ವಿಧಿನಿಷೇಧಗಳನ್ನು ಇದು ವಿಧಿಸಿದೆ. ಉತ್ಪ್ರೇಕ್ಷೆಯೆನಿಸಿದರೂ ಇವೆಲ್ಲ ನಮ್ಮ ಪರಿಸರ ಸಂರಕ್ಷಣೆಗಾಗಿ ವಿಚಾರ ಮಾಡಿ ಹೇಳಿದ ಅನುಭವದ ಮಾತುಗಳೇ ಆಗಿವೆ. ತನ್ನನ್ನು ಕಡಿಯಲು ಕೊಡಲಿ ಹಿಡಿದು ಬಂದವನಿಗೂ ಗಿಡಮರಗಳು ನೆರಳು ನೀಡುತ್ತವೆ ಎಂದ ಗೌತಮ ಬುದ್ಧ. ಅವನ ಸೋದರ ಧರ್ಮವಾದ ಜೈನಮತವೂ ನಿಸರ್ಗ ಪ್ರೀತಿಯನ್ನು ಮನಸಾರೆ ಎತ್ತಿಹಿಡಿದು ಕೊಂಡಾಡಿದೆ. ಒಬ್ಬೊಬ್ಬ ಜೈನ ತೀರ್ಥಂಕರನಿಗೂ ಒಂದೊಂದು ಕೇವಲ ಜ್ಞಾನ ವೃಕ್ಷಗಳಿವೆ. ಹಾಗೂ ಕಥಾಸಾಹಿತ್ಯದಲ್ಲಿ 'ನಾಗವನ'ಗಳ ಪ್ರಸ್ತಾಪವಿದೆ. ಇಷ್ಟೆಲ್ಲ ಹೇಳಿದ ಕಾರಣ ಏನೆಂದರೆ ಜಿನಧರ್ಮದ ಅಹಿಂಸಾತ್ಮಕ ದೃಷ್ಟಿ ಹಾಗೂ ಜೀವಪರ ಕಾಳಜಿ ಲೋಕ ಲೋಕಾಂತರಕ್ಕೆಲ್ಲ ಪಸರಿಸಿದೆ ಎಂಬುದನ್ನು ಸಾದರಪಡಿಸಲಿಕ್ಕಾಗಿ. ಇವತ್ತಿನ ಪರಿಸರ ಪ್ರೇಮಿಗಳು ಸಾರುತ್ತಿರುವ ಪರಿಸರಪ್ರಜ್ಞೆ, ಜಿನಧರ್ಮದಲ್ಲಿ ಸ್ವಯಂವೇದ್ಯವಾಗಿ ಮೂಡಿಬಂದಿದೆ. ಜೀವ ಹಾಗೂ ಸಸ್ಯ ಸಂಕುಲಗಳ ಉಳಿವಿನಲ್ಲಿ ನಮ್ಮ ಉಳಿವೂ ಇದೆಯಷ್ಟೆ.

ಜೈನಾಗಮ ಪುರಾಣ ಕಥೆಗಳಿಂದ ಇದಕ್ಕೆ ಸಾಕಷ್ಟು ಪುರಾವೆಗಳನ್ನು ಆಯ್ದುಕೊಳ್ಳಬಹುದು: ಮೊದಲಿಗೆ, ಪಂಪಕವಿಯ ಆದಿಪುರಾಣದ ಪುಷ್ಪೋದ್ಯಾನ ಸನ್ನಿವೇಶ: ಭರತನ ದಿಗ್ವಿಜಯ ಯಾತ್ರೆಯಲ್ಲಿ ಅವನ ಚದುರಂಗ ಬಲದೊಂದಿಗೆ ಅವನ ಅಂತಃಪುರ ಸ್ತ್ರೀಯರೂ ಪಾಲ್ಗೊಂಡಿದ್ದರು. ಜೈತ್ರಯಾತ್ರೆ ಹೀಗೆ ಮುಂದೆ ಸಾಗುತ್ತಿದ್ದಾಗ ಒಮ್ಮೆ ಅವನ ಸ್ತ್ರೀ ಸಮೂಹ ಒಂದು ಉಪವನಕ್ಕೆ ಪ್ರವೇಶಿಸಿ ಅಲ್ಲಿ ಸಾಕಷ್ಟು ದಾಂಧಲೆ ಮಾಡಿ ಆ ನಂದನವನದ ಅಂದವನ್ನು ಹಾಳುಗೆಡವಿಬಿಡುತ್ತದೆ. ಆದರೆ, ಅಲ್ಲಿಂದ ಬಿಳ್ಕೊಡುವಾಗ ತಾವು ಮಾಡಿದ ತಪ್ಪಿನ ಅರಿವಾಗಿ ಆ ಉಪವನದ ತರುಲತಾದಿಗಳ ಬಳಿ ಹೋಗಿ ಕ್ಷಮೆ ಯಾಚಿಸುತ್ತಾರೆ. ತಪ್ಪು ಮಾಡುವುದು ಮಾನವ ಸ್ವಭಾವವಾದರೂ ಎಚ್ಚರಗೊಂಡ ಮೇಲೆ ಅದಕ್ಕಾಗಿ ಪಶ್ಚಾತ್ತಾಪಪಟ್ಟು ಕ್ಷಮೆ ಯಾಚಿಸುವುದು ಮನುಷ್ಯನ ದೊಡ್ಡ ಗುಣ. ನಾಡೋಜನಾದ ಪಂಪ ಈ ಮಾತನ್ನು ವನವಿಹಾರದ ಪರ್ವದಲ್ಲಿ ಹೇಳಿರುವುದು ಪರಿಶೀಲನಾರ್ಹ. ಹಾಗೆಯೇ ಆದಿಪುರಾಣದ ಇನ್ನೊಂದು ಸನ್ನಿವೇಶ ಭರತನ ಜಿನ ಪೂಜೋತ್ಸವ ಸಂದರ್ಭ: ತನ್ನ ಸಂಪತ್ತನ್ನು ಸತ್‌ಪಾತ್ರರಿಗೆ ದಾನ ಮಾಡಬೇಕೆಂದು ಬಯಸಿದ ಚಕ್ರವರ್ತಿ ಜಿನೋತ್ಸವವನ್ನು ಏರ್ಪಡಿಸಿ ನಾಗರಿಕರನ್ನು ಆಹ್ವಾನಿಸಿದ. ಆದರೆ ಪರೀಕ್ಷಾರ್ಥವಾಗಿ ಅವರು ಬರುವ ಹಾದಿಯಲ್ಲಿ ಹೂ ಹಣ್ಣು ಹುಲ್ಲು ಅಂಕುರಗಳನ್ನು ಯಥೇಚ್ಛ ಹರಡಿಸಿದ. ಧನದಾಹಿಗಳಾದ ನಾಗರಿಕರು ಅದನ್ನೆಲ್ಲ ಲೆಕ್ಕಿಸದೆ ತುಳಿದು ನುಗ್ಗಿ ಬಂದರು. ಆದರೆ ಕೆಲವರು ಮಾತ್ರ ಹಾಗೆ ಒಳಗೆ ಬರಲಾರದೆ ಹಿಂದಿರುಗುತ್ತಿದ್ದರು. ದೊರೆ ಅವರನ್ನೂ ಒಳಗೆ ಬರಲು ಒತ್ತಾಯಿಸಿದ. ಆಗ ಅವರು ಜೀವವಿರುವ ಯಾವ ವಸ್ತುಚೇತನವನ್ನೂ ತುಳಿಯದೆ ಹಾದಿ ಮಾಡಿಕೊಂಡು ಬಂದರು. ದೊರೆ 'ಅಂಗಳದ ಮೂಲಕ ಏಕೆ ಬರಲಿಲ್ಲ'ವೆಂದು ಕೇಳಿದ. ಅವರು 'ಮೊಳಕೆ ಹೂ ಎಲೆ ಎಲ್ಲದರಲ್ಲೂ ಜೀವ ಇರುವ ಕಾರಣ ಯಾವುದಕ್ಕೂ ಘಾಸಿಮಾಡಬಾರದಷ್ಟೆ' ಎಂದು ಬಿನ್ನೈಸಿದರು. ಹೀಗೆ ಆದಿಪುರಾಣದಲ್ಲಿ ಚಿತ್ರಿಸಲ್ಪಟ್ಟಿರುವ ಎರಡೂ ಸಂದರ್ಭಗಳು ಜಿನಧರ್ಮಕ್ಕಿರುವ ಜೀವ ಕೇಂದ್ರಿತ ದೃಷ್ಟಿಯನ್ನು ಸಾದರಪಡಿಸಲು ಕೊಟ್ಟಿರುವ ನಿದರ್ಶನಗಳು. ಅಂತೂ ಮನೋವಾಕ್‌ಕಾಯಗಳಿಂದ ನಾವು ಹಿಂಸೆಗೆ ಎಡೆಮಾಡಿಕೊಡಬಾರದು. ಇದು ಆ ಧರ್ಮದ ಪರಿಸರಾಂತರ್‌ದೃಷ್ಟಿ. ಇದೇ ಪಂಪನ ಕಾವ್ಯಗಳ ಪ್ರಬಂಧ ಧ್ವನಿ. ವಿಕ್ರಮಾರ್ಜುನ ವಿಜಯ ಹಿಂಸೆಯ ಅನರ್ಥಕಾರಕಗಳನ್ನು ಬಿಚ್ಚಿ ಹೇಳಿದರೆ, ಆದಿ ಪುರಾಣವು ಅಹಿಂಸೆಯ ಔಚಿತ್ಯವನ್ನು ಸಾರಿ ಹೇಳುತ್ತದೆ. ಒಂದರಲ್ಲಿ 'ಇದು ತರವಲ್ಲ ಇದು ಜೀವ ವಿರೋಧಿ' ಎಂದು ಹೇಳಿದರೆ, ಇನ್ನೊಂದರಲ್ಲಿ 'ಇದು ಸರಿ. ಇದು ಜೀವ ಪರ' ಎಂಬುದನ್ನು ಧ್ವನಿಸುತ್ತದೆ. ಪಂಪ ಭಾರತದ ಕುರುಕ್ಷೇತ್ರ ಭೂಪರಿಸರದಿಂದ ವಿಷಾನಿಲ ಬೀಸಿದರೆ, ಆದಿಪುರಾಣದ ಸಮವಸರಣ ಮಂಟಪದತ್ತಣಿಂದ ಸುಗಂಧಾನಿಲ ಸೂಸುತ್ತದೆ. ಹೀಗೆ ಪಂಪನ ಎರಡೂ ಕಾವ್ಯಗಳು ಲೋಕಸತ್ತೆಯ ದರ್ಶನ ಬಿಂಬಗಳಾಗಿವೆ.

ಕೊನೆಯದಾಗಿ, ಈ ಮೊದಲೇ ಹೇಳಿದಂತೆ, ಜಿನಧರ್ಮ 'ಆಕ್ರಮಣ ಶೀಲವಲ್ಲ' ಎಂಬುದನ್ನು ನಮ್ಮ ಇತಿಹಾಸವೂ ಸಮರ್ಥಿಸುವಂತಿದೆ. ಕರ್ನಾಟಕವನ್ನು ಆಳಿದ ಜೈನ ಮನೆತನದ ಅರಸರಾದ ಗಂಗರು, ರಾಷ್ಟ್ರಕೂಟರು, ಚಾಳುಕ್ಯರು ಮುಂತಾದವರು ಸಾಮ್ರಾಜ್ಯ ವಿಸ್ತರಣೆಗಾಗಿ ಯುದ್ಧಗಳನ್ನು ಕೈಗೊಂಡರೂ ಪ್ರಜೆಗಳನ್ನು ಅನ್ಯಮತೀಯರೆಂಬ ಕಾರಣಕ್ಕೆ ಅಥವಾ ತಮ್ಮ ಮತಾಂತರದ ಪ್ರಕ್ರಿಯೆಯ ಕಾರಣಕ್ಕೆ ಅವರನ್ನು ಹಿಂಸಿಸಿ, ದಂಡಿಸಿ, ಬಲವಂತಪಡಿಸಲಿಲ್ಲ. ಈ ಮಾತನ್ನು ಮಧ್ಯಯುಗದ ಭಕ್ತಿಪಂಥ ಹಾಗೂ ಆಧುನಿಕಯುಗದ ಮತೀಯ ಮೂಲಭೂತವಾದ ಮತ್ತು ಕೋಮುವಾದದ ಹಿನ್ನೆಲೆಯಿಂದ ಪರಿಶೀಲಿಸಿದರೆ ಜೈನಮತದ ಅಹಿಂಸಾಪರ ನಿಲುವು ಏನೆಂಬುದು ತಿಳಿದುಬರುತ್ತದೆ. ಬಹುಶಃ ಜೈನಧರ್ಮದ ಅನಾಕ್ರಮಣಶೀಲ ಪ್ರಕೃತಿಯಿಂದಾಗಿಯೇ ಅದು ಇಲ್ಲಿ ಶೇಕಡ ಒಂದರಷ್ಟೂ ಜನಸಂಖ್ಯೆ ಇಲ್ಲದೆ ಒಂದು ಅಲ್ಪ ಸಂಖ್ಯಾತ ಗುಂಪಾಗಿ ಉಳಿದಿರಬೇಕು. ವಿಚಾರಪರತೆ ಮತ್ತು ಅನ್ಯಮತ ಸಹಿಷ್ಣುತೆ ಎಂಬುದು ಈ ಧರ್ಮದ ಸಾರಭೂತ ಜೀವನಕ್ರಮವಾಗಿದೆ. ಅದಕ್ಕೆ ಅಹಿಂಸಾ ತತ್ತ್ವವೇ ಮೂಲ ಪ್ರೇರಣೆ. ಅಲ್ಲದೆ ದೈನಂದಿನ ಜೀವನದಲ್ಲಿ ಸಾಮಾನ್ಯರಿಗೆ ಅನುಸರಿಸಲು ಕಷ್ಟ ಸಾಧ್ಯವಾದ ಇದರ ಆಚರಣಾಂಗದ ಸೂಕ್ಷ್ಮ ವಿಧಿಗಳಿಂದಾಗಿಯೂ ಈ ಧಾರ್ಮಿಕ ಗುಂಪು ಅಲ್ಪಸಂಖ್ಯಾತರಾಗಿ ಉಳಿಯಲು ಕಾರಣವಾಗಿರಬೇಕು. ಆದರೆ 'ಗಾತ್ರವದು ಪಾತ್ರವಲ್ಲ ಆತ್ಮಕ್ಕೆ' ಎಂಬಂತೆ ಇದು ಮುಖ್ಯವಲ್ಲ. ಅದು ಸಾರುವ ಸಕಲ ಜೀವ ರಾಶಿಗಳಿಗೆ ಒಳಿತನ್ನೇ ಬಯಸುವ ಅಹಿಂಸಾತತ್ತ್ವ ಬಹಳ ಮುಖ್ಯ. ಹೀಗಾಗಿ ಸಂಘಪರಿವಾರವು ಇಂದು ಉದ್‌ಘೋಷಿಸುವ "ನಾವು ಇನ್ನಷ್ಟು ಆಕ್ರಮಣಶೀಲರಾಗಬೇಕು" ಎಂಬ ಹಿಂಸಾ ಪ್ರಚೋದನಾತ್ಮಕ ಕ್ರೌರ್ಯದ ಎದುರು ಉತ್ತರವಾಗಿ ಜಿನಧರ್ಮದ ಅಹಿಂಸಾ ತತ್ತ್ವವನ್ನು ಮಾರೊಡ್ಡಿ ನಾವು ನಿಲ್ಲಬಹುದು. ಇಲ್ಲವಾದರೆ ಇಂಡಿಯಾದ ಮಾರಣ ಹೋಮವಾದೀತು. ಆದ್ದರಿಂದಲೇ ಗಾಂಧೀಜಿ ಸತ್ಯ-ಅಹಿಂಸೆಗಳೆಂಬ ಆಯುಧಗಳನ್ನು 'ಬಲ್ವಿಡಿವಿಡಿದು' ಹೋರಾಡಿದ್ದು. ಇಂಥ ಜೀವನಮೌಲ್ಯವನ್ನು ಪ್ರಚುರಪಡಿಸಿದ ಶ್ರೇಯಸ್ಸು ವರ್ಧಮಾನ ಮುಂತಾದ ತೀರ್ಥಂಕರರಿಗೆ ಸಲ್ಲಬೇಕು.

*(ಭಗವಾನ್ ಮಹಾವೀರರ ೨೬೦೦ನೇ ಜನ್ಮದಿನದ ಅಂಗವಾಗಿ ತುಮಕೂರಿನಲ್ಲಿ ಕೊಟ್ಟ ಉಪನ್ಯಾಸದ ಪರಿಷ್ಕೃತ ಲೇಖನ. ೨೫.೦೪.೨೦೦೨)*

**ಪ್ರೊ॥ ಶಿವರಾಮಯ್ಯ**

ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ, ನಾಗರಬಾವಿ, ಬೆಂಗಳೂರು-೫೬೦ ೦೭೨

# ಬತ್ತಿಹೋದ ಸ್ಫೂರ್ತಿಯ ಸೆಲೆ ಸೇತುರಾಂ

ಬರೆಯುವ ಸಾಮರ್ಥ್ಯ, ದೇಶ ಪ್ರೇಮ, ಸಮಾಜ ಪ್ರೇಮ, ಹತ್ತು ಕಡೆ ಆಸಕ್ತಿ ಹರಿಯ ಬಿಡುವ ಪಾದರಸ ಚಟುವಟಿಕೆ, ಎಲ್ಲಾ ಒಟ್ಟಿಗೆ ಸೇರಿದ್ದು ಪತ್ರಕರ್ತ ಹುದ್ದೆಗೆ ನಿಷ್ಠರಾಗಿ, ಸಮಾಜದ ಮುಖವಾಣಿಯಾಗುವುದೇ ಮೂಲಭೂತ ಅವಶ್ಯಕತೆ ಎನ್ನುವುದನ್ನು ಕಾರ್ಯದಲ್ಲಿ ತೋರಿಸಿಕೊಟ್ಟ ಧೀಮಂತ ಪತ್ರಕರ್ತ ಇ. ಆರ್. ಸೇತುರಾಂ ಅವರನ್ನು ಕನ್ನಡ ನಾಡು ಇತ್ತೀಚೆಗೆ ಕಳೆದುಕೊಂಡಿತು.

ಪತ್ರಕರ್ತರಾಗಿ ಐದು ದಶಕಗಳ ಸಮೃದ್ಧ ಅನುಭವ ಹೊಂದಿದ್ದ ಶ್ರೀ ಸೇತುರಾಮ್ ಜನಿಸಿದ್ದು ನಂಜನಗೂಡಿನ ಒಂದು ಶ್ರೀಮಂತ ಕುಟುಂಬದಲ್ಲಿ. ಸಂಗೀತ, ಚಿತ್ರಕಲೆ ಮತ್ತು ಲಲಿತಕಲೆಗಳಿಗೆ ಪ್ರೋತ್ಸಾಹ ನೀಡುವ ಕುಟುಂಬ ಅದಾಗಿತ್ತು. ಖ್ಯಾತ ಸಂಗೀತ ಕಲಾವಿದರಾದ ಟಿ. ಚೌಡಯ್ಯ, ಬಿಡಾರಂ ಕೃಷ್ಣಪ್ಪ, ಸೋಮಯ್ಯ ಮತ್ತು ಅರಿಯಾಕುಡಿ ರಾಮಾನುಜ ಅಯ್ಯಂಗಾರ್ ನಂಜನಗೂಡು ಮನೆಗೆ ಸದಾ ಭೇಟಿ ನೀಡುತ್ತಿದ್ದರು. ಇವರ ಪ್ರಭಾವ ಸೇತುರಾಮ್ ಮೇಲಾಯಿತು.

ನಂಜನಗೂಡು ಮನೆಗೆ ಭೇಟಿ ನೀಡುತ್ತಿದ್ದ ಖ್ಯಾತ ನಾಟಕಕಾರ ಟಿ. ಪಿ. ಕೈಲಾಸಂ ಅವರಿಂದ ಸೇತುರಾಮ್ ಸಾಕಷ್ಟು ಪ್ರಭಾವಿತರಾಗಿದ್ದರು. ೧೯೩೬-೩೭ರಲ್ಲಿ ಕೈಲಾಸಂ ಅವರ ನಿಕಟ ಸಂಪರ್ಕಕ್ಕೆ ಬಂದು 'ಜಾಲಿ ಅಮೆಟರ್ಸ್ ಲೀಗ್' ಹೆಸರಿನ ಒಂದು ಹವ್ಯಾಸಿ ನಾಟಕ ಕಂಪೆನಿ ಕಟ್ಟಿ, ಹಾಡಿ, ಆಡಿ, ಕುಣಿದು, ಅಭಿನಯಿಸಿದ್ದು ಸೇತುರಾಮ್ ಅವರ ಬದುಕಿನ ಅಪೂರ್ವ ಅಧ್ಯಾಯ. ಅದರಿಂದಾಗಿ ರಂಗಭೂಮಿ ಬಗ್ಗೆ ಅಧಿಕಾರಯುತವಾಗಿ ಮಾತಾಡಬಲ್ಲವರಾಗಿ ಮೂಡಿಬಂದರು. ರಂಗಭೂಮಿ ಮತ್ತು ಜೀವನದ ಬಗ್ಗೆ ಭಾಷಣ ಮಾಡುವುದರ ಜೊತೆಗೆ ಬರೆಯಲೂ ಆರಂಭಿಸಿದರು. ಅವರಿಗೆ ಇತ್ತೀಚೆಗೆ ಕೈಲಾಸಂ ಪ್ರಶಸ್ತಿಯನ್ನು ಸಹ ನೀಡಲಾಗಿತ್ತು.

ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪದವಿಯಲ್ಲಿ ರ್‍ಯಾಂಕ್ ಪಡೆದ ಅವರು ಕಲಿಯುತ್ತಿದ್ದಾಗಲೇ ಸ್ವಾತಂತ್ರ್ಯಾಂದೋಲನದಲ್ಲಿ ತೊಡಗಿದರು. ೧೯೩೭ರಲ್ಲಿ ಶಿವಪುರ ಕಾಂಗ್ರೆಸ್ ಉಪಸಮಿತಿಗೆ ವಿದ್ಯಾರ್ಥಿ ನಾಯಕನಾಗಿ ಹೋಗಿದ್ದು ಅವರ ಹೆಗ್ಗಳಿಕೆ. ಆ ದಿನಗಳಲ್ಲಿ ತಗಡೂರು ರಾಮಚಂದ್ರರಾಯರು, ತಿ. ತಾ. ಶರ್ಮ, ಖಾದ್ರಿ ಶಾಮಣ್ಣ, ಡಿ. ವಿ. ಗುಂಡಪ್ಪ, ವೀರಕೇಸರಿ ಸೀತಾ ರಾಮಯ್ಯ, ಆಲೂರು ವೆಂಕಟರಾಯರು – ಮುಂತಾದ ವರ ಸಾಂಗತ್ಯ ದೊರಕಿತು. ಸ್ವಾತಂತ್ರ್ಯ ಹೋರಾಟದಲ್ಲಿ ಪತ್ರಕರ್ತರಾಗಿ ಭಾಗವಹಿಸುವಾಗ ಶೇಷಪ್ಪನವರ 'ಕಿಡಿ' ಪತ್ರಿಕೆಗಾಗಿ ಮತ್ತು 'ಸ್ವತಂತ್ರೋದಯ' ಪತ್ರಿಕೆಗಾಗಿ ಭೂಗತರಾಗಿ ಬರೆದರು.

ಹೊಸತು ಪತ್ರಿಕೆಯ ಮೊದಲ ಸಂಚಿಕೆಯನ್ನು ಬಿಡುಗಡೆ ಮಾಡಿ ಉಪಯುಕ್ತ ಸಲಹೆಗಳನ್ನು ನೀಡಿದ್ದ ಶ್ರೀ ಇ. ಆರ್. ಸೇತುರಾಂ ಅವರಿಗೆ ಪತ್ರಿಕೆ ಗೌರವ ಪೂರ್ವಕವಾಗಿ ನಮನ ಸಲ್ಲಿಸುತ್ತದೆ.

ಸೇತುರಾಮ್ ಅವರು ಪತ್ರಿಕಾ ವೃತ್ತಿಯನ್ನು ಆರಂಭ ಮಾಡಿದ್ದು ಮುಂಬಯಿಯ 'ವಿಜಯ ಪಬ್ಲಿಷರ್ಸ್' ಪತ್ರಿಕಾ ಉಪಸಂಪಾದಕರಾಗಿ. ಆನಂತರ ೧೯೪೮ರಲ್ಲಿ 'ಪ್ರಜಾವಾಣಿ' ಪತ್ರಿಕೆ ಆರಂಭಗೊಂಡಾಗ ಅದರ ಸುದ್ದಿ ಸಂಪಾದಕರಾಗಿ ಸೇರಿದರು. ಆಗ ಕರ್ನಾಟಕದ ಜನಮನದಲ್ಲಿ ನೆಲೆ ನಿಂತಿದ್ದ ಜನವಾಣಿ, ತಾಯಿನಾಡು ಮತ್ತು ವಿಶ್ವ ಕರ್ನಾಟಕ ಪತ್ರಿಕೆಗಳ ಮಧ್ಯೆ ಪ್ರಜಾವಾಣಿಗೆ ಸ್ಥಾನ ಕಲ್ಪಿಸಲು ಪ್ರಯತ್ನಿಸಿದರು.

ಸ್ವಾತಂತ್ರ್ಯ ಸಮರದಲ್ಲಿ ಧೀರೋದಾತ್ತ ಬರವಣಿಗೆಯೇ ಪತ್ರಿಕೆಗಳ ಬಂಡವಾಳವಾಗಿತ್ತು. ದೇಶಭಕ್ತಿಯನ್ನು ದೇಶದ ಜನರ ಧಮನಿಗಳಲ್ಲಿ ಹರಿಯಿಸುವುದು ಅವುಗಳ ಮುಖ್ಯ ಧ್ಯೇಯವಾಗಿತ್ತು. ಸ್ವಾತಂತ್ರ್ಯ ದೊರೆತು ಸಂಗ್ರಾಮದ ಬಿಗಿ ಕಡಿದ ಮೇಲೆ ಪತ್ರಿಕಾ ಬರವಣಿಗೆ ಆಕಾರ- ಅಳತೆಯಿಲ್ಲದಂತಾಗಿಬಿಟ್ಟಿತು. ಆಗ ರಂಗ ಪ್ರವೇಶಿಸಿದ್ದು ಸೇತುರಾಮ್ ಅವರಂತಹ ಬಹುಶ್ರುತ ಪ್ರತಿಭಾವಂತರು.

ಆಗ ಪತ್ರಿಕಾ ಬರವಣಿಗೆಯಲ್ಲಿ ವಿಷಯ ವಿಂಗಡಣೆ ಇರಲಿಲ್ಲ. ತಲೆಬರಹದ 'ಟೈಪ್ ಸಂಗ್ರಹ' ಇರಲಿಲ್ಲ. ಓದುಗ ಮಹಾಶಯನ ಬ್ರಹ್ಮಾಂಡ ಹೊಟ್ಟೆಗೆ ಹತ್ತು ಹಲವು ವಿಷಯಗಳನ್ನು ನೀಡಿ ತಣಿಸುವ 'ಸಮೃದ್ಧಿ' ಇನ್ನೂ ಬೆಳೆಯಬೇಕಾಗಿತ್ತು. ಸೇತುರಾಮ್ ಈ ಬದಲಾವಣೆಗಳನ್ನೆಲ್ಲ ಕರಾರುವಾಕ್ಕಾಗಿ, ಹಂತ ಹಂತವಾಗಿ ಬೆಳೆಸಿದರು. ಪುಟ ವಿನ್ಯಾಸ ಮತ್ತು ಅಂದವಾದ ಮುದ್ರಣಕ್ಕಾಗಿ ಸೇತುರಾಮ್ ನೇತೃತ್ವದ ಪ್ರಜಾವಾಣಿ ಆರು ಬಾರಿ ರಾಷ್ಟ್ರೀಯ ಪ್ರಶಸ್ತಿಯನ್ನು ಗೆದ್ದುಕೊಂಡಿತು. ಇದರಿಂದ ಅವರು ಆಧುನಿಕ ಪತ್ರಿಕಾ ಬರವಣಿಗೆಯ ಹರಿಕಾರನೆನಿಸಿದರು.

ಸೇತುರಾಮ್ ಅವರು ೧೯೬೫ರಲ್ಲಿ 'ಸುಧಾ' ವಾರಪತ್ರಿಕೆಯ ಸಂಸ್ಥಾಪಕ ಸಂಪಾದಕರಾಗಿ ಕೆಲಸ ವಹಿಸಿಕೊಂಡ ಕೂಡಲೆ ಪತ್ರಿಕೆಯ ಪ್ರಸಾರದಲ್ಲಿ ಗಣನೀಯ ಹೆಚ್ಚಳ ಉಂಟಾಯಿತು. ರಕ್ಷಾಪುಟಕ್ಕೆ ಆಕರ್ಷಕ ಪೇಂಟಿಂಗ್ಸ್ ಅನ್ನು ಹಾಕಿದರು. ಮಹಿಳೆಯರಿಗೆ, ಸಾಹಿತ್ಯಾಸಕ್ತರಿಗೆ, ಶೈಕ್ಷಣಿಕ ಕ್ಷೇತ್ರದಲ್ಲಿರುವವರಿಗೆ, ಜನಸಾಮಾನ್ಯರಿಗೆ ರುಚಿಸುವ ಹಾಗೆ ವಿಷಯ ವೈವಿಧ್ಯ ನೀಡಿದರು. 'ಬಣ್ಣದ ಬದುಕು' ಅನ್ನೋ ಮಾಲಿಕೆಯಲ್ಲಿ ಗುಬ್ಬಿ ವೀರಣ್ಣ, ನಾಗೇಂದ್ರ ರಾಯರು – ಮುಂತಾದವರ ಬಗ್ಗೆ ಸುದೀರ್ಘ ಲೇಖನಗಳು ಪ್ರಕಟವಾದವು.

ಪತ್ರಿಕೋದ್ಯಮವನ್ನು ವಿಶ್ವವಿದ್ಯಾಲಯ, ಕಾಲೇಜುಗಳಲ್ಲಿ ಕಲಿಸುವ ಈಗಿನ ಪದ್ಧತಿಯ ಹಿಂದೆ ಸೇತುರಾಮ್‌ರಂಥ ದಿಗ್ಗಜರು ಹಾಕಿಕೊಟ್ಟ ಗಟ್ಟಿ ಅಡಿಪಾಯ ಇದೆ. ಅಲ್ಲದೆ ಅವರು ಕನ್ನಡ ಸಾಹಿತ್ಯ ಪರಿಷತ್ ಮತ್ತು ಭಾರತೀಯ ವಿದ್ಯಾಭವನಗಳಲ್ಲಿ ಪತ್ರಿಕೋದ್ಯಮ ವಿಷಯದ ಬಗ್ಗೆ ಪ್ರವಚನ ನೀಡುತ್ತಿದ್ದರು.

ಸೇತುರಾಮ್ ವೃತ್ತಿಯಿಂದ ನಿವೃತ್ತರಾದರೂ ಪತ್ರಿಕಾರಂಗದ ಮೇಲಿನ ಆಸಕ್ತಿಯನ್ನು ಕಡಿಮೆ ಮಾಡಿರಲಿಲ್ಲ. ಇಂಗ್ಲಿಷ್ ಮತ್ತು ಕನ್ನಡ ಪತ್ರಿಕೆಗಳಿಗೆ ಸದಾ ಬರೆಯುತ್ತಿದ್ದರು. ವಾರ್ತಾ ಇಲಾಖೆ ಪ್ರಕಟಿಸುವ 'ಮಾರ್ಚ್ ಆಫ್ ಕರ್ನಾಟಕ' ಎಂಬ ಮಾಸ ಪತ್ರಿಕೆಗೆ ನಿರಂತರ ಬರೆಯುತ್ತಿದ್ದರು. ಸಾಯುವ ತನಕವೂ ಶಿಲ್ಪಕಲೆಯಿಂದ ಹಿಡಿದು ಸಂಗೀತದವರೆಗಿನ ಹಾಗೂ ವೈಜ್ಞಾನಿಕ ಬೆಳವಣಿಗೆಗೆ ಸಂಬಂಧಿಸಿದ ಎಲ್ಲಾ ಹೊಸ ಪುಸ್ತಕಗಳನ್ನು ಓದುತ್ತಿದ್ದರು. ತಮ್ಮ ಜ್ಞಾನ ಹೆಚ್ಚಿಸಿಕೊಳ್ಳುತ್ತಿದ್ದರು. ಜ್ಞಾನತೃಷೆ ಯಾರಿಗೂ ಸ್ಫೂರ್ತಿ ನೀಡುವಂತಿತ್ತು.

ಪತ್ರಿಕೋದ್ಯಮ ಅಲ್ಲದೆ ಇಂಗ್ಲಿಷ್, ಕನ್ನಡ ಸಾಹಿತ್ಯಗಳನ್ನು ಪಾಂಡಿತ್ಯಪೂರ್ಣವಾಗಿ ಸವಿಯಬಲ್ಲವರಾಗಿದ್ದ ಸೇತುರಾಮ್, ತೆಲುಗಿನ ಮೇರು ಲೇಖಕ ಗುಡಿಪಾಟಲು ಚಲಂರ ಕೆಲ ಕೃತಿಗಳನ್ನು ಭಾಷಾಂತರ ಮಾಡಿದ್ದಾರೆ. ಇಂಗ್ಲಿಷ್‌ನ 'ರೀಡರ್ಸ್ ಡೈಜೆಸ್ಟ್' ಮಾದರಿಯಲ್ಲಿ ಕನ್ನಡದಲ್ಲೂ ಒಂದು ಡೈಜೆಸ್ಟ್ ತರಬೇಕೆಂಬುದು ಅವರ ಅನೇಕ ಆಕಾಂಕ್ಷೆಗಳಲ್ಲಿ ಒಂದಾಗಿತ್ತು. ಗ್ರಂಥ ಸಂಪಾದನೆ, ಪ್ರಕಟಣೆ, ಗ್ರಂಥಾಲಯಗಳ ಅಭಿವೃದ್ಧಿ, ಹೊಸ ತಾಂತ್ರಿಕ ವಿಧಾನ, ಮೈಕ್ರೋ ಫಿಲ್ಮಿಂಗ್ ಅನ್ನು ಅಳವಡಿಸುವಲ್ಲಿ ವಿಶೇಷ ಆಸಕ್ತಿ ವಹಿಸಿದ್ದ ಸೇತುರಾಮ್ ಕಲೆ, ಪಠ್ಯ, ತಾಂತ್ರಿಕ ಜ್ಞಾನ ಸಮರ್ಪಕವಾಗಿ ಬಳಸಿ ಸಾಕ್ಷ್ಯಚಿತ್ರ ನಿರ್ಮಿಸು ವುದರಲ್ಲಿಯೂ ಸಿದ್ಧಹಸ್ತರಾಗಿದ್ದರು. ಅವರ ಟೆಲಿಚಿತ್ರ 'ದಿ ಫೋರ್ತ್ ಸ್ಟೇಜ್'ಗೆ ಅಮೆರಿಕ ಪ್ರತಿಷ್ಠಿತ 'ಗೋಲ್ಡನ್ ಈಗಲ್' ಪ್ರಶಸ್ತಿ ದೊರೆತರೆ, ಬಿಬಿಸಿಗೆ ನೀಡಿದ ಅದ್ವೈತ ಸನ್ಯಾಸದ ಬಗೆಗಿನ ಸಾಕ್ಷ್ಯಚಿತ್ರಕ್ಕೆ ಉತ್ತಮ ಸಾಕ್ಷ್ಯಚಿತ್ರಕ್ಕಾಗಿ ನೀಡುವ ಬಹುಮಾನ ದೊರೆತಿದೆ.

ಕರ್ನಾಟಕ ಮತ್ತು ಹಿಂದೂಸ್ತಾನಿ ಎರಡೂ ಪದ್ಧತಿಗಳ ಸಂಗೀತದಲ್ಲಿ ಪರಿಶ್ರಮ ಹೊಂದಿದ್ದ ಸೇತುರಾಮ್ ೧೯೭೦ ರಿಂದ ೧೧ ವರ್ಷಗಳ ತನಕ ಕರ್ನಾಟಕ ಗಾನಕಲಾ ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದರು. ವ್ಯಾಸ್, ಅಬ್ದುಲ್ ಕರೀಂ ಖಾನ್, ಮಲ್ಲಿಕಾರ್ಜುನ ಮನ್ಸೂರ್, ಬಸವರಾಜ ರಾಜಗುರು, ರಾಮರಾವ್ ನಾಯಕ್ ಮುಂತಾದ ಸಂಗೀತ ಕ್ಷೇತ್ರದ ಖ್ಯಾತನಾಮರ ಕುರಿತು ಆರ್ಕೈವ್ಸ್ ತಯಾರಿಸಲು ಆಕಾಶವಾಣಿ ಮತ್ತು ದೂರದರ್ಶನಗಳಿಗೆ ನೆರವು ನೀಡಿದ್ದ ಸೇತುರಾಮ್ ಚಿತ್ರಕಲೆ, ಶಿಲ್ಪಕಲೆಯ ವಿಮರ್ಶಕರೂ ಆಗಿದ್ದರು.

ಎಂದೂ ಪ್ರಶಸ್ತಿಗಾಗಿ ಹಾತೊರೆಯದ ಸೇತುರಾಮ್‌ಗೆ ದೊರೆತಿರುವ ಪ್ರಶಸ್ತಿಗಳು ಹಲವು. ಅವುಗಳಲ್ಲಿ ಕೆಲವೆಂದರೆ ೧೯೯೦-೯೧ರಲ್ಲಿ ರಾಜ್ಯ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ, ೧೯೯೩ರಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಮತ್ತು ೧೯೯೬ರಲ್ಲಿ ಪತ್ರಿಕಾ ಅಕಾಡೆಮಿ ಪ್ರಶಸ್ತಿ.

ಯಾವುದೇ ಪತ್ರಿಕಾ ಸಂಸ್ಥೆ ಅಥವಾ ಸಂಘಟನೆಗಳಲ್ಲಿ ಯಾವುದೇ ಹುದ್ದೆಯನ್ನು ಬಯಸದ ಸೇತುರಾಮ್ ತೀಕ್ಷ್ಣ ಬರವಣಿಗೆ ಮತ್ತು ಸಂಸ್ಥೆಯ ಒಳಗೆ ಮತ್ತು ಹೊರಗೆ ನಿಷ್ಪಕ್ಷಪಾತತೆ ಕಾಯ್ದುಕೊಳ್ಳುವುದರಲ್ಲಿ ಅಗ್ರಗಣ್ಯರಾಗಿದ್ದರು. ಅಧಿಕಾರ ರಾಜಕೀಯದಿಂದ ಯಾವತ್ತೂ ದೂರ ಉಳಿದಿದ್ದ ಸೇತುರಾಮ್ ಯಾರದೇ ಭಯದಿಂದ ಅಥವಾ ಯಾರದೇ ಪರವಾಗಿ ಎಂದೂ ಕೆಲಸ ಮಾಡಲಿಲ್ಲ. ಅವರ ಜೀವನ ವೈಯಕ್ತಿಕವಾಗಿ ಮತ್ತು ವೃತ್ತಿಯಲ್ಲಿ ಅವರ ಸಂಪರ್ಕಕ್ಕೆ ಬಂದ ಎಲ್ಲರಿಗೂ ಸ್ಫೂರ್ತಿಯ ಸೆಲೆಯಾಗಿತ್ತು ಹಾಗೂ ಧೈರ್ಯದ ಒರತೆಯಾಗಿತ್ತು.

**ಸತೀಶ್ ಕುಮಾರ್ ಅಂಡಿಂಜೆ**
ಪತ್ರಿಕೋದ್ಯಮ ಉಪನ್ಯಾಸಕರು, ಎಂ.ಜಿ.ಎಂ. ಕಾಲೇಜು, ವಿದ್ಯಾನಗರ, ಮಣಿಪಾಲ-೫೭೬ ೧೧೯

■ ಸತ್ಯನಾರಾಯಣ, ಬಿ. ಆರ್.



# ಬಸವ ಬುತ್ತ ಹೋದರು

ಢಣ ಢಣ, ಢಣ ಢಣ ಎಂದು ಲಾಂಗ್ ಬೆಲ್ಲು ಹೊಡೆದುದ್ದೇ ತಡ, ಬಸವ ದಢಕ್ಕನೆದ್ದು ಕುಳಿತುಕೊಂಡ. ಸುಮಾರು ಒಂದು ಗಂಟೆಯಿಂದ ಮಿಂಚು ಗುಡುಗುಗಳ ಬಗ್ಗೆ ಅದೇ ಧಾಟಿಯಲ್ಲಿ ಪಾಠ ಮಾಡುತ್ತಿದ್ದ ಕೇಡಿ ಮಾಸ್ಟರರ ಗುಡುಗಿನಂಥ ದನಿಗೂ ಎಚ್ಚರವಾಗದಿದ್ದ ಬಸವ, ಲಾಂಗ್ ಬೆಲ್ ಕೇಳಿ ಎಚ್ಚರವಾಗಿದ್ದು ಹಿಂದಿನ ಡೆಸ್ಕಿನವರಿಗೆ ಬಿಟ್ಟು ಬೇರಾರಿಗೂ ತಿಳಿಯಲಿಲ್ಲ. ತನ್ನ ಅತಿರೇಕದ ವರ್ತನೆಗಳಿಂದ ವಿಜ್ಞಾನದ ಮಾಸ್ಟರ್ ಕೆ. ದೇವರಾಜು ಅನ್ನುವವರು ಹುಡುಗರ ಬಾಯಲ್ಲಿ ಕೇಡಿ ಆಗಿ ಚಿರಪರಿಚಿತರಾಗಿದ್ದವರು. ಎಲ್ಲಾ ಕ್ಲಾಸುಗಳಿಗೂ ಮುಂದಿನ ಡೆಸ್ಕಿನಲ್ಲಿ ಕುಳಿತುಕೊಳ್ಳುತ್ತಿದ್ದ ಬಸವ ಕೇಡಿ ಕ್ಲಾಸಿಗೆ ಮಾತ್ರ ಹಿಂದಿನ ಬೆಂಚಿಗೆ ಹೋಗುತ್ತಿದ್ದ. ಇಂದು ಬೆಳಿಗ್ಗೆಯಿಂದ ಹೊಟ್ಟೆಗೆ ಏನೂ ಬೀಳದಿದ್ದುರಿಂದಲೂ, ಬೆಳಿಗ್ಗೆ ಹೆಡ್ಮಿಸ್ ನಾಳೆ ಫೀಸ್ ಕಟ್ಟದಿದ್ದರೆ ಕ್ಲಾಸಿಗೆ ಬರಬೇಡ ಎಂದಿದ್ದರಿಂದಲೂ ಬಸವ ಹೆಚ್ಚು ಸುಸ್ತಾಗಿಹೋಗಿದ್ದ. ಆದ್ದರಿಂದಲೇ ಹಿಂದಿನ ಬೆಂಚಿನಲ್ಲಿ, ಹೊಟ್ಟೆಯಲ್ಲಿ ನಡೆಯುತ್ತಿದ್ದ ಕೋಲಾಹಲವನ್ನು ಹತ್ತಿಕ್ಕಲೋ ಎಂಬಂತೆ ಒಂದು ಕೈಯನ್ನು ಹೊಟ್ಟೆಗೆ ಕೊಟ್ಟುಕೊಂಡು ನಿದ್ದೆ ಹೋಗಿದ್ದ. ಹುಡುಗರ ಸಂಖ್ಯೆ ನೂರರ ಗಡಿ ದಾಟಿದ್ದರಿಂದ ವಿಜ್ಞಾನದ ಮಾಸ್ಟರವರ ಕಣ್ಣಿಗೆ ಬೀಳುವ ಭಯವಿರಲಿಲ್ಲ.

ಹುಡುಗರೆಲ್ಲ 'ಹೋ' ಎಂದು ಹೊರಗೆ ಹೋಗಿಯಾಗಿತ್ತು. ಬಸವ ಎದ್ದು ನಿಲ್ಲಲು ಹೋದರೆ ಕಾಲುಗಳು ಮುಷ್ಕರ ಹೂಡುತ್ತಿದ್ದವು. 'ಗತಿಯಿಲ್ಲದಿದ್ದ ಮೇಲೆ ಯಾವ್ದಾದ್ರು ಗೌರ್ನಮೆಂಟ್ ಸ್ಕೂಲಿಗೆ ಹೋಗ್ಬೇಕಾಗಿತ್ತು' ಎಂದಿದ್ದ ಹೆಡ್ಮಿಸ್ಸಿನ ಮಾತು ನೆನಪಿಗೆ ಬಂದು, 'ಯಾಕೆ? ಬಡವರೇನು ಒಳ್ಳೆ ಸ್ಕೂಲಲ್ಲಿ ಓದಬಾರದಾ?' ಎನ್ನುವ ತನ್ನ ಪ್ರಶ್ನೆಯನ್ನು ಶಬ್ದ ರೂಪಕ್ಕೆ ಇಳಿಸಲಾಗದ್ದಕ್ಕೆ ಈಗ ಬೇಜಾರು ಮಾಡಿಕೊಂಡ. ಹೇಗೋ ಧೈರ್ಯ ವಹಿಸಿ ಎದ್ದು ಹೆಗಲಿಗೆ ಬ್ಯಾಗನ್ನು ತೂಗಿಸಿಕೊಂಡು ಹೊರಬಿದ್ದವನ ಕಣ್ಣಿಗೆ ಬಿದ್ದದ್ದು ಕನ್ನಡ ಮಿಸ್ಸು ಅನಿತಾ. ಈತನ ತೂಕಡಿಕೆಯ ನಡಿಗೆಯನ್ನು ಗಮನಿಸಿದ ಅನಿತಾ 'ಏಕೋ ಬಸವ ಹುಷಾರಿಲ್ಲವಾ? ನಿದ್ದೆ ಮಾಡಿದಂತೆ ಕಾಣುತ್ತೀಯಾ' ಎಂದಾಗ ಬಸವನಿಗೆ ಸಕತ್ ಆಶ್ಚರ್ಯವಾಯಿತು. ನಾನು ನಿದ್ದೆ ಮಾಡುತ್ತಿದ್ದುದ್ದು ಕೇಡಿ ಮಾಸ್ಟರಿಗೇ ಗೊತ್ತಾಗಲಿಲ್ಲ! ಆದರೆ ಈ ಅನಿತಾ ಮಿಸ್ಸಿಗೆ ಗೊತ್ತಾದದ್ದು ಹೇಗೆ? ಎಂದು ತಲೆಕೆಡಿಸಿಕೊಂಡ ಬಸವ 'ಇಲ್ಲ ಮಿಸ್. ಹೊಟ್ಟೆ ಹಸಿವು' ಎಂದು ಅಪ್ರಯತ್ನಪೂರ್ವಕವಾಗಿ ಹೇಳಿ 'ಇಲ್ಲ ಮಿಸ್. ನನ್ಗೇನು ಆಗಿಲ್ಲ' ಎಂದುಬಿಟ್ಟ. ಅದೇ ಉಸಿರಿನಲ್ಲಿ, ಕ್ಷಣಮಾತ್ರವೂ ಯೋಚಿಸದೆ 'ಒಂದ್ನಿಮಿಷ ಇರು ಬಂದೆ' ಎಂದು ಮತ್ತೆ ಸ್ಟಾಫ್ ರೂಮಿನ ಕಡೆಗೆ ಹೋದರು. ಅದೇ ರೂಮಿನಿಂದ ತಮ್ಮ ಸೀಮೇ ಸುಣ್ಣದ ಕೈಯನ್ನು ತೊಳೆಯಲು ಬಂದ ಕೇಡಿ ಮಾಸ್ಟರ್ 'ಏಕೊ ಭಡವಾ ನನ್ನ ಕ್ಲಾಸಿಗೆ ಬಂದಿರ್ಲಿಲ್ಲ?' ಎಂದು ಗುಡುಗಿದರು. ತೊಡೆಯಲ್ಲುಂಟಾದ ನಡುಕವನ್ನು ತಡೆಯುತ್ತ, 'ಇಲ್ಲ ಸಾರ್. ಬಂದಿದ್ದೆ ಸಾರ್. ನಿಮ್ಮ ಗುಡುಗು ಮಿಂಚು ಕೇಳಿದೆ ಸಾರ್' ಎಂದು ತಡಬಡಿಸಿದ. ತಾವು ಕೇಳಿದ್ದ ಪ್ರಶ್ನೆಯನ್ನು ಆಗಲೇ ಮರೆತಿದ್ದ ಕೇಡಿ ಮಾಸ್ಟರ್, ಬಸವನನ್ನು ಒಂದು ಪ್ರಾಣಿಯೋ ಎಂಬಂತೆ ನೋಡಿ ಒಳಗೆ ಹೋದರು. ಆಗ ಹೊರಗೆ ಬಂದ ಅನಿತಾ ಮಿಸ್, 'ತಗಳೊ. ಇಲ್ಲಿ ಒಂದ್ನಾಲ್ಕು ಬಿಸ್ಕೆಟ್ ಇದೆ ತಿಂದ್ಕೊ. ಹಾಗೆ ಅಲ್ಲಿ ಎಲ್ಲಾದ್ರು ಕಾಫಿನೊ ಟೀನೊ ಕುಡ್ಕೊ' ಎಂದು, ಒಂದು ಅರ್ಧ ಖಾಲಿಯಾಗಿದ್ದ ಬಿಸ್ಕೆಟ್ ಪ್ಯಾಕನ್ನು, ಐದು ರೂಪಾಯಿ ನೋಟನ್ನು ಕೊಟ್ಟರು. ಅದನ್ನು ತೆಗೆದುಕೊಳ್ಳುತ್ತಲೇ, ನಮಸ್ಕರಿಸುವವನಂತೆ ತಮ್ಮ ಮುಖವನ್ನೇ ನೋಡಿದ ಬಸವನ ತಲೆಯನ್ನು ಸವರಿ ಮುಗುಳ್ನಕ್ಕು ಹೊರಟರು. ಅನಿತಾ ಮೇಡಂ ಬಸವನಿಗೆ ತಿಂಡಿ ಕೊಡುವುದು ಇದೇ ಮೊದಲೇನಾಗಿರಲಿಲ್ಲ. ವಾರಕ್ಕೆ ಒಂದೆರಡು ದಿನವಾದರೂ ಆತನಿಗೆ ಕರೆದು ತಿಂಡಿ ಕೊಡುತ್ತಿದ್ದರಲ್ಲದೆ ಮನೆಗೆ ಕರೆದುಕೊಂಡು ಹೋಗಿ, ಅಲ್ಲಿಯೂ ತಿಂಡಿ ಮುಂತಾದವನ್ನು ಕೊಡುತ್ತಿದ್ದರು. ಕೆಲವು ಬಾರಿ ನೋಟ್ ಪುಸ್ತಕಗಳನ್ನು, ಓದಲು ಕಾಮಿಕ್ಸ್ ಪುಸ್ತಕಗಳನ್ನು ಕೊಟ್ಟಿದ್ದರು. ಆದರೆ ಎಂದೂ ತನ್ನನ್ನು ಕೇಡಿ ಮಾಸ್ಟರಂತೆ 'ಭಡವಾ' ಎಂದಾಗಲಿ, ಹೆಡ್ಮಿಸ್ಸಿನಂತೆ 'ಗತಿಯಿಲ್ಲದವನು' ಎಂದಾಗಲಿ ಕರೆದಿರಲಿಲ್ಲ. ಅನಿತಾ ಮೆಡಂ ಮರೆಯಾಗುವವರೆಗೂ ನೋಡುತ್ತಿದ್ದ ಬಸವನಿಗೆ 'ಅನಿತಾ ಮಿಸ್ ದೇವರೇ ಇರ್ಬೇಕು. ನಾನು ನಿದ್ದೆ

ಮಾಡಿದ್ದು ಅವರಿಗೆ ಗೊತ್ತಾಗುತ್ತೆ. ನಾನು ಪಾಠ ಓದುವಾಗ ತಪ್ಪಾದ್ರೆ ತಕ್ಷಣ ಅವ್ರಿಗೆ ಗೊತ್ತಾಗುತ್ತೆ. ನಾನು ಹಸ್ಕೊಂಡಿದ್ರೆ ಗೊತ್ತಾಗುತ್ತೆ. ದೇವ್ರಿಗೆ ಎಲ್ಲಾ ಗೊತ್ತಾಗುತ್ತೆ ಅಂತೆ ಅವ್ವ ಹೇಳ್ತಿರ್ತಾಳೆ' ಅಂದುಕೊಂಡ ಬಸವನಿಗೆ ತನ್ನ ಅವ್ವ, ತಂಗಿ ಪುಟ್ಟಿಯ ನೆನಪು ಬಂದು ಮನೆಯ ಕಡೆಗೆ ಹೊರಟ. ಕೈಯಲ್ಲಿದ್ದ ಬಿಸ್ಕೆಟ್ಟನ್ನು ತಿನ್ನಬೇಕೆನಿಸಲಿಲ್ಲ. ಮನೆಗೆ ಹೋಗಿ ತಂಗಿಗೂ ಒಂದೆರಡು ಕೊಟ್ಟು ತಿನ್ನಬೇಕು. ಅವಳೂ ಬೆಳಿಗ್ಗೆಯಿಂದ ಹಸಿದುಕೊಂಡಿರಬಹುದು. ಬೆಳಿಗ್ಗೆ ಬರುವಾಗ ಮನೇಲಿ ಏನೂ ಇಲ್ಲದೆ ಅವ್ವ 'ನೀನು ಸ್ಕೂಲಿಂದ ಬರೊವೊತ್ಗೆ ಏನಾದ್ರು ಮಾಡಿರ್ತೀನಿ' ಎಂದು ಹೇಳಿದ್ದು ಜ್ಞಾಪಕಕ್ಕೆ ಬಂದು, ನಡೆಯುತ್ತಿದ್ದವನು ಓಡತೊಡಗಿದ.

* * *

ಮನೆ ತಲುಪಿದಾಗ ಬಸವನ ಕಣ್ಣಿಗೆ ಬಿದ್ದುದು ಮಾಮೂಲು ಚಿತ್ರವೆ. ತಾಯಿ ಬಾಗಿಲ ಬಳಿಯಲ್ಲಿ ಕುಳಿತುಕೊಂಡು, ಎರಡೂ ಕಾಲನ್ನು ನೀಡಿಕೊಂಡು, ಪಕ್ಕದಲ್ಲಿ ಮೊರವನ್ನು, ಅದರಲ್ಲಿ ಹೊಗೆಸೊಪ್ಪು ಮತ್ತು ಕತ್ತರಿಸಿದ ತೂಪ್ರದ ಎಲೆಯನ್ನು ಇಟ್ಟುಕೊಂಡು ಬೀಡಿ ಕಟ್ಟುತ್ತಿದ್ದಳು. ತಂಗಿ ಪುಟ್ಟಿ ಅವ್ವನ ತೊಡೆಯ ಮೇಲೆ ಮಲಗಿಕೊಂಡು ಕೈಯಲ್ಲಿ ಒಂದು ತೂಪ್ರದ ಎಲೆಯನ್ನು ಹಿಡಿದುಕೊಂಡು ಆಡುತ್ತಿದ್ದಳು. 'ಪುಟ್ಟಿ, ಅಣ್ಣ ಬಂದ. ಏಳು ಅವನಿಗೊಂದಿಷ್ಟು ಹೊಟ್ಟೆಗೇನಾದ್ರು ಮಾಡುವ' ಎಂದು ಮೇಲೇಳುತ್ತಿದ್ದ ಅವ್ವನನ್ನು ತಡೆದ ಬಸವ, 'ಅವ್ವ ನಮ್ಮ ಅನಿತಾ ಮಿಸ್ ಬಿಸ್ಕೆಟ್ ಕೊಟ್ಟವರೆ. ಈಗ ಅದನ್ನೆ ತಿಂತೀನಿ. ಆಮೇಲೆ ಊಟ ಮಾಡ್ತೀನಿ' ಎಂದ. 'ಅಣ್ಣ ನಂಗೆ ಕೊಡಲ್ವ ?' ಎಂದು ತನ್ನೆಡೆಗೆ ಬಂದ ಪುಟ್ಟಿಯನ್ನು ಎತ್ತಿಕೊಂಡ ಬಸವ, 'ನಿನಗೆ ಕೊಡೊದಿಕ್ಕೆ ಅಂತಲೆ ನಾನು ಅಲ್ಲಿಂದ ಇಲ್ಲಿವರೆಗೂ ತಿಂದಲೆ ಬಂದಿರೋದು' ಎಂದು ಬಿಸ್ಕೆಟ್ ಪ್ಯಾಕ್ ಬಿಚ್ಚಿ ಅವಳಿಗೆ ಎರಡು ಕೊಟ್ಟು ತಾನು ಎರಡು ತಿಂದು ಮುಗಿಸಿದ. ಬಿಸ್ಕೆಟ್ ಮುಗಿಯುವ ಹೊತ್ತಿಗೆ ಹೆಡ್ಮಿಸ್ ಹೇಳಿದ್ದ ಮಾತುಗಳು ನೆನಪಿಗೆ ಬಂದು, 'ಅವ್ವ ನಾಳೆ ಫೀಸು ಕಟ್ಟದಿದ್ದರೆ ಸ್ಕೂಲಿಗೆ ಬರ್ಬೇಡ ಅಂದವರೆ ಹೆಡ್ಮಿಸ್ಸು' ಎಂದು ತನ್ನ ಅವ್ವ ಏನು ಹೇಳುತ್ತಾಳೆ ಎಂದು ಅವಳ ಮುಖವನ್ನೇ ನೋಡಿದ. ಅವಳು ಒಮ್ಮೆ ಅವನ ಮುಖವನ್ನಷ್ಟೆ ನೋಡಿ ಮತ್ತೆ ಬೀಡಿ ಕಟ್ಟುವ ತನ್ನ ಕಾಯಕದಲ್ಲಿ ತೊಡಗಿದ್ದನ್ನು ಕಂಡು, 'ಅವ್ವ ಎರಡು ತಿಂಗಳಿಂದು ಫೈನ್ ಸೇರಿ ನೂರೈದು ರೂಪಾಯಿ ಕೊಡ್ಬೇಕಂತೆ' ಎಂದ. ಈಗ ಬಾಯಿಬಿಟ್ಟ ಅವ್ವ, 'ಬಸವ ನಾನೇನ್ಮಾಡ್ಲಪ್ಪ. ಮನೇಲಿ ಮೂರು ಅಕ್ಕಿ ಕಾಳಿಲ್ಲ. ನಿಮ್ಮಪ್ಪ ನೋಡಿದ್ರೆ ಕುಡ್ದು ಕುಡ್ದು ಒಂದ್ರುಪಾಯಿನೂ ಕೊಡಲ್ಲ. ಇವತ್ತೊಂದಿನ ಆದ್ರು ಅವನು ಕುಡಿದು ಬರ್ಲಿಲ್ಲ ಅಂದ್ರೆ ನಾಳೆ ಏನಾರ ಮಾಡಿ ಪೀಸು ಕಟ್ಟಬಹುದು' ಎಂದು ಬೀಡಿ ಕಟ್ಟುವುದನ್ನು ನಿಲ್ಲಿಸಿ ಮೇಲೆದ್ದು 'ತಡಿ ನೋಡುವಾ' ಎಂದು ಬೀಡಿ ಕಟ್ಟುಗಳನ್ನು ತುಂಬಿಟ್ಟಿದ್ದ ಕುಕ್ಕೆಯನ್ನು ತಂದು ನೆಲಕ್ಕೆ ಸುರಿದಳು. 'ಬಸವ ಇದನ್ನ ಲೆಕ್ಕ ಮಾಡು. ನೋಡಾನ ಅದಾದ್ರು ವಸಿ ಆದ್ರೆ ಹೆಂಗಾದ್ರು ಮಾಡಿ ಪೀಸು ಕಟ್ಟಬಹುದು' ಎಂದಳು. ಬಸವನ ಲೆಕ್ಕ ಸಾಗಿ ಮುನ್ನೂರರ ಗಡಿ ದಾಟುವಷ್ಟರಲ್ಲಿ ಬೀಡಿಕಟ್ಟಿನ ರಾಶಿ ಕರಗಿತ್ತು. 'ಅವ್ವ ಮುನ್ನೂರು ಕಟ್ಟೈತೆ' ಎಂದ ಬಸವನಿಗೆ, 'ಹೆಂಗೂ ಎಪ್ಪತ್ತೈದು ರುಪಾಯಿ ಆಗುತ್ತೆ. ಇನ್ನು ಮೂವತ್ರುಪಾಯಿಗೇನು ಮಾಡದು ? ಇವೊತ್ತೊಂದಿನ ಆದ್ರು ಕುಡಿದಲೆ ಬಂದ್ರೆ ಏನಾರ ಮಾಡ್ಬೌದು' ಎನ್ನುತ್ತ ಎದ್ದು ಬೀಡಿಕಟ್ಟುಗಳನ್ನು ಚೀಲಕ್ಕೆ ತುಂಬತೊಡಗಿದಳು. ಅವ್ವನ ಕಾರ್ಯವನ್ನೇ ಗಮನಿಸುತ್ತಿದ್ದ ಬಸವನಿಗೆ ತನ್ನ ಜೇಬಿನಲ್ಲಿದ್ದ ಐದು ರುಪಾಯಿಗಳು ನೆನಪಿಗೆ ಬಂದು, 'ಅವ್ವ ಅನಿತಾ ಮಿಸ್ ಕಾಫಿ ಕುಡಿ ಅಂತ ಐದು ರುಪಾಯಿ ಕೊಟ್ಟಿದ್ರು. ಅದನ್ನು ಸೇರಿಸಿದ್ರೆ ಎಂಬತ್ತು ರುಪಾಯಿ ಆಗುತ್ತೆ. ಇನ್ನು ಇಪ್ಪತ್ತೈದು ರುಪಾಯಿ ಬೇಕು' ಎಂದ. 'ಇರ್ಲಿ ನೋಡಾನ. ಈಗ ನೀನು ಕತ್ಲಾಗದ್ರಲ್ಲಿ ವಸಿ ಓದ್ಕೊ ಹೋಗು' ಎಂದು ಮತ್ತೆ ಬೀಡಿ ಕಟ್ಟುವ ಕಡೆಗೆ ಗಮನ ನೀಡಿದಳು.

ಬಸವ ವಿಜ್ಞಾನದ ಕೇಡಿ ಮಾಸ್ಟರು ಮಾಡಿದ್ದ ಮಿಂಚು-ಗುಡುಗು ಪಾಠ ತೆಗೆದು ಓದಲು ಆರಂಭಿಸಿದ. ಸ್ವಲ್ಪ ಹೊತ್ತು ಓದುವಷ್ಟರಲ್ಲಿ ಮತ್ತೆ ಅನಿತಾ ಮೇಡಂ ನೆನಪಿಗೆ ಬಂದರು. ಪುಸ್ತಕ ಮಡಚಿಟ್ಟು ಕನ್ನಡದ ಪುಸ್ತಕ ಎತ್ತಿಕೊಂಡು, 'ನಡೆ ಮುಂದೆ ನಡೆ ಮುಂದೆ ಹಿಗ್ಗದಯೆ ಕುಗ್ಗದಯೆ ನಡೆ ಮುಂದೆ' ಎಂದು ಪದ್ಯವನ್ನು ರಾಗವಾಗಿ ಓದತೊಡಗಿದ. ಅನಿತಾ ಮೇಡಂ ಹೆಸರು ಎಷ್ಟು ಚೆನ್ನಾಗಿದೆ ಎನ್ನಿಸಿ ಪದ್ಯ ಓದುವುದನ್ನು ನಿಲ್ಲಿಸಿ ಯೋಚಿಸಿದ. ಅನಿತಾ ಅಂದರೆ ಏನು ? ತಿಳಿಯದೆ ತಲೆ ಕೊಡವಿದಂತೆ ಮಾಡಿದ. ಯಾವುದೋ ದೇವರ ಹೆಸರೇ ಇರಬೇಕು ಅನ್ನಿಸಿತು. ನನ್ನ ಹೆಸರು ಬಸವ. ಬಸವ ಅಂದ್ರೆ ಎತ್ತು. ನನಗೆ ಯಾರು ಈ ಎತ್ತು ಅನ್ನೊ ಹೆಸರಿಟ್ಟರು ಎಂದುಕೊಂಡು ಅವ್ವನ ಕಡೆಗೆ ತಿರುಗಿ, 'ಅವ್ವ ನನಗೆ ಯಾರು ಬಸವ ಅಂತ ಹೆಸರಿಟ್ಟಿದ್ದು ?' ಎಂದ. ಮಗ ಓದುವದನ್ನು ನಿಲ್ಲಿಸಿ ತಲೆ ಕೊಡವಿದ್ದನ್ನು ನೋಡುತ್ತಲೇ ಇದ್ದ ಅವ್ವ ಒಂದು ಕ್ಷಣ ತಡೆದು, 'ಇನ್ನಾರು ? ನಿಮ್ಮ ಚಿಕ್ಕಪ್ಪನೆ ಹೆಸರಿಟ್ಟಿದ್ದು. ಅದಾರೊ ಬಸವಣ್ಣನಂತೆ. ದೇವರ ಸಮಾನವಂತೆ. ಪ್ರತಿಯೊಬ್ಬರಲ್ಲೀನೂ ದೇವರನ್ನ ಕಾಣುತ್ತಿದ್ದನಂತೆ. ಅದಕ್ಕೆ ನೀನು ಅವನಾಗೆ ಆಗ್ಬೇಕು ಅಂತ ಬಸವ ಅಂತ ಹೆಸರಿಟ್ಟು ನಿನ್ನ ಸ್ಕೂಲಿಗೆ ಸೇರಿಸ್ದ' ಎಂದಳು. ಬಸವನಿಗೆ ತನಗೊಬ್ಬ ಚಿಕ್ಕಪ್ಪ ಇದ್ದುದ್ದು, ಆತ ಸತ್ತಿದ್ದು ಗೊತ್ತಿತ್ತು. ಆದ್ರು ಕೇಳಿದ, 'ಅವ್ವ ಚಿಕ್ಕಪ್ಪನೆ ನನ್ನ ಸ್ಕೂಲಿಗೆ ಸೇರ್ಸಿದ್ದಾ ?' ಎಂದು. 'ಹೂಂನಪ್ಪ. ಅವನಿಗೂ ನಿನ್ನನ್ನ ಬಾರಿ ಓದುಸ್ಬೇಕು ಅಂತ ಆಸೆ. ಆದ್ರೆ ದೇವ್ರು ಅವನನ್ನ ಬೇಗ ಕರಿಸ್ಕಂಡ. ಸಾಯೋವಾಗ ನನ್ಕೈಲಿ ಮಾತ ತಗೊಂಡ, ಏನಾದ್ರು ಮಾಡಿ ಬಸವನ್ನ ಚನ್ನಾಗಿ ಓದ್ಸಿ ಸ್ಕೂಲ್ ಬಿಡಿಸ್ಬೇಡಿ, ಅಂತ. ಅದಕ್ಕೆ ನಾನು ಹೊಟ್ಟೆ ಬಟ್ಟೆ ಕಟ್ಟಿ ನಿನ್ನನ್ನ ಓದಸ್ತೈದಿನಿ', ಎಂದು ಕಣ್ಣು ಮೂಗು ಒರೆಸಿಕೊಂಡಳು. ತುಂಬಾ ಹೊತ್ತು ಏನೂ ಮಾತನಾಡದೆ ಚಿಕ್ಕಂದಿನಲ್ಲಿ ತಾನು ಕಂಡಿದ್ದ ತನ್ನ ಚಿಕ್ಕಪ್ಪನನ್ನೇ ಕಾಣತೊಡಗಿದ. ತನಗೆ ಹೆಸರಿಟ್ಟ ಚಿಕ್ಕಪ್ಪ ಪುಟ್ಟಿಗೆ ಏಕೆ ಹೆಸರಿಡಲಿಲ್ಲ? ಎಂದುಕೊಂಡ. ಪುಟ್ಟಿ ಹುಟ್ಟೊ ಹೊತ್ಗೆ ಚಿಕ್ಕಪ್ಪ ಸತ್ತು ಹೋಗಿದ್ದು ಅವನಿಗೆ ಮರತೇ ಹೋಗಿತ್ತು. 'ಅವ್ವ ಪುಟ್ಟಿಗೆ ಏಕೆ ಇನ್ನೂ ಹೆಸರಿಟ್ಟಿಲ್ಲ ?' ಎಂದ. 'ಅವ್ಳಿಗೇನ ಈಗ ಅವಸ್ರ. ಏನೊ ಒಂದು ಇಟ್ರಾಯ್ತು. ಈಗ ನೀನು ಓದ್ಕೊ' ಎಂದಳು. 'ಆಗಲ್ಲ ಕಣವ್ವ. ಪುಟ್ಟಿಗೆ ಏನೊ ಒಂದು ಹೆಸ್ರಿಡದ್ ಬ್ಯಾಡ. ನನ್ನ ತಂಗಿಗೆ ನಾನೆ ಒಂದು ಒಳ್ಳೆ ಹೆಸ್ರು ಇಡ್ತಿನಿ' ಎಂದು ಮತ್ತೆ ಪುಸ್ತಕ ಎತ್ತಿಕೊಂಡ.

ಕತ್ತಲಾಗಿ ಅಕ್ಷರಗಳು ಕಾಣಿಸದಂತಾದಾಗ ಅಪ್ಪ ಮನೆಗೆ ಕಾಲಿಟ್ಟ. ಅವನು ಒಳಗೆ ಬರುವ ಮೊದಲೇ ಸರಾಬಿನ ವಾಸನೆ ಬಂತು. ಬಂದವನೇ ಗೋಡೆಗೆ ವೊರಗಿ ಗುಟುರು ಹಾಕತೊಡಗಿದ. ಹೆದರಿದ ಪುಟ್ಟಿ ಅಣ್ಣನ ಕೈಹಿಡಿದು ಕುಳಿತುಕೊಂಡಳು. ಅದಾವುದನ್ನೂ ಗಮನಿಸಿಯೇ ಇಲ್ಲವೆನ್ನುವಂತೆ ಬೀಡಿ ಚೀಲ ತೆಗೆದುಕೊಂಡು ಹೊರಟ ತಾಯಿಯನ್ನು ಬಸವ ಪುಟ್ಟಿಯ ಕೈಹಿಡಿದು ಹಿಂಬಾಲಿಸಿದ.

* * *

ಬೆಳಿಗ್ಗೆ ಸ್ಕೂಲಿಗೆ ಹೊರಟಾಗ ಬಸವನ ಬಳಿಯಿದ್ದ ಐದು ರುಪಾಯಿಯನ್ನು ಸೇರಿಸಿ, ಎಂಬತ್ತು ರುಪಾಯಿಗಳನ್ನು ಬಸವನ ಕೈಗೆ ಕೊಡುತ್ತ, 'ನಿಮ್ಮ ಹೆಡ್ಮಿಸ್ಸಿಗೆ ಹೇಳಪ್ಪ. ಇರೋದೆ ಇಷ್ಟು. ಇನ್ನು ಹೇಗಾದ್ರು ಮಾಡಿ ಉಳಿದ್ದು ಇಪ್ಪತ್ತೈದ್ರುಪಾಯಿನ ಮುಂದಿನ ವಾರ ಕೊಡ್ತಿವಿ ಅಂತ' ಎಂದ ಅವ್ವನಿಗೆ ಏನು ಹೇಳಬೇಕೆಂದು ಬಸವನಿಗೆ ತೋಚಲಿಲ್ಲ. ಪುಟ್ಟಿಗೆ 'ಇವತ್ತು ಶನಿವಾರ. ಬೇಗ ಬರ್ತೀನಿ. ಆಟ ಆಡುವ' ಎಂದು ಬ್ಯಾಗನ್ನು ಹೆಗಲಿಗೇರಿಸಿ ಹೊರಟೇಬಿಟ್ಟ. 'ಹುಷಾರು' ಎಂದ ಅವ್ವನ ಧ್ವನಿ ಅಸ್ಪಷ್ಟವಾಗಿ ಬಸವನ ಕಿವಿಗೆ ಬಿತ್ತು.

* * *

ಸ್ಕೂಲಿಗೆ ಬಂದವನೆ, ಪ್ರೇಯರಿಗಿಂತ ಮುಂಚೆಯೇ ಫೀಸು ಕಟ್ಟಿಬಿಟ್ಟರೆ ಒಳ್ಳೇದು ಅಂದುಕೊಂಡು ಹೆಡ್ಮಿಸ್ಸಿನ ರೂಮಿಗೆ ನುಗ್ಗಿದ. ತನ್ನನ್ನು ಒಂದು ಪ್ರಾಣಿಯೆಂಬಂತೆ ನೋಡುತ್ತಿದ್ದ ಹೆಡ್ಮಿಸ್ಸಿನ ಮುಂದೆ ಕೈಕಟ್ಟಿ ನಿಂತು, 'ಮಿಸ್ ನಮ್ಮವ್ವ ಹೇಳಿದ್ರು, ಈಗ ಇರೋದೆ ಎಂಬತ್ರುಪಾಯಿಯಂತೆ. ಉಳಿದ್ದನ್ನ ಮುಂದಿನ ವಾರ ಕೊಡ್ತರಂತೆ' ಎಂದು ಒಂದೇ ಉಸಿರಿಗೆ ಹೇಳಿ, ಜೇಬಿನಿಂದ ನೋಟುಗಳನ್ನು ತಗೆದು ಕೈ ನೀಡಿದ. ಆತ ನೀಡಿದ ಕೈ ಕಡೆಗೆ ನೋಡದೆ ಹೆಡ್ಮಿಸ್ ಗುಡುಗಿದರು. 'ಇದೇನ್ ತರ್ಕಾರಿ ವ್ಯಾಪಾರ ಅಂದ್ಕೊಂಡಿದಿಯಾ ನೀನು ಇವತ್ತತ್ತು ನಾಳೆ ಹತ್ತು ಕೊಡದಿಕ್ಕೆ. ಹೋಗು. ನಾಲ್ಕು ದಿನ ಸ್ಕೂಲಿಗೆ ಸೇರಿಸ್ದಿದ್ರೆ ಆಗ ಗೊತ್ತಾಗುತ್ತೆ ನಿಮ್ಮವ್ವನಿಗೆ. ಗತಿಯಿಲ್ಲದ ಮೇಲೆ ಯಾವ್ದಾದ್ರು ಗೌರ್ನಮೆಂಟ್ ಸ್ಕೂಲಲ್ಲಿ ಹೋಗಿ ಸಾಯದ್ ಬಿಟ್ಟು ಇಲ್ಲಿ ಬಂದು ನನ್ನ ತಲೆ ತಿಂತವೆ. ಇಲ್ಲಿ ಇವರ ಕಾಟ, ಅಲ್ಲಿ ಮೇನೆಜ್ಮೆಂಟಿನವರ ಕಾಟ. ಮನೇಲಿ



ಗಂಡ ಮಕ್ಕಳ ಕಾಟ' ಎಂದು ಸ್ಕೂಲಿನ ಹೆಂಚು ತುಸು ಅಳ್ಳಾಡುವಂತೆಯೇ ಕೂಗು ಹಾಕಿದರು. ನಡುಗುವ ತೊಡೆಯನ್ನು ಮರೆತು ನಿಂತಿದ್ದ ಬಸವನಿಗೆ 'ನಾನು ಎಂಬತ್ತು ರುಪಾಯಿ ತಂದಿದ್ದೀನಿ. ಹತ್ತು ರುಪಾಯಿ ಅಲ್ಲ' ಎಂದು ಕೂಗಿ ಹೇಳಬೇಕೆನಿಸಿದರೂ ನಾಲಗೆ ಹೊರಳಲೇ ಇಲ್ಲ. ಆಗ ಬಾಗಿಲಲ್ಲಿ ಪ್ರತ್ಯಕ್ಷರಾದ ಅನಿತಾ ಮಿಸ್ಸು 'ಏನಿದು ?' ಎಂದು ನೋಡುತ್ತಿದ್ದರೆ, ಬಸವನಿಗೆ ಸ್ವಲ್ಪ ಧೈರ್ಯ ಬಂದು, 'ಮಿಸ್, ನೂರೈದ್ರುಪಾಯಿ ಫೀಸು ಕಟ್ಟಬೇಕು. ಅವ್ವ ಎಂಬತ್ರುಪಾಯಿ ಅಷ್ಟೆ ಕೊಟ್ಟಿದ್ದು. ಉಳ್ದಿದ್ದನ್ನ ಮುಂದಿನ ವಾರ ಕೊಡುತ್ತಂತೆ' ಎಂದು ಒಂದೇ ಉಸಿರಿಗೆ ಹೇಳಿದ. ಆತನನ್ನೆ ತಿನ್ನುವಂತೆ ನೋಡಿದ ಹೆಡ್ಮಿಸ್ 'ನೋಡಿ ಅನಿತಾ. ಎರಡು ತಿಂಗಳಿನಿಂದ ಫೀಸ್ ಕಟ್ಟಿಲ್ಲ. ಕೇಳಿದ್ರೆ ಇವತ್ತಿಷ್ಟು ನಾಳೆಯಿಷ್ಟು ಅಂತಾನೆ. ಫೀಸ್ ಕಟ್ಟಕಾಗದ್ಮೇಲೆ ಏಕೆ ಪ್ರೈವೇಟ್ ಸ್ಕೂಲಿಗೆ ಬಂದು ಒದ್ದಾಡಬೇಕು' ಅಂದರು. ಹೆಡ್ಮಿಸ್ಸಿನ ಮಾತಿಗೆ ಏನನ್ನೂ ಹೇಳದ ಅನಿತಾ ಬಸವನ ಕಡೆಗೆ ತಿರುಗಿ 'ಎಲ್ಲೊ ಆ ದುಡ್ಡು ಎಷ್ಟಿದೆ ಕೊಡು' ಎಂದರು. ಬಸವ ಕೊಟ್ಟ ನೋಟುಗಳನ್ನು ಎಣಿಸಿ ನೋಡುವಾಗ ನೆನ್ನೆ ತಾವು ಕೊಟ್ಟ ಐದು ರುಪಾಯಿ ನೋಟು ಅಲ್ಲಿದ್ದುದನ್ನು ಗಮನಿಸಿದ ಅನಿತಾ ಮಿಸ್ ಹೆಡ್ಮಿಸ್ಸಿನ ಕಡೆ ತಿರುಗಿ 'ನೋಡಿ ಮೇಡಂ, ನೆನ್ನೆ ಇವ್ನು ಹೊಟ್ಟೆಗೇನು ತಿನ್ನದೆ ಹಾಗೇ ಸ್ಕೂಲಿಗೆ ಬಂದಿದ್ದ. ನಾನೆ ಐದು ರುಪಾಯಿ ಕೊಟ್ಟು ಏನಾದ್ರು ತಿನ್ನು ಅಂದಿದ್ದೆ. ನೋಡಿ ಇಲ್ಲಿ, ಇದೇ ನೋಟು. ಅದನ್ನು ಖರ್ಚು ಮಾಡದೆ ಹೇಗಾದ್ರು ಮಾಡಿ ಫೀಸು ಕಟ್ಟಬೇಕು ಅಂತ ಹೇಗೊ ಇದ್ದುದ್ರಲ್ಲಿ ಅಡ್ಜಸ್ಟ್ ಮಾಡಿ ಎಂಬತ್ತು ರುಪಾಯಿ ಕೊಟ್ಟು ಕಳ್ಸಿದಾರೆ ಅವನ ತಾಯಿ. ಏನೊ ಬಡತನ. ಆದ್ರಲ್ಲೂ ಮಗನ್ನ ಓದಸ್ಬೇಕು ಅನ್ನೊ ಆಸೆಯಿಂದ ಬಸ್‌ಸ್ಟ್ಯಾಂಡಲ್ಲಿ ಮೂಟೆ ಹೊತ್ತು, ಬೀಡಿ ಕಟ್ಟಿ ಇವನ ತಂದೆ ತಾಯಿ ಸ್ಕೂಲಿಗೆ ಕಳ್ಸಿದಾರೆ. ನಿಮ್ಮಂತವರೆ ಹೀಗೆ ಮಕ್ಳನ್ನ ಡಿಸಪಾಯಿಂಟ್ ಮಾಡಿದ್ರೆ ಹೇಗೆ' ಎಂದವರೆ ಬರಬರನೆ ಹೊರಗೆ ಹೋದರು. ಅನಿತಾ ಮೇಡಂ ಹೇಳೊ ಮಾತುಗಳನ್ನೇ ಕೇಳುತ್ತಿದ್ದ ಬಸವನಿಗೆ ಅವರು ಹೋದ ನಂತರ ಏನು ಮಾಡಬೇಕೆಂದು ತಿಳಿಯಲಿಲ್ಲ. ಹಾಗೆ ಹೆಡ್ಮಿಸ್ಸಿನ ಕಡೆಗೆ ನೋಡುವುದಕ್ಕೂ ಭಯವಾಯಿತು. ಇಲ್ಲೇ ನಿಲ್ಲಲೋ ಹೊರಗೆ ಓಡಲೋ ಎಂದು ಒಂದು ಕ್ಷಣ ಗೊಂದಲಕ್ಕೀಡಾದ. ಅಷ್ಟರಲ್ಲಿ ಮತ್ತೆ ಅಲ್ಲಿಗೆ ಬಂದ ಅನಿತಾ ಮಿಸ್ಸು ಹೆಡ್ಮಿಸ್ಸಿಗೆ 'ತಗೊಳ್ಳಿ ಮೇಡಂ. ನೂರೈದು ರುಪಾಯಿಯಿದೆ. ಬಸವನ ಫೀಸು' ಎಂದು ಹೇಳಿ, ಬಸವನ ಕೈಹಿಡಿದು ಹೊರಬಂದರು.

* * *

ಮಧ್ಯಾಹ್ನ ಕಡೇ ಬೆಲ್ಲಾಗುವುದನ್ನೇ ಕಾಯುತ್ತಿದ್ದ ಬಸವ ಬಿಟ್ಟ ಬಾಣದಂತೆ ರೊಯ್ಯನೆ ಮನೆಯ ಕಡೆಗೆ ಓಡಿದ. ಮನೆಯಲ್ಲಿ ಅವ್ವ ಬೀಡಿ ಕಟ್ಟುತ್ತಿದ್ದರೆ, ಪುಟ್ಟಿ ಅವ್ವನ ಹೆಗಲಿಗೆ ಒರಗಿ ದೂರಿ ತೂಗಿಕೊಳ್ಳುತ್ತಿದ್ದಳು. ಬಂದವನೆ ಬ್ಯಾಗನ್ನು ಮೂಲೆಗೆಸೆದು, 'ಅವ್ವ ಅವ್ವ ಎಲ್ಲಾ ಫೀಸನ್ನು ಅನಿತಾ ಮಿಸ್ಸೆ ಕಟ್ಟಿದ್ರು. ಇಪ್ಪತ್ತೈದ್ರುಪಾಯಿನ ಕೊಡೋದು ಬ್ಯಾಡವಂತೆ. ಇನ್ಮೇಲೆ ನನ್ನ ಎಲ್ಲ ಫೀಸು ಅವರೆ ಕಟ್ಟಿ ಅವರೆ ಓದುಸ್ತಾರಂತೆ. ಅನಿತಾ ಮಿಸ್ಸಿನ ಗಂಡನೂ ಸ್ಕೂಲಿನ ಹತ್ರ ಬಂದಿದ್ರು. ಅವ್ರು ನಾವೇ ಓದುಸ್ತೀವಿ ಚೆನ್ನಾಗಿ ಓದ್ಬೇಕು ಅಂದ್ರು' ಎಂದು ಒಂದೇ ಉಸಿರಿನಲ್ಲಿ ಒದರಿದ. ಕಟ್ಟುತ್ತಿದ್ದ ಬೀಡಿಯನ್ನು ಪಕ್ಕಕ್ಕಿರಿಸಿ ಬಸವನನ್ನು ಬರಸೆಳೆದು ಅಪ್ಪಿಕೊಂಡ ಅವ್ವ 'ಆ ನನ್ನ ತಾಯಿ ಹೊಟ್ಟೆ ತಣ್ಣಗಿರ್ಲಪ್ಪ. ನನ್ಕೈಲಿ ಎಷ್ಟಾಗುತ್ತೋ ಅಷ್ಟುನ್ನ ನಾನು ಮಾಡ್ತೀನಿ. ನೀನು ಮಾತ್ರ ಚನ್ನಾಗಿ ಓದಪ್ಪ' ಎಂದು ಕಣ್ಣೀರನ್ನೊರೆಸಿಕೊಂಡಳು. ಬಳಿಗೆ ಬಂದ ಪುಟ್ಟಿಯನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಳ್ಳುತ್ತ ಬಸವ ತನ್ನ ಅವ್ವನಿಗೆ 'ಅವ್ವ, ಪುಟ್ಟಿಗೆ 'ಅನಿತಾ' ಅಂತಲೆ ಹೆಸರಿಡುವ. ಇವ್ಳು ಅವ್ರ ಹಾಗೆ ಚನ್ನಾಗಿ ಓದಿ ಟೀಚರ್ ಆಗ್ಬೇಕು. ಅವ್ರ ತರ ದೇವ್ರಾಗ್ಬೇಕು. ಮಕ್ಕಳ ಮನಸ್ಸಿನಲ್ಲಿರೊ ದೇವ್ರನ್ನು ಕಾಣತರ ಆಗ್ಬೇಕು. ಅಲ್ವೇನವ್ವ', ಎಂದು ತಂಗಿಯನ್ನು ಮುದ್ದಿಸಿದ. 'ಹಾಗೆ ಆಗ್ಲಪ್ಪ. ಪುಟ್ಟಿ ಇವೊತ್ತಿಂದ ಅನಿತಾ' ಎಂದು ಆಕೆಯೂ ಮಗಳನ್ನು ಮುದ್ದಿಸಿದಳು. ಮಧ್ಯಾಹ್ನದ ಊಟದ ವಿಷಯ ಅವರಾರ ಗಮನಕ್ಕೂ ಬರಲೇ ಇಲ್ಲ.


**ಸತ್ಯನಾರಾಯಣ, ಬಿ.ಆರ್.**
ಗ್ರಂಥಪಾಲಕರು, ಸುರಾನ ಕಾಲೇಜು
ಸೌತ್ ಎಂಡ್ ರಸ್ತೆ, ಬಸವನಗುಡಿ, ಬೆಂಗಳೂರು-೫೬೦ ೦೦೪


## ಆ ಕಡೆಗೆ



ಕೊಳಚೆಯೊಳೆನ್ನ ಹುಟ್ಟು
ಆದರೂ ಅಲ್ಲೆನೆಗೆ ನಲಿವಿತ್ತು, ಸೊಗಸಿತ್ತು
ಆಟವಾಡುತ್ತ ಮಜವಾಗಿದ್ದೆ.

ಅರೆ ಹೊಟ್ಟೆ
ಅಪ್ಪ ಅಮ್ಮನಿಗೆ ಅರೆಬಟ್ಟೆ
ನನಗೊಂದಿಷ್ಟು ನಾಚಿಕೆ ಬಂದಾಗ
ಸೊಂಟಕ್ಕಿಷ್ಟು ತುಂಡು ಬಟ್ಟೆ

ಉಧೋ ಉಧೋ ಎನ್ನುವ
ಭಂಡಾರದ ಹುಡಿಯೊಳಗೆ
ನಾ ಕರಗಿ ಹೊರಟಿದ್ದೆ.

ಯಲ್ಲಮ್ಮ ಆದಾರೋ ಮೈ ಹೊಕ್ಕು
ಅಪ್ಪನಿಗೆ ಹೇಳುತ್ತಿದ್ದಳು.
''ನನಗSS ಕುಸುಮಿ ಬೇಕು
ಕುಸುಮಿ ಕಡೀಂದ ನನಗSS
ಸೇವೆ ಆಗಬೇಕು ಹಾಂ. ಹೂಂ !!''

ಹಬ್ಬಕ್ಕೆ ಬಂದ ಕೆಂಪು ದೀಪದ
ಒಡತಿಯ ಮಾತಿಗೂ ಅಪ್ಪ ಹೂಂಗುಟ್ಟಿದ್ದ
''ನಿಂದ ನಸೀಬ ಬಾಳ ಚಲೋ ಐಯ್ತಿ
ಇನ್ನೇನು ? ನಿನ್ನ ಬಡತನ ದೂರ ಆಗತೈತಿ.''
ಅಪ್ಪ ನಗತ್ತಿದ್ದ, ಅವ್ವ ಅಳತ್ತಿದ್ದಳು
ನಾ ಕೆಂಪು ದೀಪದ ಕಡೆಗೆ ಹೊರಟಿದ್ದೆ.
ಹತ್ತು ವರ್ಷಗಳಲ್ಲಿ
ಎಷ್ಟು ಜನ ಅಂತ
ನಾ ಲೆಕ್ಕ ಇಡಲಿಲ್ಲ.

ನನ್ನ ಮುಟ್ಟುತ್ತಲೇ ಒದ್ದೆಯಾಗಿದ್ದ
ಹದಿನಾರರ ಪೋರ
ಬೆಳಗೆಲ್ಲ ಗುದ್ದಾಡಿ ಸುಸ್ತಾಗಿದ್ದ ಸೇಡಜಿ
ಇದಿಷ್ಟೇ ನೆನಪು.

ನನ್ನದೆಲ್ಲವನೂ ಕಳಕೊಂಡು
ಹಳ್ಳಿಗೆ ಬಂದೆ.
ಅಪ್ಪ ಅದೇ ಅರೆ ಬಟ್ಟೆಯಲಿ
ಆಕಾಶ ನೋಡುತ್ತಿದ್ದ.
ಅವ್ವ ಕೈ ಚೀಲದಲ್ಲಿ
ಖುಷಿ ಹುಡುಕುತ್ತಿದ್ದಳು.


**ವೈ. ಪಿ. ಹೊನವಾಡ**
ಸಹಾಯಕರು, ಅಂಚೆ ಎಂಗಡಣಾ ಕಛೇರಿ, ಬೆಳಗಾವಿ-೫೯೦ ೦೦೧

# ಬಂಡಾಯ ಸಾಹಿತ್ಯ ಮರುಚಿಂತನೆ

ಡಾ॥ ಕೇಶವ ಶರ್ಮ, ಕೆ

ಬಂಡಾಯ ಸಾಹಿತ್ಯ ಸಂಘಟನೆಯೆಂಬುದು ಅಧಿಕೃತವಾಗಿ ಪ್ರಾರಂಭವಾಗಿದ್ದು ೧೯೭೯ ರಲ್ಲಿ. ಆದರೆ ಅದಕ್ಕಿಂತ ಮೊದಲೇ ಈ ಸಂಘಟನೆಯು ಹುಟ್ಟಿಕೊಳ್ಳುವುದಕ್ಕೆ ಕಾರಣವಾಗಬಹುದಾದ ಅನೇಕ ಸಂಗತಿಗಳು ಜರುಗಿದವು ಎಂಬುದು ಗಮನಾರ್ಹ. ೧೯೭೦ ರ ಮೊದಲ ಭಾಗದಲ್ಲಿಯೇ ಕರ್ನಾಟಕದ ರಾಜಕೀಯ ಸಾಂಸ್ಕೃತಿಕ ಪರಿಭಾಷೆಗಳು ಬೇರೆಯಾಗಿದ್ದವು. ಅದಕ್ಕಿಂತ ಹಿಂದೆ ಇದ್ದ ಪರಿಭಾಷೆಗಿಂತ ಬೇರೆಯಾದ ಪುರೋಹಿತಶಾಹಿ ಸಂಸ್ಕೃತಿ V/s ಶೋಷಿತರ ಸಂಸ್ಕೃತಿ; ಬ್ರಾಹ್ಮಣ V/s ಶೂದ್ರ ಮುಂತಾದ ಪದಗಳು ಬೇರೆ ಬೇರೆ ರೀತಿಯಾಗಿ ಪ್ರಚಾರಕ್ಕೆ ಬಂದಿದ್ದವು. ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗರೆಂಬ ಸಾಂಸ್ಕೃತಿಕ ಯಜಮಾನಿಕೆಯು ಈ ಕಾಲದಲ್ಲಿ ಚಾಲ್ತಿಗೆ ಬಂದಿದ್ದವು. ಇದರಿಂದಲೇ ಸಾಂಸ್ಕೃತಿಕ ನಾಯಕತ್ವ ಪರಿಕಲ್ಪನೆಯು ಬದಲಾಯಿತು. ಅಖಿಲ ಕರ್ನಾಟಕ ಬರಹಗಾರರ ಒಕ್ಕೂಟ (೧೯೭೪) ದಲ್ಲಿ ಈ ಬಗೆಯ ಮಾತುಗಳು ಕೂಡಾ ಬಂದಿದ್ದವು. ಇದರಿಂದಾಗಿ ಎಪ್ಪತ್ತರ ದಶಕದಲ್ಲಿ ಬದಲಾಗುತ್ತಿದ್ದ ಸಾಂಸ್ಕೃತಿಕ ಪರಿಸರದಲ್ಲಿ ಏಕಾಂತವಾದಿ (ಎಲೀಟಿಸ್ಟ್) ಎಂಬ ಧೋರಣೆಯು ಸಾಧುವಾಗಿರಲಿಲ್ಲ.

೧೯೭೫ ರಲ್ಲಿ ಇಂದಿರಾ ಗಾಂಧಿಯವರು ಭಾರತದಲ್ಲಿ ತುರ್ತುಪರಿಸ್ಥಿತಿಯನ್ನು ಹೇರಿದರು. ಇಂದಿರಾ ಗಾಂಧಿಯವರ ಈ ಬಗೆಯ ಧೋರಣೆಗಳನ್ನು ಎಡ ಬಲವೆಂಬ ಭೇದವಿಲ್ಲದೆ ಎಲ್ಲಾ ಲೇಖಕರು ಬೇರೆ ಬೇರೆ ರೀತಿಯಲ್ಲಿ ಪ್ರತಿಭಟಿಸಿದ್ದರು. ಈ ರೀತಿಯ ಪ್ರತಿಭಟನೆ ಆಗಿನ ಕೇಂದ್ರ ಸರಕಾರದ ಅಂತಿಮ ಪ್ರಭುತ್ವ (Supreme power) ವನ್ನು ಪ್ರಶ್ನಿಸಿದಂತಾಯಿತು. ವಾಕ್ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿಯ ಸ್ವಾತಂತ್ರ್ಯದ ನಿಜವಾದ ಅರ್ಥ ಲೇಖಕರಿಗೆ ಆಗಿರುವುದು ಈ ಸಂದರ್ಭದಲ್ಲಿ. ಮಾತು ಮತ್ತು ರಾಜಕಾರಣ; ಬರವಣಿಗೆ ಮತ್ತು ರಾಜಕಾರಣ ಇವುಗಳ ನಡುವಣ ನಿಕಟವಾದ ಸಂಬಂಧದ ಅರಿವು ಈ ಸಂದರ್ಭದಲ್ಲಿ ಲೇಖಕರಿಗಂತೂ ಆಗಿರುವುದು ನಿಜ.

೧೯೬೦ ರ ಅನಂತರದಲ್ಲಿ ಅನೇಕ ದಲಿತ ವರ್ಗದಿಂದ ಬಂದ ಲೇಖಕರಿಗೆ ಆತನಕ ಇದ್ದ ಬರವಣಿಗೆಯ ಮಾದರಿಗಳ ಬಗೆಗೆ ಅನುಮಾನಗಳು ಶುರುವಾಗಿದ್ದಂತೂ ವಾಸ್ತವ ಸಂಗತಿ. ಸರಿಸುಮಾರು ಅರವತ್ತರ ದಶಕದ ಕೊನೆಯ ಭಾಗ ಮತ್ತು ಎಪ್ಪತ್ತರ ದಶಕದ ಮೊದಲ ಭಾಗದಲ್ಲಿ ಬರವಣಿಗೆ ಮತ್ತು ಸಾಮುದಾಯಿಕ ಚಿಂತನಾ ಕ್ರಮದ ನಡುವಣ ನಿಕಟ ಸಂಬಂಧದ ಚರ್ಚೆಯಾಗಿರುವುದು ಗಮನಾರ್ಹ 'ಅಬಚೂರಿನ ಪೋಸ್ಟಾಫೀಸು' ಕೃತಿಯ ಮುನ್ನುಡಿಯಲ್ಲಿ ನವ್ಯರ ಅತಿರೇಕದ ನಿಲುವುಗಳನ್ನು ಟೀಕಿಸಿರುವುದು ಕಂಡುಬರುತ್ತದೆ. ಎಪ್ಪತ್ತರ ದಶಕದಲ್ಲಿ ಪ್ರಾಯೋಗಿಕ ವಿಮರ್ಶಾ ವಿಧಾನವನ್ನು ಟೀಕಿಸುತ್ತಾ, "ಈಚೆಗೆ ಪ್ರಾಯೋಗಿಕ ವಿಮರ್ಶೆಯ ವಿಧಾನವು ನನಗೆ ವಾಕರಿಕೆಯನ್ನು ಹುಟ್ಟಿಸುತ್ತದೆ" ಎಂದು ಸ್ವತಃ ಅನಂತಮೂರ್ತಿಯವರೇ ಹೇಳಿದ ನೆನಪು.

೧೯೬೦ ರ ದಶಕದ ಕೊನೆಯ ಭಾಗದಲ್ಲಿ 'ಎಡ ಚಳುವಳಿ', 'ಅಂಬೇಡ್ಕರ್ ಪ್ರಭಾವ' – ಮುಂತಾದವು ಹೆಚ್ಚು ಚಾಲ್ತಿಗೆ ಬಂದವು. ಅಲ್ಲಿಯತನಕ ಸಂಸ್ಕೃತಿಯ ಪ್ರಶ್ನೆಯು ಸಾಂಪ್ರದಾಯಿಕವಾದ ಚಿಂತನಾ ಕ್ರಮವನ್ನು ಒಳಗೊಂಡಿತ್ತು. ಸಂಸ್ಕೃತಿಯ ವಿವೇಚನೆಯೆಂದರೆ ಅದು ವಿಮರ್ಶಾತ್ಮಕವಾದ ಎಡ ಬಲದ ಪ್ರಶ್ನೆಯಾಗಿರಲಿಲ್ಲ. ೧೯೭೦ ರ ದಶಕದ ಅನಂತರ ಸಂಸ್ಕೃತಿಯ ವಿವೇಚನೆಯೆಂಬುದಕ್ಕೆ ಎಡ ಮತ್ತು ಬಲದ ಪ್ರಶ್ನೆಯಾಯಿತು. ಮುಳಿಯ ತಿಮ್ಮಪ್ಪಯ್ಯನವರ 'ಸಂಸ್ಕೃತಿಯ ವಿವೇಚನೆ'ಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಸಂಸ್ಕೃತಿಯ ಬಗ್ಗೆ ಈ ಕೃತಿಯಲ್ಲಿ ಮುಳಿಯ ತಿಮ್ಮಪ್ಪಯ್ಯನವರು ತಳೆಯುವ ನಿಲುವು ಹೆಚ್ಚು ಸಾಂಪ್ರದಾಯಿಕವಾಗಿದೆಯೆಂದು ಅನಿಸುತ್ತದೆ. ಇದು ಕೇವಲ ಮುಳಿಯ ತಿಮ್ಮಪ್ಪಯ್ಯನವರ ಬರಹದ ಪ್ರಶ್ನೆಯಲ್ಲ. ಈ ರೀತಿಯ ಚಿಂತನೆಯ ಕ್ರಮ ಮಾಸ್ತಿ, ಡಿ.ವಿ.ಜಿ. ಮೊದಲಾದವರಲ್ಲಿಯೂ ಕಾಣಿಸಿಕೊಂಡಿದೆ. ೧೯೭೦ ರ ದಶಕದಲ್ಲಿ ಶುರುವಾದ ಪುರೋಹಿತಶಾಹಿ ಸಂಸ್ಕೃತಿ ಮತ್ತು ಶೂದ್ರ ಸಂಸ್ಕೃತಿಯೆಂಬ ಪ್ರಶ್ನೆಯಾಗಲಿ; ಅನಂತಮೂರ್ತಿಯವರು ಪ್ರಾರಂಭಿಸಿದ "ಇಂಗ್ಲೀಷ್ ಬ್ರಾಹ್ಮಣ, ಕನ್ನಡ ಶೂದ್ರ"ವೆಂಬ ಪರಿಕಲ್ಪನೆಯಾಗಲೀ ಅದು ಕೇವಲ ಸಂಸ್ಕೃತಿಯ ಚಿಂತನೆಯ ಸಾಂಪ್ರದಾಯಿಕ ರೂಪವಲ್ಲ. ಅದರ ಹಿನ್ನೆಲೆಯಲ್ಲಿ 'ಎಡ' ಚಿಂತನೆಯ ದೃಷ್ಟಿಕೋನವೂ ಸೇರಿಕೊಂಡಿದೆ. ಈ ರೀತಿಯ ಸಂದರ್ಭದಲ್ಲಿ ಪ್ರಾರಂಭವಾದ ಸಂಸ್ಕೃತಿಯ ಪ್ರಶ್ನೆಯು ಆಕಸ್ಮಿಕವಾಗಿರಲಿಲ್ಲ. ಅದು ಹೊಸ ರೀತಿಯಲ್ಲಿ ನಿರ್ಮಾಣಗೊಂಡ ಸಾಮಾಜಿಕ ಶ್ರೇಣಿಯ ಭಾಗವೂ ಆಗಿತ್ತು. ದೇವಯ್ಯ ಹರವೆ, ಸೃಜನಶೀಲಕೃತಿಯಲ್ಲಿ ತೇಜಸ್ವಿ, ದೇವನೂರು ಮಹಾದೇವ ಮೊದಲಾದವರು ಬರೆದ 'ಸಾಂಸ್ಕೃತಿಕ ಕಥನ'ಗಳು ಬರಿಯ ಬರಹದ ಪ್ರಶ್ನೆಯಾಗಿರಲಿಲ್ಲ . ಅವು ಕರ್ನಾಟಕದಲ್ಲಿನ ಜೀವಂತ ಅನುಭವದ ಸಾಂಸ್ಕೃತಿಕ ಕತೆಗಳಾಗಿದ್ದವು. ೧೯೬೦ ರ ದಶಕದ ಕೊನೆಯ ಭಾಗದಲ್ಲಿ ಪ್ರಾರಂಭವಾದ ಅನೇಕ ಚರ್ಚೆಗಳಲ್ಲಿ ಕನ್ನಡದ ಲೋಹಿಯಾವಾದಿಗಳ ಕೊಡುಗೆಯನ್ನು ನಿರ್ಲಕ್ಷಿಸುವಂತಿಲ್ಲ. ೧೯೭೦ ರ ದಶಕದ ಅರ್ಧ ಭಾಗದಿಂದ 'ಜಾತಿ ಕ್ರಿಯೇಟಿವ್' ಎಂಬ ಪ್ರಶ್ನೆಯಾಗಲೀ : ಪ್ರಧಾನ ಸಂಸ್ಕೃತಿ ಮತ್ತು ಕಿರುಸಂಸ್ಕೃತಿಯ ವಾಗ್ವಾದವಾಗಲೀ ಸಾಂಸ್ಕೃತಿಕವಾಗಿ ಮಹತ್ತರದವುಗಳೇ ಆಗಿವೆ. ಈ ರೀತಿಯ ಸಾಂಸ್ಕೃತಿಕ ಚರ್ಚೆಗಳು ಕೂಡಾ ತುರ್ತು ಪರಿಸ್ಥಿತಿಯ ಅನಂತರದ ಪ್ರಜಾಪ್ರಭುತ್ವವಾದಿ ಸಮಾಜದ ಬೇರೆ ಬೇರೆ ಮಾದರಿಯ ಪರಿಶೀಲನೆಗಳೇ ಆಗಿದ್ದವು. ಹಾಗೂ ೭೦ ರ ದಶಕದಲ್ಲಿ ಬರಹದ ಮಟ್ಟಿಗಂತೂ ಪ್ರಜಾಪ್ರಭುತ್ವ ಹೇಳುವ 'ಸಮಾಜಪ್ರಜೆ'ಗಳ ಕಲ್ಪನೆಯು ಸಾಧ್ಯವಾಯಿತು. ಆ ತನಕ ಕನ್ನಡದಲ್ಲಿ ಖಾಲಿಯಾಗಿದ್ದ ಅವಕಾಶವನ್ನು ಎಡಪಂಥೀಯ ದೃಷ್ಟಿಕೋನದ ಬರಹಗಳು ತುಂಬಿಕೊಟ್ಟವು. ೧೯೭೦ ರ ದಶಕದಲ್ಲಿ ಬಂದ ಬಹುತೇಕ ಬರಹಗಾರರು – ಅವರು ನಿರ್ದಿಷ್ಟ ಮಾದರಿಯ ಬರಹಗಾರರೆನ್ನದೆ – ಬರೆಯಲು ತೊಡಗಿದ್ದು ಚಾರಿತ್ರಿಕ ಪಲ್ಲಟದ ಪ್ರಮುಖ ದಾಖಲೆಯಾಗಿದೆ. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೂ ೧೯೭೪ ರಿಂದ ಅನಂತರದ ಬಹುತೇಕ ಬರಹಗಳು ಒಂದು ಮಾದರಿಯ ಚಾರಿತ್ರಿಕ ಅಭಿವ್ಯಕ್ತಿಯೇ ಆಗಿವೆ. ಏಕಕೇಂದ್ರಿತ ಸಂಸ್ಕೃತಿಯು ಬದಲಾಗಿ ಬಹುಕೇಂದ್ರಿತ ಸಂಸ್ಕೃತಿಯ ಪ್ರಶ್ನೆಯು ಸಾಹಿತ್ಯದಲ್ಲಿ ಚಾಲ್ತಿಗೆ ಬರತೊಡಗಿತ್ತು. ದಲಿತ ಮತ್ತು ಬಂಡಾಯದ ಲೇಖಕರಿಗೆ ಬರಹದಲ್ಲಿ ನಿರೂಪಿಸುವ ಸಂಸ್ಕೃತಿಯೆಂದೂ ಅದು ಸುಂದರವಾದುದರ ವಿವರಣೆಯಲ್ಲ. ಸಾಂಸ್ಕೃತಿಕ ಹಿಂಸೆಯ ಅನಾವರಣವು ಸಾಧ್ಯವಾಗಿದ್ದೇ ೧೯೭೦ ರ ದಶದಕ ಕೊನೆಯ ಭಾಗದಲ್ಲಿ. ಆ ತನಕ ಬಾರದೇ ಇದ್ದ ಪ್ರಾದೇಶಿಕ ಸಂಸ್ಕೃತಿಯ ವಿವರಣೆಯು ಕೂಡಾ ಈ ಸಂದರ್ಭದಲ್ಲಿ ಅನಾವರಣಗೊಂಡಿತು. ಉದಾಹರಣೆಗೆ – ಕುವೆಂಪು ಅವರ ಎರಡು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಸಂಸ್ಕೃತಿಯು ತುಂಬಾ ಸುಂದರವಾಗಿದೆ. ಆದರೆ, 'ಒಡಲಾಳ', 'ಕಪ್ಪು ಕಾದಂಬರಿ'ಗಳು

**ಬಂಡಾಯ ಸಂಘಟನೆಯು ಪ್ರಾರಂಭವಾದ ಹೊತ್ತಿನಲ್ಲಿ 'ಖಡ್ಗವಾಗಲಿ ಕಾವ್ಯ' ಎಂಬ ಘೋಷಣೆಯ ವಾಕ್ಯವೂ ಜೊತೆಗಿತ್ತು. ಆಳುವ ವ್ಯವಸ್ಥೆ ಮತ್ತು ಅದರ ಸಮೂಹ ಮಾಧ್ಯಮ – ಎರಡನ್ನೂ ಬಂಡಾಯದಲ್ಲಿ ಮೊದಲಿಗೆ ತಿರಸ್ಕರಿಸಲಾಯಿತು. ಕ.ಸಾ.ಪ.ದ ಯಾವುದೇ ಕಾರ್ಯಕ್ರಮಗಳಲ್ಲಿ ಭಾಗವಹಿಸಬಾರದೆಂದು ನಿರ್ಣಯಿಸಲಾಗಿತ್ತು. ಹೀಗೆ ಮಾಡುವುದರಿಂದಲೇ ಯಜಮಾನ ವ್ಯವಸ್ಥೆಯನ್ನು ಮುರಿಯುವುದು ಸಾಧ್ಯವೆಂದು ಭಾವಿಸಲಾಯಿತು. ಎಲ್ಲಾ ಎಡ ಪಂಥೀಯ ವಿಚಾರಧಾರೆಯ ಲೇಖಕರು ಒಂದು ವಲಯದೊಳಗೆ ಬರಲು ಸಾಧ್ಯವಾಯಿತು.**

ವಿವರಿಸುವ ಸಂಸ್ಕೃತಿಯಲ್ಲಿ ಹಿಂಸೆಯ ಹಲವಾರು ಮುಖಗಳು ಪರಿಚಯಗೊಂಡಿವೆ. ಹೀಗಾಗಿಯೇ ಬಂಡಾಯ ಸಾಹಿತ್ಯ ಸಂಘಟನೆಯು ೧೯೭೯ ರಲ್ಲಿ ರೂಪುಗೊಂಡಾಗ ಅದಕ್ಕೆ ಒಂದು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಿತ್ತು ಮತ್ತು ಇದರಿಂದಾಗಿಯೇ ಎಡ ಪಂಥೀಯ ವಿಚಾರಧಾರೆಗಳು ಸಾಂಸ್ಥಿಕ ರಂಗಗಳಿಗೆ ಪ್ರವೇಶಿಸಲು ಸಾಧ್ಯವಾಯಿತು. ಭಾಷೆ ಮತ್ತು ಸಂಸ್ಕೃತಿಗಿದ್ದ ಕೇಂದ್ರಿತ ವಲಯವನ್ನು ಒಡೆಯಲು ಅನುಕೂಲವಾಯಿತು.

ಬಂಡಾಯ ಸಂಘಟನೆಯು ಪ್ರಾರಂಭವಾದ ಹೊತ್ತಿನಲ್ಲಿ 'ಖಡ್ಗವಾಗಲಿ ಕಾವ್ಯ' ಎಂಬ ಘೋಷಣೆಯ ವಾಕ್ಯವೂ ಜೊತೆಗಿತ್ತು. ಆಳುವ ವ್ಯವಸ್ಥೆ ಮತ್ತು ಅದರ ಸಮೂಹ ಮಾಧ್ಯಮ – ಎರಡನ್ನೂ ಬಂಡಾಯದಲ್ಲಿ ಮೊದಲಿಗೆ ತಿರಸ್ಕರಿಸಲಾಯಿತು. ಕ.ಸಾ.ಪ.ದ ಯಾವುದೇ ಕಾರ್ಯಕ್ರಮಗಳಲ್ಲಿ ಭಾಗವಹಿಸಬಾರದೆಂದು ನಿರ್ಣಯಿಸಲಾಗಿತ್ತು. ಹೀಗೆ ಮಾಡುವುದರಿಂದಲೇ ಯಜಮಾನ ವ್ಯವಸ್ಥೆಯನ್ನು ಮುರಿಯುವುದು ಸಾಧ್ಯವೆಂದು ಭಾವಿಸಲಾಯಿತು. ಎಲ್ಲಾ ಎಡ ಪಂಥೀಯ ವಿಚಾರಧಾರೆಯ ಲೇಖಕರು ಒಂದು ವಲಯದೊಳಗೆ ಬರಲು ಸಾಧ್ಯವಾಯಿತು. ಬಂಡಾಯ ಸಂಘಟನೆಯಲ್ಲಿ ಆಗ ದಲಿತ ಸಂಘರ್ಷ ಸಮಿತಿ, ಸಿ.ಪಿ.ಐ., ಸಿ.ಪಿ.ಎಂ. ಮುಂತಾದ ಎಡ ಪಂಥೀಯ ಸಂಘಟನೆಗಳು, ಪಕ್ಷಗಳು ಜೊತೆಗಿದ್ದವು. ಆದುದರಿಂದಲೇ ೧೯೭೯ ರ ಅನಂತರ ಒಂದು ಪ್ರಭಾವೀ ಸಂಘಟನೆಯಾಗಿ ಬಂಡಾಯವು ರೂಪುಗೊಂಡಿತು. ಒಂದು ಭದ್ರವಾದ ತಳಹದಿಯು ಇದ್ದುದರಿಂದಲೇ ಇಲ್ಲಿಯ ತನಕ ಸಂಘಟನೆಯು ತನ್ನ ಛಾತಿಯನ್ನು ಕಳೆದುಕೊಂಡಿಲ್ಲ. ಪ್ರಾರಂಭದ ವರ್ಷಗಳ ಹುಮ್ಮಸ್ಸು ನಂತರದ ಕೆಲವೇ ವರ್ಷಗಳಲ್ಲಿ ಕೊಂಚ ಮಂಕಾದಂತೆ ಕಾಣಿಸಿರುವುದು ನಿಜ.

ಬಂಡಾಯ ಸಂಘಟನೆಯ ಮುಂಚೂಣಿ ನಾಯಕರು ಅನಂತರದ ವರ್ಷಗಳಲ್ಲಿಯೂ ಹಾಗೇ ಇರಬೇಕೆಂದು ನಿರೀಕ್ಷಿಸುವುದು ತಪ್ಪಾಗಬಹುದೇನೋ. ಅಲ್ಲದೆ ಬಂಡಾಯ ಸಂಘಟನೆಯು ಕೊಂಚ ದುರ್ಬಲವಾಗಿ ಕಾಣಿಸುವುದಕ್ಕೆ ಕೆಲವರನ್ನೇ ಹೊಣೆ ಮಾಡುವುದು ಸರಿಯೆಂದು ಕಾಣಿಸುವುದಿಲ್ಲ. ಹೀಗಾಗಿಯೇ ೧೯೭೦ ರಲ್ಲಿ ಇದ್ದ ಭಾವನೆಗೂ ೧೯೯೦ ರ ಅನಂತರ ಭಾವನೆಗೂ ಬಹಳ ವ್ಯತ್ಯಾಸವಿದೆ.

೧೯೯೦ ರ ಹೊತ್ತಿಗೆ ಬಂಡಾಯದ ಲೇಖಕರು ಸಮೂಹ ಮಾಧ್ಯಮಗಳನ್ನು ಬಳಸಿಕೊಂಡು ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಸಮೂಹ ಮಾಧ್ಯಮವನ್ನು ಬಳಸಿಕೊಂಡಾಗ ಆ ಮಾಧ್ಯಮದಲ್ಲಿಯೇ ತಮ್ಮ ವಿಚಾರವನ್ನು ಪ್ರಸ್ತುತಪಡಿಸಿ ಜನರೊಂದಿಗೆ ಅದನ್ನು ಹಂಚಿಕೊಳ್ಳಲು ಯತ್ನಿಸಿದರು. ಈ ರೀತಿಯಲ್ಲಿ ಮಾಧ್ಯಮಗಳಲ್ಲಿ ತಮ್ಮ ವಿಚಾರಗಳನ್ನು ಹೇಳುವುದರ ಮೂಲಕವೇ ವ್ಯವಸ್ಥೆಗೆ ವಿರೋಧ ವ್ಯಕ್ತಪಡಿಸಲು ಸಾಧ್ಯವೆಂಬುದನ್ನು ತೋರಿಸಿಕೊಟ್ಟರು. ಒಂದರ್ಥದಲ್ಲಿ ಈ ರೀತಿಯ ಪ್ರಕ್ರಿಯೆಯನ್ನು 'ವಿದ್ರೋಹಾತ್ಮಕ'ವೆಂದು ಕರೆಯಬಹುದು. ಸಮೂಹ ಮಾಧ್ಯಮದಲ್ಲಿ ಭಾಗವಹಿಸದೇ ಹೋಗಿದ್ದರೆ ಬಂಡಾಯದ ವಿಚಾರಗಳು ಕೂಡಾ ಒಂದು ಮಾದರಿಯ ಏಕಾಂತವಾದವನ್ನು ಅನುಭವಿಸಬೇಕಾಗುತ್ತಿತ್ತೋ ಏನೋ.

೧೯೯೦ ರ ದಶಕದ ಹೊತ್ತಿಗಾಗಲೇ ಬಂಡಾಯದ ಲೇಖಕರು ತಮ್ಮ ವಿಚಾರಧಾರೆಯನ್ನು ಗಟ್ಟಿಗೊಳಿಸಿಕೊಂಡರು. ೧೯೯೦ ರ ದಶಕದಲ್ಲಿಯೇ ಅನೇಕ ಬಂಡಾಯ ಲೇಖಕರು ಪ್ರಧಾನವಾದ ಅಲೆಯನ್ನು ರೂಪಿಸಿಕೊಂಡಿದ್ದರು. ಈ ದಶಕದ ಪ್ರಧಾನ ವೈಚಾರಿಕ ನಿಲುವು ಬಂಡಾಯವೇ ಆಗಿದೆ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಬಂಡಾಯದ ಲೇಖಕರು ಎದುರಿಸಿದ್ದ ವೈಚಾರಿಕ, ಸಾಂಸ್ಕೃತಿಕ ಸಮಸ್ಯೆಗಳು ಗೈರುಹಾಜರಿಯಾಗಲು ತೊಡಗಿತು. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಎಡಪಂಥೀಯರ ಬಗ್ಗೆ ಎಂಬತ್ತರ ದಶಕದಲ್ಲಿದ್ದ ಅನುಮಾನವು ತೊಂಬತ್ತರ ದಶಕದಲ್ಲಿ ಅಷ್ಟಾಗಿ ಕಾಣಲು ಸಾಧ್ಯವಿರಲಿಲ್ಲ ಮತ್ತು ಬಂಡಾಯ ಹಾಗೂ ಎಡಪಂಥೀಯ ವಿಚಾರಧಾರೆಗಳು ಸಾಂಸ್ಥಿಕ ಕೇಂದ್ರಗಳಾದ – ಶಿಕ್ಷಣ/ಸಮೂಹ ಮಾಧ್ಯಮ/ಸಾಹಿತ್ಯ ಅಕಾಡೆಮಿ ಮುಂತಾದವುಗಳನ್ನು ಪ್ರವೇಶಿಸಿದ್ದವು.

ಹಾಗೆ ನೋಡುವುದಿದ್ದರೆ ತೊಂಬತ್ತರ ದಶಕದಲ್ಲಿ ಎಡಪಂಥೀಯ ವಿಚಾರಧಾರೆಗಳೇ ಪ್ರಧಾನ ವಿಚಾರಧಾರೆಗಳಾಗಿದ್ದವು. ಬಂಡಾಯ ಸಾಹಿತ್ಯ ಚಳುವಳಿಯು ಪ್ರಾರಂಭವಾಗುವ ದಿನಗಳಲ್ಲಿ ನವ್ಯದ ವಿಚಾರಧಾರೆಯು ಮುಖ್ಯವಾಗಿತ್ತು. ನವ್ಯದ ಅನೇಕ ಸಮಸ್ಯಾತ್ಮಕ ನಿಲುವುಗಳನ್ನು ಬಂಡಾಯ ಪ್ರಶ್ನಿಸಬೇಕಿತ್ತು. ನವ್ಯದ ಸುಳ್ಳುಸುಳ್ಳೇ ಬಂದ ಏಕಾಕಿತನ, ಅಸಂಗತವಾದ ಯಾವುದೇ ಕಾರಣಕ್ಕೆ ನಮ್ಮ ನೆಲದ್ದು ಅಲ್ಲವೆಂದು ಬಂಡಾಯವು ಪ್ರತಿಪಾದಿಸಬೇಕಾಯಿತು. ನವ್ಯ, ಕೃತಿಯು ಮೊದಲು ಕಲಾತ್ಮಕವಾಗಿರಬೇಕು, ರಾಚನಿಕವಾಗಿ ಸುಂದರವಾಗಿರಬೇಕು ಎಂಬಿತ್ಯಾದಿಗಳನ್ನು ಹೇಳುತ್ತಾ ಬಂದುದರಿಂದ ಬಂಡಾಯ ಲೇಖಕರು ಆ ನಿಲುವುಗಳನ್ನು ಪ್ರಶ್ನಿಸಬೇಕಾಯಿತು. ಈಗ ನವ್ಯದಲ್ಲಿ 'ಜನರ' ಸುದ್ದಿಯೇ ಇಲ್ಲ. ಹೀಗಾಗಿ ಬಂಡಾಯವು ತನ್ನ ನಿಲುವುಗಳನ್ನು ಜನಪರವೆಂದು ಹೇಳಿತು. ನವ್ಯದ ವಿಪರೀತವಾದ ಧೋರಣೆಯ ವಿರುದ್ಧ ಬಂಡಾಯದ ಕವಿಗಳು 'ನಮ್ಮ ಕೈಗೆ ಅಧಿಕಾರ ಬಂದಾಗ ಬಂದೂಕಿನ ಬಾಯಿಯಲ್ಲಿ ಗುಬ್ಬಿ ಗೂಡು ಕಟ್ಟುತ್ತದೆ', 'ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು', ಮುಂತಾದ 'ತತ್ವಮುಖಿ'ಯಾದ ಕವಿತೆಗಳನ್ನು ಬರೆಯಬೇಕಾಯಿತು. ಈ ರೀತಿಯ ಭಾಷಿಕ ರಚನೆಯನ್ನು ಸಾಮಾನ್ಯ ಭಾಷೆಯೆಂದು ಕರೆಯಬಹುದು. ನವ್ಯದ ಭಾಷೆಯ ಸಂಕೀರ್ಣತೆಯ ಎದುರು ಈ ರೀತಿಯ ಸುಲಭ ಸಂರಚನೆಯು ಬೇಕಾಯಿತು ಮತ್ತು ಬಂಡಾಯದ ಕವಿಗಳು ಬಳಸಿದ ಭಾಷೆಯು ಅಂತಿಮವಾಗಿ ರಾಜಕೀಯಗೊಂಡ ಭಾಷೆಯ ರಚನೆಯೇ ಆಗಿದೆ. ಯಾಕೆಂದರೆ, ಅದಕ್ಕೆ ಒಂದು ನಿರ್ದಿಷ್ಟ ಉದ್ದೇಶವಿತ್ತು. ನವ್ಯ ಕವಿಗಳು ಭಾಷೆಯ ಕಲಾತ್ಮಕತೆಯೇ ಹೆಚ್ಚು ಮುಖ್ಯವೆಂದೂ ಅದರಿಂದಲೇ ಸಾಹಿತ್ಯವನ್ನು ಪ್ರತ್ಯೇಕಗೊಳಿಸಬಹುದೆಂದೂ ಪ್ರತಿಪಾದಿಸಿದರು. ಇದರಿಂದ ನವ್ಯದ ಸಂದರ್ಭದಲ್ಲಿ ಭಾಷೆಯೇ ಜನಸಾಮಾನ್ಯರಿಂದ ದೂರ ಉಳಿಯಿತು. ತಾತ್ವಿಕವಾಗಿಯೂ ನವ್ಯಕ್ಕೆ ಯಾವುದೇ ರೀತಿಯ ರಾಜಕೀಯ ನಿಲುವುಗಳಿಲ್ಲ. ಬಂಡಾಯದಲ್ಲಿ ನಿರ್ದಿಷ್ಟ ತಾತ್ವಿಕ ನಿಲುವುಗಳಿವೆ. ಬಂಡಾಯ ಸಂದರ್ಭದಲ್ಲಿ ಬದಲಾವಣೆ 'ಅಧಿಕಾರ ಕೇಂದ್ರಿತ ರಾಜಕಾರಣ' ಕ್ಕಿಂತ ಭಿನ್ನವಾಯಿತು. ಹಾಗೂ ಬರವಣಿಗೆ ಮತ್ತು ಮಾತು ಕೂಡಾ ಬದ್ಧತೆಯುಳ್ಳ ರಾಜಕೀಯ ಚಟುವಟಿಕೆಗಳಾದವು.

ಇವು ಎಂಬತ್ತರ ದಶಕದ ನಿಲುವು. ೧೯೯೦ ರ ದಶಕದಲ್ಲಿ ಬಂಡಾಯಕ್ಕೆ ಪ್ರತಿವಾದಿ ಎನ್ನಬಹುದಾದ ನಿಲುವುಗಳು ಇರಲಿಲ್ಲ. ಸಾಹಿತ್ಯಕವಾಗಿ ಪ್ರತಿವಾದಿಗಳು ಇಲ್ಲವಾದಾಗ ಎದುರಿಸಬಹುದಾದ ಸಮಸ್ಯೆಯನ್ನು ಬಂಡಾಯವು ಎದುರಿಸಿತು. ವ್ಯಾಪಕವಾದ ಸಾಂಸ್ಕೃತಿಕ ಚರ್ಚೆಗಳು ಪ್ರಾರಂಭವಾಯಿತಾದರೂ ಬರವಣಿಗೆಯ ದೃಷ್ಟಿಯಿಂದ ಇವು ಹೆಚ್ಚು ಸೂಕ್ಷ್ಮವಾಗಲಿಲ್ಲ.




೧೯೯೦ ರ ಅನಂತರದ ವರ್ಷಗಳಲ್ಲಿ ಕೇಳಿಬಂದ ಎರಡು ಸಂಗತಿಗಳೆಂದರೆ – ಜಾಗತೀಕರಣ ಮತ್ತು ಕೋಮುವಾದ. ಜಾಗತೀಕರಣ ತೆರೆಯ ಮರೆಯಿಂದಲೇ ಹಿಂಸೆಯನ್ನು ನಡೆಸಿದೆ. ಸಾಲದ ಹೊರೆ: ಅಂತರರಾಷ್ಟ್ರೀಯ ಕಂಪೆನಿಗಳು ಕೊಟ್ಟ ಬೀಜ ಮೊಳಕೆಯೊಡೆಯದೆ ಅನೇಕ ರೈತರು ಸತ್ತಿದ್ದಾರೆ. ಉದಾರೀಕರಣದ ದೆಸೆಯಿಂದ ರೈತರು ಕಂಗಾಲಾಗಿದ್ದಾರೆ. ಇದೊಂದು ಕಡೆಗಿದ್ದರೆ, ಮತ್ತೊಂದು ಕಡೆ ಕೋಮುವಾದದ ದಳ್ಳುರಿಯಲ್ಲಿಯೂ ಅನೇಕರು ಸತ್ತಿದ್ದಾರೆ. ದಲಿತರ ಮೇಲಿನ ಹಿಂಸೆಯೂ ನಿಂತಿಲ್ಲ. ಶಿಕ್ಷಣದಲ್ಲಿಯೂ ಕೋಮುವಾದದ ನೆರಳು ಬೀಳತೊಡಗಿದೆ. ಇಂದಿನ ಈ ಸ್ಥಿತಿಯಲ್ಲಿ ಯಾರಿಗೂ ನೆಮ್ಮದಿಯಿಲ್ಲ. ಜಮೀನ್ದಾರಿ ಪದ್ಧತಿಯು ಕೂಡಾ ಸಂಪೂರ್ಣವಾಗಿ ಕೊನೆಗೊಂಡಿಲ್ಲ. ನಾವು, ಬೇರೆ ಬೇರೆ ಹೆಸರುಗಳಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಸಿಯತೊಡಗುತ್ತಿರುವ ವ್ಯವಸ್ಥೆಯ ಭಾಗವಾಗಿದ್ದೇವೆ. ಬಂಡಾಯ ಸಾಹಿತ್ಯ ಸಂಘಟನೆಯಲ್ಲಿಯೂ ಅನೇಕ ಹೊಸ ಲೇಖಕರು ಬಂದಿದ್ದಾರೆ. ಕೆಲವರು ಬಂಡಾಯ ಸಂಘಟನೆಯಿಂದ ಹೊರಗೆ ಹೋಗಿದ್ದಾರೆ. ಸಂಘಟನಾ ದೃಷ್ಟಿಯಿಂದ ಅದು ಒಂದು ತೀರಾ ಸಹಜವಾದ ಪ್ರಕ್ರಿಯೆ ಎನ್ನಬಹುದು. ಈಗ ನಮ್ಮ ಮುಂದಿರುವ ಪ್ರಶ್ನೆಗಳೆಂದರೆ, – ಈಗಿನ ಪರಿಸ್ಥಿತಿಯಲ್ಲಿ ಬಂಡಾಯದ ಹಳೆಯ ಪ್ರಣಾಳಿಕೆ ಸಾಕೆ? ಅದೇ ಹಳೆಯ ಮಾತುಗಳನ್ನು ಮತ್ತೆ ಹೊಳಪುಗೊಳಿಸಿದರೆ – ಎಲ್ಲವೂ ಆಯಿತೆ? ಚಳುವಳಿಯನ್ನು ಹೆಚ್ಚು ತೀವ್ರಗೊಳಿಸುವುದಕ್ಕೆ ಮಾಡಬೇಕಾದುದು ಏನು? ಉದಾರೀಕರಣ ಮತ್ತು ಕೋಮುವಾದಗಳೆಂಬ ಇಬ್ಬಗೆಯ ಪೀಡೆಗಳನ್ನು ಎದುರಿಸುವುದು ಹೇಗೆ? ಎಂಬುದು.

ಬಂಡಾಯವು, ಸಾಹಿತ್ಯವನ್ನು ಸೃಷ್ಟಿಸುವ ಕಾರ್ಖಾನೆಯಾಗಿಲ್ಲದಿರಬಹುದು. ಆದರೆ ಬಂಡಾಯದ ಬರಹಗಾರರು ಮತ್ತೆ ಹಳೆಯ ರೂಪಕದಿಂದಲೇ ಮಾತಾಡಬೇಕೆ? ಬಂಡಾಯದ ಹಿರಿಯ ಲೇಖಕರು ಮತ್ತು ಕಿರಿಯ ಲೇಖಕರು ಒಂದೆಡೆ ಸೇರಿಕೊಂಡು ಚರ್ಚಿಸಬೇಕಾದ ಪ್ರಶ್ನೆಗಳಿವು. ಬಂಡಾಯದಲ್ಲಿ ತಾತ್ತ್ವಿಕ ಸ್ಪಷ್ಟತೆಯಿರುವ ಎಡಪಂಥೀಯ ದೃಷ್ಟಿಕೋನದ ಲೇಖಕರಿದ್ದಾರೆ. ಬಂಡಾಯದ ಸಂಘಟನೆಯನ್ನು ಕಟ್ಟಿ ಅದನ್ನು ಬೆಳೆಸಿದ ಬರಗೂರು, ರಂಜಾನ್ ದರ್ಗಾ, ಎಲ್. ಹನಮಂತಯ್ಯ, ಆರ್. ವಿ. ಭಂಡಾರಿ, ಚೆನ್ನಣ್ಣ ವಾಲಿಕಾರ, ಚೆನ್ನಬಸವಣ್ಣ, ಅರ್ಕೆ ಮಣಿಪಾಲ, ಇಂತಹ ಅನೇಕ ಲೇಖಕರ/ಚಿಂತಕರ ಶ್ರಮವು ಬಹಳ ದೊಡ್ಡದು. ಅದನ್ನು ಮರೆಯಲಾಗದು. ೧೯೮೦ ರ ದಶಕದಲ್ಲಿ ಇಂಥ ಲೇಖಕರು ಸಂಘಟನೆಗೆ ಮತ್ತು ಅದು ರೂಪಿಸಿದ ಚಳುವಳಿಗೆ ಒಂದು ಸ್ಪಷ್ಟತೆಯನ್ನು ಕೊಟ್ಟರು. ಅವರ ಕೆಲಸದ ಹೆಗಲ ಮೇಲೆ ಈಗಿನ ಬಂಡಾಯದ ಲೇಖಕರಿದ್ದಾರೆ. ಆದರೆ ಈಗ ಮತ್ತೆ ಹಿರಿಯ ಲೇಖಕರ ಮತ್ತು ಕಿರಿಯ ಲೇಖಕರ ನಡುವೆ ಒಂದು ಸಣ್ಣ ಅಂತರ ರೂಪುಗೊಂಡಿದೆಯೇನೋ ಎನಿಸತೊಡಗಿದೆ. ಎಡ ಪಂಥೀಯ ದೃಷ್ಟಿಕೋನದ ಬಂಡಾಯ ಸಂಘಟನೆಗೆ ಅನೇಕ ರೀತಿಯ ಸಾಮಾಜಿಕ ಜವಾಬ್ದಾರಿಗಳಿವೆ. ಬಂಡಾಯವೆಂಬುದು ಒಂದು ಸಾಹಿತ್ಯ ಚಳುವಳಿಯಲ್ಲ, ಅದು ಸಂಘಟನೆ.

ಕನ್ನಡ ನವೋದಯ ಸಾಹಿತ್ಯವನ್ನು ಈ ಸಂದರ್ಭದಲ್ಲಿ ಮತ್ತೊಮ್ಮೆ ಗಮನಿಸಬೇಕಾದ ಅಗತ್ಯವಿದೆ. ಕುವೆಂಪು, ಬೇಂದ್ರೆ, ಕಾರಂತ, ಗೊರೂರು – ಹೀಗೆ ನವೋದಯದ ಯಾರನ್ನೇ ತೆಗೆದುಕೊಂಡರೂ ಅವರಿಗೆ ರಾಷ್ಟ್ರೀಯತೆ, ಪ್ರಾದೇಶಿಕತೆ, ಸ್ವಾತಂತ್ರ್ಯ ಇತ್ಯಾದಿಗಳ ಆದರ್ಶವಿತ್ತು. ಅವರ ನಿಲುವು ಈಗ ನಾವು ಒಪ್ಪಬಹುದು ಅಥವಾ ಬಿಡಬಹುದು – ಆದರೆ ಅವರಿಗೆ ಬರವಣಿಗೆಯಲ್ಲಿ ತಮ್ಮ ನಂಬಿಕೆಗಳನ್ನು ಹೇಳುವ ಕ್ರಮ ಗೊತ್ತಿತ್ತು. ಆಗ ಭಾರತದ ಸ್ವಾತಂತ್ರ್ಯ ಪ್ರಶ್ನೆ ಮುಖ್ಯವಾಗಿತ್ತು. ತಮ್ಮ ಅನುಭವಕ್ಕೆ ಬಂದಿದ್ದ ಬ್ರಿಟಿಷ್ ಪ್ರಭುತ್ವದ ಸಂಗತಿಗಳು ಅವರಿಗೆ ಗೊತ್ತಿದ್ದವು. ಆದರೆ ಈಗ ಉದಾರೀಕರಣವೆಂಬ ದೆವ್ವವೊಂದು ಬೇರೆ ಬೇರೆ ರೀತಿಯಲ್ಲಿ ನಮ್ಮೆದುರು ಹಾಜರಾಗಿದೆ. ಕೆಲವೊಂದು ಸಂದರ್ಭದಲ್ಲಿ ಇದರ ಪರಿಣಾಮ ನಮಗೆ ನೇರವಾಗಿ ಕಾಣಿಸುತ್ತದೆ – ರೈತರ ಬೆಳೆಗೆ ಯಾವುದೇ ಬೆಲೆಯಿಲ್ಲ, ರೈತರು ಸಾಯುತ್ತಿದ್ದಾರೆ. ಕೆಲವೊಂದು ಸಂಗತಿಗಳಂತೂ ನಮ್ಮ ಗಮನಕ್ಕೆ ಬರುವುದಿಲ್ಲ. ಉದಾ: ಉಂಟಾಗುತ್ತಿರುವ ಸಾಮಾಜಿಕ ಪರಿವರ್ತನೆ, ಸಾಮಾಜಿಕ ಸಂಬಂಧಗಳಲ್ಲಿನ ಏರು ಪೇರು. ಹೀಗಾಗಿಯೇ ಈ ರೀತಿಯ ಸಮಸ್ಯೆಯನ್ನು ಹೆಚ್ಚು ವಿಮರ್ಶಾತ್ಮಕವಾದ, ಎಚ್ಚರದಿಂದ ಪರಿಶೀಲಿಸಿ ಬರೆಯಬೇಕಾದ ಅಗತ್ಯವಂತೂ ಇದೆ. ಈಗ ಬರಹ ಕರಪತ್ರವಾಗಬೇಕಿಲ್ಲ, ಅದರಾಚೆಗೆ ದಾಟಬೇಕಾಗಿದೆ. ನಮ್ಮ ಎದುರು ಇರುವ ಅನೇಕ ಸಮಸ್ಯೆಗಳಿಗೆ ಸಣ್ಣ ಸಣ್ಣ ಕಂದೀಲುಗಳು ಸಾಕಾಗುವುದಿಲ್ಲ. ನೆಮ್ಮದಿಯಿಲ್ಲ ಎಂಬುದನ್ನು ನೆಮ್ಮದಿಯಿಲ್ಲವೆಂದು ಹಾಗೆಯೇ ಬರೆದರೆ ಸಾಲದು; ನೆಮ್ಮದಿ ಯಾಕಿಲ್ಲವೆಂಬುದನ್ನು ಪರಿಶೀಲನೆಯಲ್ಲಿ ದಾಖಲಿಸಬೇಕು.

ವಸಾಹತೋತ್ತರ ಕಾಲಘಟ್ಟದ ಪ್ರಮುಖ ಸಮಸ್ಯೆಗಳನ್ನು ಗಮನಿಸಬೇಕು. ಬಡತನ, ಅನಕ್ಷರತೆ, ಹೆಚ್ಚುತ್ತಿರುವ ಕೋಮುವಾದ, ಸಣ್ಣ ಮತ್ತು ದೊಡ್ಡ ಹಿಡುವಳಿದಾರರ ಸಮಸ್ಯೆಗಳು, ಬದಲಾಗುತ್ತಿರುವ ಕೌಟುಂಬಿಕ ರೂಪಗಳು, ಮಧ್ಯಮ ವರ್ಗದ ಜೀವನ ಕ್ರಮ ಇತ್ಯಾದಿಗಳಿಗೆ ತಕ್ಷಣದ ಪರಿಹಾರ ಇಲ್ಲ. ಆದರೆ ಅವು ಸಾಮಾಜಿಕ ಸಮಸ್ಯೆಗಳು ಎಂಬುದಂತೂ ನಿಜ. ಈ ಸಂಬಂಧಗಳ ಕುರಿತು ಬರೆಯುವಾಗಲೂ ಕೊಂಚ ಎಚ್ಚರವಹಿಸಬೇಕು, ಇಲ್ಲವೆಂದರೆ ನಮ್ಮ ಕನ್ನಡದ ಬಹುತೇಕ ಕಾದಂಬರಿಗಳಲ್ಲಿ ಬರುವ ಗೌಡ, ಆತನ ಲೈಂಗಿಕ ನಿಶ್ಶಕ್ತಿ ಗೌಡಿತಿಯು ಬೇರೊಬ್ಬರ ಜೊತೆಗೆ ಇಟ್ಟುಕೊಳ್ಳುವ ಸಂಬಂಧ – ಇತ್ಯಾದಿಗಳೇ ಒಂದು ಪ್ರಾಗ್ರೂಪ ಮಾದರಿಯೆಂಬಂತೆ ಚಿತ್ರಿತವಾಗಬಹುದು. ಇತ್ತೀಚಿನ ವರ್ಷಗಳಲ್ಲಿ ರಾಷ್ಟ್ರೀಯ ಪ್ರಭುತ್ವದ ಕುರಿತಂತೆಯೂ ವಾಗ್ವಾದಗಳು ಪ್ರಾರಂಭವಾಗಿವೆ. ಹೀಗಾಗಿಯೇ ಈ ರೀತಿಯ ಸಮಸ್ಯೆಗಳ ಕುರಿತಂತೆ ಬರೆಯುವಾಗ ದ್ವಂದ್ವಾತ್ಮಕ ಸಂಬಂಧದ ನಿರೂಪಣೆಯೂ ಅಗತ್ಯವಾಗಬಹುದು. ಈ ದೃಷ್ಟಿಯಿಂದ ಪುರೋಹಿತಶಾಹಿ ಸಂಸ್ಕೃತಿ V/s ಶೂದ್ರ ಸಂಸ್ಕೃತಿಯೆಂಬಂಥ ಸರಳ ದ್ವಂದ್ವಗಳಿಂದಲೂ ಮುಂದೆ ನಮ್ಮ ಚರ್ಚೆಯು ಬೆಳೆಯಬೇಕಾಗಿದೆಯೆಂದು ಎನಿಸುತ್ತದೆ.

**ಡಾ|| ಕೇಶವ ಶರ್ಮ,**
ಉಪನ್ಯಾಸಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ-೫೭೭ ೪೫೧, ಶಿವಮೊಗ್ಗ ಜಿಲ್ಲೆ

## ಶ್ರದ್ಧಾಂಜಲಿ

**ನಮ್ಮ ದೇಶದ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಲು ಸಾಧ್ಯವೆಂದು ಪ್ರತಿಪಾದಿಸಿ ಅದಕ್ಕೆ ಪೂರಕವಾದ ಅರ್ಥವ್ಯವಸ್ಥೆಯನ್ನು ಸಮರ್ಥವಾಗಿ ನಿರೂಪಿಸುತ್ತಿದ್ದ ಪ್ರೊ|| ಪಿ. ಆರ್. ಬ್ರಹ್ಮಾನಂದ ಅವರು ನಮ್ಮನ್ನಗಲಿದ್ದಾರೆ. 'ಹೊಸತು' ಅವರಿಗೆ ಗೌರವಪೂರ್ವಕವಾದ ನಮನ ಸಲ್ಲಿಸುತ್ತದೆ. ನಮ್ಮ ಪತ್ರಿಕೆಯ ನವಂಬರ್ 2002ರ ಸಂಚಿಕೆಯಲ್ಲಿ ಅವರ ಸಂದರ್ಶನ ಪ್ರಕಟವಾಗಿದ್ದಿತು.**

# ಬರಗಾಲದ ರಾಜಕೀಯ

''ಮುಂಗಾರು ಬೆಳೆಯ ವೈಫಲ್ಯದ ಪರಿಣಾಮಗಳ ಬಗ್ಗೆ ಎರಡು ಶತಮಾನಗಳ ಅನುಭವ ಇರುವ ಕೆಲವೇ ದೇಶಗಳ ಪೈಕಿ ಭಾರತವೂ ಒಂದು. ಈ ಅನುಭವದಿಂದ ನಾವು ಕಲಿಯುವುದು ಬಹಳ ಇದೆ. ವಿಪರ್ಯಾಸವೆಂದರೆ, ಈ ದೇಶದಲ್ಲಿ ಅಂಕಿಅಂಶ ಮಾಹಿತಿಗಳು ಅಗಾಧವಾಗಿ ಲಭ್ಯವಿದ್ದರೂ, ಅವುಗಳಿಂದ ಕಾರ್ಯ ನಿರ್ವಹಿಸುವಲ್ಲಿ ನಾವು ಬಹಳ ಹಿಂದುಳಿದಿದ್ದೇವೆ. ಇದು ನಮ್ಮ ದೇಶದ ದೊಡ್ಡ ದುರಂತ'' ಎಂದು ವಿಷಾದದಿಂದ ನುಡಿಯುತ್ತಾರೆ ಖ್ಯಾತ ವಿಜ್ಞಾನಿ ಎಂ. ಎಸ್. ಸ್ವಾಮಿನಾಥನ್. ೬೦ರ ದಶಕದ ಹಸಿರು ಕ್ರಾಂತಿಯ ಹರಿಕಾರರೆನಿಸಿದ ಸ್ವಾಮಿನಾಥನ್ ಅವರು ತಮ್ಮ ಅನುಭವದ ಹಿನ್ನೆಲೆಯಲ್ಲಿ ೧೯೭೯ರಲ್ಲಿಯೇ ಕೇಂದ್ರ ಕೃಷಿ ಮಂತ್ರಾಲಯಕ್ಕೆ ಬರಗಾಲ ನಿರ್ವಹಣೆಯ ಬಗ್ಗೆ ಒಂದು ಯೋಜನೆಯನ್ನು ಸಿದ್ಧಪಡಿಸಿಕೊಟ್ಟಿದ್ದರು. ಈ ಯೋಜನೆಯು ಇಂದಿಗೂ ಪ್ರಸ್ತುತವಾಗಿದ್ದರೂ, ಈವರೆಗೂ ಅದು ಅನುಷ್ಠಾನಗೊಳ್ಳದಿರುವುದು ನಮ್ಮ ಆಳುವ ವರ್ಗಗಳ ನಿರ್ಲಕ್ಷ್ಯತೆಗೆ ಹಿಡಿದ ಕೈಗನ್ನಡಿ.

೬ನೆಯ ಪಂಚವಾರ್ಷಿಕ ಯೋಜನೆಯನ್ನು ಸಿದ್ಧಪಡಿಸುವಾಗ, ಎರಡು ಶತಮಾನಗಳ ಮುಂಗಾರು ಮಳೆಯನ್ನು ಅಧ್ಯಯನ ಮಾಡಿದ್ದ ಸ್ವಾಮಿನಾಥನ್ ಅವರು, ೫ ವರ್ಷಗಳ ಒಂದು ಅವಧಿಯಲ್ಲಿ ಕನಿಷ್ಠ ಪಕ್ಷ ಎರಡು ವರ್ಷ ಬರಗಾಲದ ವರ್ಷಗಳೆಂದು ಪರಿಗಣಿಸಿ, ಸೂಕ್ತವಾದ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸಬೇಕೆಂದು ವರದಿ ಸಲ್ಲಿಸಿದ್ದರು. ಆದರೆ ಈ ಪ್ರಸ್ತಾಪವನ್ನು ಸರ್ಕಾರಗಳು ಗಂಭೀರವಾಗಿ ಪರಿಗಣಿಸಲೇ ಇಲ್ಲ. ಈ ನಿರ್ಲಕ್ಷ್ಯ ಮನೋಭಾವದ ಪರಿಣಾಮವೇ ಇಂದು ಅತೀವ ಬರಗಾಲದ ಪರಿಸ್ಥಿತಿ ಸರ್ಕಾರಗಳನ್ನು ತಲ್ಲಣಗೊಳಿಸಿದೆ.

ಖ್ಯಾತ ಲೇಖಕ ಪಿ. ಸಾಯಿನಾಥ್ ಬರಗಾಲದ, ಪ್ರವಾಹಗಳ ಬಗ್ಗೆ ತಮ್ಮ ಸಂಶೋಧನಾ ವರದಿಯಲ್ಲಿ ಹೇಳಿರುವಂತೆ, ಭಾರತದಲ್ಲಿ ಪ್ರತಿಯೊಬ್ಬರೂ ಒಂದಲ್ಲ ಒಂದು ಕಾರಣಗಳಿಂದ ಬರಗಾಲವನ್ನು ಸ್ವಾಗತಿಸುತ್ತಾರೆ. ದುಡಿಯುವ ಜನತೆಗೆ, ಕೂಲಿಕಾರರಿಗೆ, ಬರಗಾಲ ಒಂದು ಶಾಪವಾದರೆ, ಬಂಡವಾಳಗಾರರಿಗೆ, ಗುತ್ತಿಗೆದಾರರಿಗೆ ಬರಗಾಲ ಒಂದು ವರದಾನ. ಈ ಪಟ್ಟಭದ್ರ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ನಮ್ಮ ಜನ ಪ್ರತಿನಿಧಿಗಳಿಗೆ, ಬರಗಾಲ ಒಂದು ಸಮಸ್ಯೆಯೇ ಅಲ್ಲ. ಹಾಗಾಗಿಯೇ ಅತೀವ ಕ್ಷಾಮ ತಲೆದೋರಿದ್ದಾಗಲೂ ಇತರ ಸಮಸ್ಯೆಗಳನ್ನು ಹುಟ್ಟು ಹಾಕುವುದರಲ್ಲಿ ರಾಜಕೀಯ ಪಕ್ಷಗಳು ನಿರತವಾಗಿರುತ್ತವೆ. ಕರ್ನಾಟಕದಲ್ಲಿ ವೀರಪ್ಪನ್ ಪ್ರಕರಣ ಒಂದು ಉದಾಹರಣೆ ಮಾತ್ರ.

೧೯೮೭ರ ನಂತರ ಸತತವಾಗಿ ೧೪ ವರ್ಷಗಳ ಕಾಲ ಉತ್ತಮ ಮುಂಗಾರು ಮಳೆ ಕಂಡನಂತರ ಈ ವರ್ಷ ಇಡೀ ದೇಶವೇ ಬರಗಾಲಕ್ಕೆ ತುತ್ತಾಗಿದೆ. ಅಸ್ಸಾಂನಲ್ಲಿ ಮಾತ್ರ ಈ ಬಾರಿ ಹೆಚ್ಚು ಮಳೆಯಾಗಿದೆ. ಕೇಂದ್ರ ಕೃಷಿ ಮಂತ್ರಿಗಳಾದ ಅಜಿತ್ ಸಿಂಗ್ ಅವರಿಗೆ ಈ ಬಗ್ಗೆ ಸರಿಯಾದ ಮಾಹಿತಿ ಇರಲಿಲ್ಲವೆಂದು ತೋರುತ್ತದೆ. ಸಂಸತ್ತಿನಲ್ಲಿ ಬರಗಾಲ ಪರಿಸ್ಥಿತಿಯ ಬಗ್ಗೆ ವಿಷಯ ಮಂಡನೆ ಮಾಡಿದಾಗ ''ಕಳೆದ ೧೦-೧೨ ವರ್ಷಗಳಲ್ಲಿ ದೇಶ ಇಂತಹ ಕ್ಷಾಮ ಎದುರಿಸಿರಲಿಲ್ಲ'' ಎಂದು ಹೇಳಿರುವುದು ವಾಸ್ತವಾಂಶಕ್ಕೆ ಬಹಳ ದೂರವಾದದ್ದು. ವಾಸ್ತವವೆಂದರೆ ದೇಶ ಈ ಪ್ರಮಾಣದ ಬರಗಾಲ ಎದುರಿಸಿದ್ದು ೧೯೮೭ ರಲ್ಲಿ. ಅದಕ್ಕೂ ಮುನ್ನ ೧೯೭೨, ೧೯೧೮, ೧೮೭೭ ರಲ್ಲಿಯೇ ಈ ಪ್ರಮಾಣದ ಬರಗಾಲ ಎದುರಾಗಿತ್ತು.

ಈ ವರ್ಷ ಮುಂಗಾರು ಮಳೆ ವಿಫಲವಾಗುವ ಬಗ್ಗೆ ಹಲವಾರು ಬಾರಿ ಸರ್ಕಾರಗಳಿಗೆ ಎಚ್ಚರ ನೀಡಲಾಗಿತ್ತು. ಜೂನ್ ಮೊದಲ ವಾರದಿಂದಲೂ ಹವಾಮಾನ ಇಲಾಖೆಯ ವರದಿಯ ಅನುಸಾರ ಮಳೆಯಾಗಿರಲಿಲ್ಲ. ಅಸ್ಸಾಂ, ಮಹಾರಾಷ್ಟ್ರ, ಬಿಹಾರ, ಜಾರ್ಖಂಡ್ ರಾಜ್ಯಗಳನ್ನು ಹೊರತುಪಡಿಸಿ ಬೇರೆಲ್ಲೂ ಕನಿಷ್ಠ ಸರಾಸರಿ ಮಳೆಯೂ ಕಂಡುಬಂದಿಲ್ಲ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ೧೭೫ ತಾಲ್ಲೂಕುಗಳ ಪೈಕಿ ಶೇ. ೭೫ರಷ್ಟು ತಾಲ್ಲೂಕುಗಳು ಬರಗಾಲ ಪೀಡಿತವಾಗಿವೆ. ೭೯ ಲಕ್ಷ ಹೆಕ್ಟೇರುಗಳ ಪೈಕಿ ಕೇವಲ ೩೬ ಲಕ್ಷ ಹೆಕ್ಟೇರುಗಳಲ್ಲಿ ಬಿತ್ತನೆ ಕಾರ್ಯ ನಡೆದಿದೆ. ಕಾಳುಗಳು, ಎಣ್ಣೆಬೀಜಗಳು ಉತ್ಪಾದನೆಯಲ್ಲಿ ತೀವ್ರ ಇಳಿಮುಖ ಕಂಡಿವೆ. ಭತ್ತ, ಜೋಳ, ಕಡಲೆ ಮುಂತಾದ ಧಾನ್ಯಗಳ ಬಿತ್ತನೆಯೇ ಕುಂಠಿತಗೊಂಡಿದೆ. ಉತ್ತರ ಕರ್ನಾಟಕದಲ್ಲಿ ಮಳೆಯಿಲ್ಲದ ಕಾರಣ ಈರುಳ್ಳಿಯ ಇಳುವರಿಯೂ ತೀವ್ರವಾಗಿ ಕುಸಿದಿದೆ. ಮಳೆಯಾಧಾರಿತ ಕೃಷಿಯನ್ನೇ ಅವಲಂಬಿಸಿರುವ ಕೋಲಾರ, ಬೆಂಗಳೂರು, ತುಮಕೂರು ಜಿಲ್ಲೆಗಳು ತೀವ್ರವಾದ ಕ್ಷಾಮ ಎದುರಿಸಿವೆ. ಮೈಸೂರಿನ ಬಹುತೇಕ ಎಲ್ಲಾ ಕೆರೆಗಳೂ ಒಣಗಿಹೋಗಿವೆ. ಹಾರಂಗಿ, ಹೇಮಾವತಿ ನದಿಗಳು ತುಂಬಿದ ಕಾರಣ ಕೃಷ್ಣರಾಜಸಾಗರ ಜಲಾಶಯಕ್ಕೆ ಸಾಕಷ್ಟು ನೀರು ಬಂದಿದ್ದರೂ ಮೈಸೂರು ಮಂಡ್ಯ ಜಿಲ್ಲೆಗಳು ಬರಗಾಲದ ಪರಿಸ್ಥಿತಿಯಿಂದ ಪೂರ್ಣ ಮುಕ್ತವಾಗಿಲ್ಲವೆಂದೇ ಹೇಳಬಹುದು.

ರೈತಾಪಿ ವರ್ಗ ಇಷ್ಟೆಲ್ಲಾ ಸಂಕಷ್ಟಗಳನ್ನೆದುರಿಸುತ್ತಿದ್ದರೂ, ಮುಂಗಾರು ವೈಫಲ್ಯದಿಂದ ದೇಶದ ಆರ್ಥಿಕತೆಯ ಮೇಲೆ ಯಾವುದೇ ಪರಿಣಾಮ ಉಂಟಾಗುವುದಿಲ್ಲ ಎಂದು ಸರ್ಕಾರಿ ಮೂಲಗಳು ವರದಿ ನೀಡಿರುವುದು ಹಾಸ್ಯಾಸ್ಪದವಾಗಿದೆ. ಭಾರತದ ಒಟ್ಟು ರಾಷ್ಟ್ರೀಯ ಆದಾಯದಲ್ಲಿ ಶೇ. ೨೫ರಷ್ಟು ಪಾಲು ಕೃಷಿ ಕ್ಷೇತ್ರದ್ದಾಗಿರುತ್ತದೆ. ಅಲ್ಲದೆ ಶೇ. ೬೫ರಷ್ಟು ಜನರು ಸಂಪೂರ್ಣವಾಗಿ ಕೃಷಿಯನ್ನೇ ಆಧರಿಸಿರುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬರಗಾಲದ ಪರಿಸ್ಥಿತಿಯಲ್ಲಿ ರೈತರಿಗಿಂತಲೂ ಹೆಚ್ಚು ಸಂಕಷ್ಟ ಎದುರಿಸುವವರು ರೈತ ಕೂಲಿಗಾರರು ಹಾಗೂ ಸಾಮಾನ್ಯ ದುಡಿಯುವ ವರ್ಗದ ಜನ. ದಿನಗೂಲಿಯನ್ನೇ ನಂಬಿ ಬದುಕುವ ಈ ವರ್ಗದ ಜನರ ಬಾಳು ದುಸ್ತರವಾಗಿದೆ. ಈಗಾಗಲೇ ಲಕ್ಷಾಂತರ ಕೂಲಿ ಕಾರ್ಮಿಕರು ವಲಸೆ ಹೋಗಲಾರಂಭಿಸಿದ್ದಾರೆ. ಯಾವುದೇ ರೀತಿಯ ಸಂಘಟನೆಯಿಲ್ಲದ ಈ ದುಡಿಯುವ ವರ್ಗಗಳತ್ತ ಸರ್ಕಾರವೂ ಗಮನ ಹರಿಸುವುದಿಲ್ಲ. ಇತ್ತ ಸಂಘಟಿತ ಕಾರ್ಮಿಕ, ರೈತ ಸಂಘಟನೆಗಳೂ ಗಮನ ನೀಡುವುದಿಲ್ಲ.

ಬರಗಾಲವೆಂದ ಕೂಡಲೇ ಸರ್ಕಾರಗಳು ಕೈಗೊಳ್ಳುವ ಮೊದಲ ಕಾರ್ಯಕ್ರಮವೆಂದರೆ ರೈತರಿಗೆ ಪರಿಹಾರಧನ ನೀಡುವುದು. ಈ ಬಾರಿ ಕೇಂದ್ರ ಸರ್ಕಾರವು ೨ ಹೆಕ್ಟೇರಿಗಿಂತಲೂ ಕಡಿಮೆ ಜಮೀನು ಹೊಂದಿರುವ ರೈತರಿಗೆ ಪರಿಹಾರ ನೀಡಿದೆ. ಈ ಪರಿಹಾರ ಧನದ ಮೊತ್ತ ೧೭,೦೦೦ ಕೋಟಿ ರೂ.ಗಳಾಗುತ್ತದೆ. ಇದರಲ್ಲಿ ಶೇ. ೫೦ರಷ್ಟನ್ನು ರಾಜ್ಯ ಸರ್ಕಾರಗಳು ವಹಿಸಬೇಕಾಗುತ್ತದೆ. ತೀವ್ರ ಆರ್ಥಿಕ ಸಂಕಷ್ಟ ಎದುರಿಸುತ್ತಿರುವ ರಾಜ್ಯ ಸರ್ಕಾರಗಳು ಈ ಭಾರಿ ಮೊತ್ತವನ್ನು ವಹಿಸಿಕೊಳ್ಳಲು ಹಿಂಜರಿಯುತ್ತಿರುವುದರಿಂದ ರೈತರಿಗೆ ಈ ಪರಿಹಾರ ಧನವೂ ದೊರೆಯದಾಗಿದೆ.

ಒಂದೆಡೆ ಕೋಟ್ಯಂತರ ರೂ.ಗಳ ಪರಿಹಾರ ನೀಡಲು ಮುಂದಾಗುವ ಕೇಂದ್ರ ಸರ್ಕಾರವು ತನ್ನ ಗೋದಾಮುಗಳಲ್ಲಿ ೬೦ ದಶಲಕ್ಷ ಟನ್‌ಗಳಷ್ಟು ಅಕ್ಕಿ-ಗೋಧಿ ದಾಸ್ತಾನು ಲಭ್ಯವಿದ್ದರೂ ಬರಗಾಲ ಪೀಡಿತ ಜನತೆಗೆ ಉಚಿತವಾಗಿ ಧಾನ್ಯ ನೀಡಲು ನಿರಾಕರಿಸುತ್ತದೆ. ಈಗಾಗಲೇ ಕೇಂದ್ರ ಸರ್ಕಾರದ ಆಹಾರ ಸಹಾಯಧನದ ಮೊತ್ತ ೨೧,೦೦೦ ಕೋಟಿ ರೂ.ಗಳಷ್ಟಿದೆ. ಒಂದು ವೇಳೆ ಉಚಿತವಾಗಿ ಧಾನ್ಯ ನೀಡಿದರೂ ಈ ಸಹಾಯಧನದ ಮೊತ್ತ ೩೦ ಸಾವಿರ ಕೋಟಿ ರೂ.ಗಳಾಗುತ್ತವೆ. ಆದರೆ ಜನಕಲ್ಯಾಣ ಕಾರ್ಯಕ್ರಮಗಳಿಗೆ ಎಂದೋ ತಿಲಾಂಜಲಿ ನೀಡಿರುವ ನಮ್ಮ ಸರ್ಕಾರಗಳು ಈ ವಿಷಯದ ಬಗ್ಗೆ ಚಿಂತಿಸುವುದೂ ಇಲ್ಲ. ಕೇಂದ್ರದ ಗೋದಾಮುಗಳಲ್ಲಿ ಲಕ್ಷಾಂತರ ಟನ್ ಆಹಾರ ಧಾನ್ಯಗಳು ಇಲಿ ಹೆಗ್ಗಣಗಳ ಪಾಲಾಗುತ್ತವೆ. ಮುಂಬೈ ನಗರದಲ್ಲಿ ಪ್ರತಿದಿನ ೪೦ ಸಾವಿರ ಲೀಟರು ಹಾಲು ಮೋರಿಯ ಪಾಲಾಗುತ್ತದೆ. ಆದರೆ ಅದು ಜನತೆಯ ಅವಶ್ಯಕತೆಗೆ ಮಾತ್ರ ಲಭ್ಯವಿರುವುದಿಲ್ಲ. ಇದು ನಮ್ಮ ಆಳುವ ವರ್ಗಗಳ ಆಡಳಿತ ವೈಖರಿ.

ಕೇಂದ್ರ ಕೃಷಿ ಮಂತ್ರಾಲಯವು ಈ ಭಾರಿ ಮೊತ್ತದ ಪರಿಹಾರ ಧನಕ್ಕಾಗಿ ಪರದಾಡುತ್ತಿರುವಾಗಲೇ ವಿತ್ತ ಮಂತ್ರಿ ಜಸ್ವಂತ್ ಸಿಂಗ್ ಅವರು, ಬಿಳಿಪಟ್ಟಿಯ ಸಂಘಟಿತ ಕಾರ್ಮಿಕರಿಗೆ ೬೦೦ ಕೋಟಿ ರೂ.ಗಳ ತೆರಿಗೆ ವಿನಾಯಿತಿ, ಎಲ್.ಟಿ.ಸಿ. ಸೌಲಭ್ಯದ ಪುನರಾರಂಭದ ಬಗ್ಗೆ ನಿರ್ಧಾರ ಕೈಗೊಂಡಿರುವುದು ಸರ್ಕಾರಗಳ ಸ್ವರೂಪಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಅಷ್ಟೇ ಅಲ್ಲದೆ ದಿನಗೂಲಿ ಕಾರ್ಮಿಕರ, ಸಣ್ಣ, ಅತಿ ಸಣ್ಣ ರೈತರ ಸಮಸ್ಯೆಗಳಿಗೆ ಸ್ಪಂದಿಸದೆ,

ನಾ. ದಿವಾಕರ

ಹಣಕಾಸು ಸಂಸ್ಥೆಗಳ ರಿಪೇರಿ ಕೆಲಸದಲ್ಲಿ ತೊಡಗಿರುವುದು ವಿಷಾದನೀಯ. ೧೯೭೦ ರಿಂದೀಚೆಗೆ ಕೃಷಿ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆ, ಬಂಡವಾಳ ಕ್ರೋಢೀಕರಣ ಕುಂಠಿತವಾಗಿರುವುದೂ ಇಂದಿನ ವಿಷಮ ಪರಿಸ್ಥಿತಿಗೆ ಕಾರಣವಾಗಿದೆ.

ಕೃಷಿ ತಜ್ಞರ ಅಭಿಪ್ರಾಯದಲ್ಲಿ ಒಮ್ಮೆ ಮುಂಗಾರು ಮಳೆ ವಿಫಲವಾದಲ್ಲಿ ಕೊನೆ ಘಳಿಗೆಯಲ್ಲಿ ಎಷ್ಟೇ ಮಳೆಯಾದರೂ ಕೃಷಿ ಉತ್ಪಾದನೆ ವೃದ್ಧಿಯಾಗುವುದಿಲ್ಲ. ಇದರಿಂದ ನೇರವಾಗಿ ಬಾಧಿತರಾಗುವವರೆಂದರೆ ದಿನಗೂಲಿ ಕಾರ್ಮಿಕರು. ಪರಿಣಾಮ, ಶ್ರಮದ ಬೆಲೆ ಅಗ್ಗವಾಗುವುದಲ್ಲದೆ ಕಾಳಸಂತೆಕೋರರಿಗೆ ಸುಗ್ಗಿಯ ಕಾಲವಾಗುತ್ತದೆ. ಈ ಮೊದಲೇ ಹೇಳಿರುವಂತೆ ಈ ಜನತೆಗೆ ಯಾವುದೇ ಪರಿಹಾರವಾಗಲೀ, ಸಹಾಯವಾಗಲೀ ದೊರೆಯುವುದಿಲ್ಲ. ಬಂಡವಳಿಗರು, ರಾಜಕಾರಣಿಗಳು, ಅಧಿಕಾರವರ್ಗದವರು ಬರಗಾಲ ಪರಿಸ್ಥಿತಿಯಿಂದ ಹೆಚ್ಚು ಲಾಭಗಳಿಸುತ್ತಾರೆಂದರೆ ತಪ್ಪಾಗಲಾರದು. ಹುಲಿ ಬಂತು ಹುಲಿ ಎಂಬಂತೆ




ಬರಗಾಲದ ಬಗ್ಗೆ ಹುಯಿಲೆಬ್ಬಿಸುತ್ತಾರೆ. ಅನೇಕ ಯೋಜನೆಗಳನ್ನು ರೂಪಿಸುತ್ತಾರೆ. ಸರ್ಕಾರಗಳಿಂದ ಕೋಟ್ಯಾಂತರ ರೂ.ಗಳ ಪರಿಹಾರ ಮಂಜೂರಾಗುತ್ತದೆ. ಇಷ್ಟೆಲ್ಲಾ ಆಗುವ ವೇಳೆಗೆ ಒಂದು ವೇಳೆ ಮಳೆ ಆರಂಭವಾಗಿ ಬಿತ್ತನೆ ಕಾರ್ಯ ಶುರುವಾದರೆ ಪರಿಹಾರ ಧನ, ಎಲ್ಲಿಗೋ ಹರಿದು ಹಂಚಿ ಹೋಗುತ್ತದೆ. ಅಗತ್ಯವಿರುವ ರೈತಾಪಿ ಜನತೆಗಾಗಲೀ ಬಡ ಜನತೆಗಾಗಲೀ ತಲುಪುವುದೇ ಇಲ್ಲ. ಕಳೆದ ಹಲವು ದಶಕಗಳ ಇತಿಹಾಸವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಹಾಗಾಗಿಯೇ ಸ್ವಾಮಿನಾಥನ್ ಅವರು ಸೂಚಿಸಿರುವಂತೆ ಬರಗಾಲ ನಿಯಂತ್ರಣಕ್ಕಾಗಿ ಸಂಬಂಧಪಟ್ಟವರು ಯಾವುದೇ ಮುಂಜಾಗರೂಕ ಕ್ರಮ ಕೈಗೊಳ್ಳುವುದಿಲ್ಲ. ಎ. ಕೆ. ರಾಯ್ ಎಂಬ ಖ್ಯಾತ ಲೇಖಕರು ತಮ್ಮ ಲೇಖನವೊಂದರಲ್ಲಿ "ದಾರಿದ್ರ್ಯತೆಯೇ ಇಲ್ಲದೆ ಹೋಗಿದ್ದರೆ ಮದರ್ ಥೆರೇಸಾರವರೂ ನಿರುದ್ಯೋಗಿಯಾಗಿಬಿಡುತ್ತಿದ್ದರು," ಎಂದು ಹೇಳಿರುವುದು ಇಲ್ಲಿ ಸೂಕ್ತವೆನಿಸುತ್ತದೆ. ಬರಗಾಲ, ಪ್ರವಾಹಗಳನ್ನು ನಿಯಂತ್ರಿಸಿಬಿಟ್ಟರೆ ರಾಜಕಾರಣಿ - ಬಂಡವಾಳಶಾಹಿ -ಅಧಿಕಾರಶಾಹಿಗಳ ಮೈತ್ರಿಕೂಟಕ್ಕೆ ಉಳಿಗಾಲವಿರುವುದಿಲ್ಲ. ಜನರಿಂದ ಈ ಆಲೋಚನೆಗಳನ್ನು ದೂರಮಾಡಲು ಈ ದುಷ್ಟಕೂಟಗಳಿಗೆ ಹಲವಾರು ತಂತ್ರಗಳು ಕರಗತವಾಗಿರುತ್ತವೆ. ವೀರಪ್ಪನ್ ಪ್ರಕರಣ, ಕಾವೇರಿ ನೀರಿನ ಹಗರಣ, ಜಯಲಲಿತ, ಸೋನಿಯಾ ವಿವಾದ ಇತ್ಯಾದಿಗಳು ಈ ನಿಟ್ಟಿನಲ್ಲಿ ನಿದರ್ಶನಗಳಷ್ಟೇ. ದೇಶದಲ್ಲಿ ಬರಗಾಲ ಇದೆಯೆಂದ ಮಾತ್ರಕ್ಕೆ ಮಂತ್ರಿಗಳ ವಿದೇಶಿಯಾತ್ರೆಗಳಾಗಲೀ, ಶ್ರೀಮಂತರ ವಿಲಾಸ ಭೋಗ ಜೀವನವಾಗಲೀ ಬಾಧಿತವಾಗುವುದಿಲ್ಲ. ಇವುಗಳನ್ನು ನಿಯಂತ್ರಿಸಲೂ ಸರ್ಕಾರ ಮುಂದಾಗುವುದಿಲ್ಲ. ಸರ್ಕಾರದಿಂದ ಎಲ್ಲಾ ಸವಲತ್ತುಗಳನ್ನು ಪಡೆಯುವ ಅನಿವಾಸಿ ಭಾರತೀಯರು ಒಂದು ಚಿಕ್ಕಾಸನ್ನೂ ನೇರವಾಗಿ ನೀಡುವುದಿಲ್ಲ. ಆದರೂ ಅವರ ದೇಶಪ್ರೇಮಕ್ಕೇನೂ ಕುಂದು ಬರುವುದಿಲ್ಲ. ಇನ್ನು ನಮ್ಮ ಅಪ್ಪಟ ದೇಶ ಭಕ್ತರಾದ ಕ್ರಿಕೆಟ್ ಪಟುಗಳಂತೂ ಇದರ ಬಗ್ಗೆ ಚಿಂತಿಸುವುದೂ ಇಲ್ಲ. ಇಷ್ಟಾದರೂ ಈ ಬಿಳಿ ಆನೆಗಳನ್ನು ಸಲಹಲು ಸರ್ಕಾರ ಸದಾ ಉತ್ಸುಕವಾಗಿರುತ್ತದೆ. ಇದು ನಮ್ಮ ರಾಷ್ಟ್ರ ಪ್ರೇಮದ ವೈಖರಿ.

ಎಂ. ಎಸ್. ಸ್ವಾಮಿನಾಥನ್ ಅವರು ಹೇಳುವಂತೆ, "ನಮ್ಮ ಮಾತು-ಕೃತಿ ಎಂದೂ ತಾಳೆಯಾಗುವುದೇ ಇಲ್ಲ. ಇದು ನಮ್ಮ ದೇಶದ ದೊಡ್ಡ ದುರಂತ. ನಮ್ಮ ರಾಜಕೀಯ ನಾಯಕರುಗಳಿಗೆ ಇಚ್ಛಾಶಕ್ತಿ ಎಂಬುದೊಂದಿದ್ದರೆ ನಾವು ಈ ಮಾನವ ಸಂಕಷ್ಟಗಳನ್ನು ಸುಲಭವಾಗಿ ನಿವಾರಿಸಬಹುದು."

ಆದರೆ ಜಾಗತೀಕರಣದ ಗುಂಗಿನಲ್ಲಿ ಪಶುಗಳನ್ನೂ ಮನುಜರನ್ನೂ ಒಂದೇ ದೃಷ್ಟಿಯಿಂದ ಕಾಣುವ ಈ ಸಾಮ್ರಾಜ್ಯಶಾಹಿಗಳ ಗುಲಾಮರಿಗೆ ಸಂವೇದನೆಯೇ ಇಲ್ಲದಿರುವಾಗ ರಾಜಕೀಯ ಇಚ್ಛಾಶಕ್ತಿ ಹೇಗೆ ತಾನೆ ಬಂದೀತು ?

ನಾ. ದಿವಾಕರ
ಮಹಾವೀರ ರಸ್ತೆ, ಬೆಳ್ಳೂರು-೫೭೧ ೪೧೮, ಮಂಡ್ಯ ಜಿಲ್ಲೆ

# ಅಂತರ್‌ಜಾಲ ಮತ್ತು ಮಹಿಳೆ

ಕೆ. ಸರೋಜಾ

ಇಂದು ಸಮೂಹ ಮಾಧ್ಯಮಗಳ ಯುಗವಾಗಿದ್ದು ಅವು ಸಾಮಾಜಿಕ ಬದಲಾವಣೆಗಳನ್ನು ತರುವಲ್ಲಿ, ಸಾರ್ವಜನಿಕ ಅಭಿಪ್ರಾಯಗಳನ್ನು ರೂಢಿಸುವಲ್ಲಿ, ಜನರ ಜೀವನಶೈಲಿಗಳಲ್ಲಿ ಬದಲಾವಣೆಗಳನ್ನು ತರುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಸಮೂಹ ಮಾಧ್ಯಮಗಳ ಈ ಮಹತ್ವವನ್ನು ಪ್ರಗತಿಪರ ಹಾಗು ಪ್ರಗತಿ ವಿರೋಧೀ ಶಕ್ತಿಗಳೆರಡೂ ತಮ್ಮ ತಮ್ಮ ಗುರಿಗಳತ್ತ ಸಾಗುವಲ್ಲಿ ಉಪಯೋಗಿಸಿಕೊಳ್ಳಬಹುದಾಗಿದೆ. ಆಧುನಿಕ ತಂತ್ರಜ್ಞಾನ ಇಂದು ಸಮೂಹ ಮಾಧ್ಯಮಗಳ ಕೇಂದ್ರೀಕೃತ ನಿಯಂತ್ರಣವನ್ನು ಸುಲಭಸಾಧ್ಯವಾಗಿ ಮಾಡಿದೆಯಲ್ಲದೆ, ಅವುಗಳ ವ್ಯಾಪ್ತಿ ದೇಶದ ಮೂಲೆಮೂಲೆಗಳಲ್ಲಿ ಹರಡುವಂತೆ ಮಾಡಿದೆ. ಸಮೂಹ ಮಾಧ್ಯಮಗಳಿಗೆ ಈಗಿರುವ ಅಗಾಧ ವ್ಯಾಪ್ತಿಗಿಂತ ಹೆಚ್ಚಾಗಿ ನಮ್ಮ ದೇಶದ ಪ್ರಜ್ಞಾವಂತರನ್ನು ಚಿಂತೆಗೀಡುಮಾಡುತ್ತಿರುವ ವಿಷಯವೆಂದರೆ, ಜನರ ಸಾಮಾಜಿಕ ಪ್ರಕ್ರಿಯೆಗಳ ಮೇಲೆ, ಜೀವನ ಶೈಲಿಗಳ ಮೇಲೆ, ಅವರ ಅಭಿಪ್ರಾಯಗಳ ಮೇಲೆ, ಚಿಂತನೆಗಳ ದಿಕ್ಕುಧೋರಣೆಗಳ ಮೇಲೆ ಸಮೂಹ ಮಾಧ್ಯಮಗಳು ಬೀರುತ್ತಿರುವ ಪ್ರತ್ಯಕ್ಷ ಹಾಗೂ ಪರೋಕ್ಷವಾದ ಪ್ರಭಾವ.

ಏಕೆಂದರೆ ಇಂದು ಸಮೂಹ ಮಾಧ್ಯಮಗಳು ಸಮಾಜದಲ್ಲಿ ಅನೇಕ 'ಮಿಥ್'ಗಳನ್ನು ತಯಾರುಮಾಡುವ ಅಥವಾ ಈಗಾಗಲೇ ಇರುವ 'ಮಿಥ್'ಗಳನ್ನು ಬಲಪಡಿಸುವ ವ್ಯವಸ್ಥೆಯ ಬೇರ್ಪಡಿಸಲಾಗದ ಅಂಗಗಳಂತೆಯೇ ಇವೆ. ಪ್ರಜ್ಞಾಪೂರ್ವಕವಾಗಿಯೋ ಅಥವಾ ಅರಿವಿಲ್ಲದೆಯೋ ಹಿಂದಿನಿಂದ ಬಂದ ಸಾಮಾಜಿಕ ಸಂರಚನೆಗಳನ್ನು, ಸಾಂಪ್ರದಾಯಿಕ ಆಚರಣೆಗಳನ್ನು, ಮೌಲ್ಯಗಳನ್ನು, ಮನೋಭಾವನೆ ಇತ್ಯಾದಿಗಳನ್ನು ನಿರ್ವಚಿಸುವುದರ ಮೂಲಕ, ಪ್ರತಿಪಾದಿಸುವುದರ ಮೂಲಕ ಮತ್ತು ಕೆಲವೇಳೆ ವೈಭವೀಕರಿಸುವುದರ ಮೂಲಕ ಹಿಂದಿನಿಂದ ಬಂದ ಯಥಾಸ್ಥಿತಿಯನ್ನು ಇಷ್ಟ ಬಲಪಡಿಸುತ್ತಲೇ ಬಂದಿವೆ. ಸಮೂಹ ಮಾಧ್ಯಮಗಳ ಇಂತಹ ಪ್ರಕ್ರಿಯೆಗಳಲ್ಲಿ, ಸ್ತ್ರೀಗ ಇರುವ ತನ್ನತನದ ಪ್ರತ್ಯೇಕ ವ್ಯಕ್ತಿತ್ವ ಮುಳುಗಿಹೋಗಿ ಅವಳು ದೂರದರ್ಶನ ಚಲನಚಿತ್ರಗಳ ಪರದೆಗಳ ಮೇಲಾಗಲೀ, 'ಗೃಹಶೋಭೆ'ಯಂಥ ಜನಪ್ರಿಯ ಮಹಿಳಾ ಪತ್ರಿಕೆಗಳಲ್ಲಾಗಲೀ ಅಥವಾ ಮುಖ್ಯವಾಹಿನಿಯ ಮಹಿಳಾ ಪುಟಗಳಲ್ಲಾಗಲೀ ತನ್ನ ರೂಢಿಗತ ಸಾಂಪ್ರದಾಯಕ ಪಾತ್ರಗಳಲ್ಲೇ ಹೆಚ್ಚಾಗಿ ಕಾಣಿಸಿಕೊಳ್ಳಬೇಕಾಗಿದೆ. ಸಾಮಾನ್ಯವಾಗಿ ಮುಖ್ಯವಾಹಿನಿಯ ಎಲ್ಲಾ ಸಮೂಹ ಮಾಧ್ಯಮಗಳಲ್ಲಿ ಮಹಿಳೆಯರ ಸರ್ವಾಂಗೀಣ ವಿಕಾಸಕ್ಕೆ, ವ್ಯಕ್ತಿತ್ವದ ಪ್ರಗತಿಗೆ ಸಹಕಾರಿಯಾದ ಅಂಶಗಳನ್ನು ಹಾಗೂ ಮಹಿಳೆಯರು ಇಂದು ಎದುರಿಸುತ್ತಿರುವ ನೈಜ ಸಮಸ್ಯೆಗಳನ್ನು, ಅವುಗಳನ್ನು ಅವರು ನಿರ್ವಹಿಸುತ್ತಾ ಬದುಕುತ್ತಿರುವುದನ್ನು ಪ್ರತಿಫಲಿಸಬಲ್ಲ ಮಾಧ್ಯಮಗಳ ಪ್ರಯತ್ನಗಳು ಬಹಳ ಅಪರೂಪವಾಗಿವೆ.

ಈ ಹಿನ್ನೆಲೆಯಲ್ಲಿ ನಮ್ಮ ದೇಶದ ಉದಾರ ಆರ್ಥಿಕ ಹೊಸನೀತಿಯ ಫಲವಾಗಿ ಜಾರಿಗೆ ಬಂದಿರುವ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣಗಳ ಪ್ರಕ್ರಿಯೆಗಳು ತಮ್ಮ ಮಾರುಕಟ್ಟೆಯ ಹಿತಾಸಕ್ತಿಗಳಿಗಾಗಿ ಮಾಧ್ಯಮಗಳನ್ನು ಹಾಗೂ ಈ ಮಾಧ್ಯಮಗಳಲ್ಲಿ ಮಹಿಳೆಯರನ್ನು ಹೇಗೆ ಬಳಸಿಕೊಳ್ಳುತ್ತಿವೆ ಎಂಬುದನ್ನು ಇಲ್ಲಿ ಗಮನಿಸುವುದು ಮುಖ್ಯ. ಇಂದು ದೂರದರ್ಶನ, ಸಿನೆಮಾ, ಆಕಾಶವಾಣಿ, ಮುದ್ರಣ ಮಾಧ್ಯಮ, ಅದರಲ್ಲಿಯೂ ಮುಖ್ಯವಾಹಿನಿಯ ಪತ್ರಿಕೆಗಳು, ಇವು ಯಾವುವೂ ಮಾರುಕಟ್ಟೆಯ ಶಕ್ತಿಗಳ ಕಪಿಮುಷ್ಟಿಯಿಂದ ಪಾರಾಗಿ ಉಳಿದಿಲ್ಲ. ಮಾರುಕಟ್ಟೆಯ ಹಿತಾಸಕ್ತಿಗಳು ತಮ್ಮ ಜಾಹಿರಾತಿನ ಧನಬಲದಿಂದ ಇಂದು ಅನೇಕ ಪತ್ರಿಕೆಗಳ ಮೇಲೆ ಪರೋಕ್ಷವಾದ ಒಂದು ಬಗೆಯ ಪ್ರಭುತ್ವವನ್ನೇ ಹೊಂದಿವೆ ಎಂದರೂ ತಪ್ಪಾಗಲಾರದು. ಹೀಗಾಗಿ ಪ್ರಜಾಪ್ರಭುತ್ವದ ಆಧಾರಸ್ತಂಭಗಳಲ್ಲಿ ಒಂದಾಗಬಹುದಾಗಿದ್ದ ಮುಖ್ಯ ವಾಹಿನಿಯ ಸಮೂಹ ಮಾಧ್ಯಮಗಳು ಜನರಿಗೆ ಶಿಕ್ಷಣ, ಜ್ಞಾನ, ಮಾಹಿತಿ, ಸಂಸ್ಕೃತಿ ಪ್ರಸಾರ ಹಾಗೂ ಹಿತವಾದ, ಆರೋಗ್ಯಕರ ಮನರಂಜನೆ ನೀಡುವ, ನೀಡಬಲ್ಲ ಮಾಧ್ಯಮಗಳಾಗಿ (ಅಪವಾದಗಳಾಗಿರುವ ಕೆಲವೇ ಕೆಲವು ಪತ್ರಿಕೆ, ಸಿನೆಮಾ ಇತ್ಯಾದಿಗಳನ್ನು ಬಿಟ್ಟರೆ) ಉಳಿದಿಲ್ಲ ಎಂಬುದು ಕಟುಸತ್ಯ.

ಸಮೂಹ ಮಾಧ್ಯಮಗಳು ಮಹಿಳೆಯರ ಸ್ಥಾನಮಾನಗಳ ಮೇಲೆ ಬೀರುತ್ತಿರುವ ದುಷ್ಪರಿಣಾಮ ಹಾಗೂ ಅವರನ್ನು ಚಿತ್ರಿಸುವ ರೀತಿಯಲ್ಲಿಯೇ ಎತ್ತಿಕಾಣುವ ಶೋಷಣೆಯ ವಿಧಾನಗಳನ್ನು ಕುರಿತಂತೆ ಸಂಶೋಧನೆಗಳೂ, ಚರ್ಚೆಗಳೂ ನಡೆದಿದ್ದು ಮಾಧ್ಯಮಗಳು ಮಹಿಳೆಯರನ್ನು, ಅವರ ಕಾಳಜಿಗಳನ್ನು ನೇತ್ಯಾತ್ಮಕವಾಗಿ ಬಿಂಬಿಸುತ್ತಿವೆ ಎಂಬುದೀಗ ಸುಸ್ಪಷ್ಟವಾಗಿದೆ. ಭಾರತದಲ್ಲಿ ಇಂದು ಪ್ರಚಲಿತವಾಗಿರುವ ಸಮೂಹ ಮಾಧ್ಯಮಗಳ ಪಟ್ಟಿಗೆ ಅಂತರ್‌ಜಾಲ ಕಳೆದ ಎರಡು ದಶಕಗಳಿಂದ ಸೇರ್ಪಡೆಯಾಗಿದೆ. ಆರಂಭದಲ್ಲಿ ಅಂತರ್‌ಜಾಲದ ಉಪಯೋಗ ಸಿರಿವಂತರ ಸ್ವತ್ತಾಗಿದ್ದರೂ ಈಗೀಗ ಮಾಹಿತಿ ತಂತ್ರಜ್ಞಾನದ ಶಿಕ್ಷಣವು ವೇಗವಾಗಿ ಹರಡಿದ್ದುದರಿಂದ, ಕಂಪ್ಯೂಟರ್ ಬೆಲೆಗಳು ಕುಸಿದಿರುವುದರಿಂದ ದೊಡ್ಡ ಮತ್ತು ಮಧ್ಯಮಗಾತ್ರದ ನಗರಗಳಲ್ಲಿ ಸೈಬರ್ ಕೆಫೆಗಳು ನಾಯಿಕೊಡೆಗಳಂತೆ ತಲೆಯೆತ್ತುತ್ತಿವೆ. ಅದರ ಉಪಯೋಗಕ್ಕಾಗಿ ಖರ್ಚುಮಾಡಲು ಸಿದ್ಧವಿರುವ ಎಲ್ಲರಿಗೂ ಅದು ಲಭ್ಯವಾಗಿದೆ. ಬರೀ ಕ್ಲಿಕ್ ಮಾಡುವುದರ ಮೂಲಕ ಅಗಾಧವಾದ ಮಾಹಿತಿಗೆ, ಮಾಹಿತಿಗಳ ಜಾಲಗಳಿಗೆ, ವಿಶ್ವವ್ಯಾಪಿಯಾದ ಸಂವಹನಕ್ಕೆ ಅಂತರ್‌ಜಾಲ ಹೆಬ್ಬಾಗಿಲನ್ನೇ ತೆರೆದಿಟ್ಟಿದೆ.

ಅಂತರ್‌ಜಾಲದ ಸಂರಚನೆ ಹಾಗೂ ಉಪಯೋಗ (ಅದಕ್ಕಾಗಿ ಬೆಲೆ ತೆರುವ ಎಲ್ಲರಿಗೂ ಮುಕ್ತವಾಗಿ ದೊರಕುವುದರಿಂದ) ವ್ಯಾಪ್ತಿಯಲ್ಲಿಯೂ ವೈವಿಧ್ಯತೆಯಲ್ಲಿಯೂ ಶರವೇಗದಲ್ಲಿ ಬೆಳೆಯುತ್ತಿದೆ. ಉದಾಹರಣೆಗೆ ಈ-ಮೇಲ್ ಮುಖಾಂತರ ಅಂಚೆ ಕಳಿಸಲು, ಗುಂಪು ಚರ್ಚೆ ನಡೆಸಲು, ಬುಲೆಟಿನ್ ಬೋರ್ಡ್‌ನ ರೀತಿಯಲ್ಲಿ ಹೇಳಿಕೆ ನೀಡಲು, ಹರಟೆ ಹೊಡೆಯಲು, ವೆಬ್‌ಸೈಟ್ ಮೂಲಕ ಸರಕುಗಳನ್ನು ಮಾರಾಟಮಾಡಲು, ದೇಶವಿದೇಶಗಳ ಆಯ್ದ ಪತ್ರಿಕೆಗಳ ಮುಖ್ಯ ಸುದ್ದಿಗಳನ್ನು ಓದಲು, ವೀಡಿಯೋಕಾನ್‌ಫರೆನ್ಸ್ ನಡೆಸಲು, ಫೈಲ್‌ಗಳನ್ನು ವರ್ಗಾಯಿಸಲು, ವಿಶ್ವದ ಇತರ ವೆಬ್‌ಸೈಟ್‌ಗಳೊಂದಿಗೆ ಸಂಪರ್ಕ ಬೆಳಸಲು... ಹೀಗೆ ಅಂತರ್‌ಜಾಲದ ಉಪಯೋಗ ಗಳ ಪಟ್ಟಿ ಬೆಳೆಯುತ್ತಾ ಹೋಗುತ್ತಿದೆ. ಇದೇ ರೀತಿಯಲ್ಲಿ ಅಂತರ್‌ಜಾಲದ ಬಳಕೆದಾರರ ಸಂಖ್ಯೆಯೂ ಅತ್ಯಂತ ವೇಗದಿಂದ ಬೆಳೆಯುತ್ತಿದೆ. ಇತ್ತೀಚಿನ ರಾಷ್ಟ್ರೀಯ

ಸಮೂಹ ಮಾಧ್ಯಮಗಳು ಮಹಿಳೆಯರ ಸ್ಥಾನಮಾನಗಳ ಮೇಲೆ ಬೀರುತ್ತಿರುವ ದುಷ್ಪರಿಣಾಮ ಹಾಗೂ ಅವರನ್ನು ಚಿತ್ರಿಸುವ ರೀತಿಯಲ್ಲಿಯೇ ಎತ್ತಿಕಾಣುವ ಶೋಷಣೆಯ ವಿಧಾನಗಳನ್ನು ಕುರಿತಂತೆ ಸಂಶೋಧನೆಗಳೂ, ಚರ್ಚೆಗಳೂ ನಡೆದಿದ್ದು ಮಾಧ್ಯಮಗಳು ಮಹಿಳೆಯರನ್ನು, ಅವರ ಕಾಳಜಿಗಳನ್ನು ನೇತ್ಯಾತ್ಮಕವಾಗಿ ಬಿಂಬಿಸುತ್ತಿವೆ ಎಂಬುದೀಗ ಸುಸ್ಪಷ್ಟವಾಗಿದೆ. ಭಾರತದಲ್ಲಿ ಇಂದು ಪ್ರಚಲಿತವಾಗಿರುವ ಸಮೂಹ ಮಾಧ್ಯಮಗಳ ಪಟ್ಟಿಗೆ ಅಂತರ್‌ಜಾಲ ಕಳೆದ ಎರಡು ದಶಕಗಳಿಂದ ಸೇರ್ಪಡೆಯಾಗಿದೆ. ಆರಂಭದಲ್ಲಿ ಅಂತರ್ ಜಾಲದ ಉಪಯೋಗ ಸಿರಿವಂತರ ಸ್ವತ್ತಾಗಿದ್ದರೂ ಈಗೀಗ ಮಾಹಿತಿ ತಂತ್ರಜ್ಞಾನದ ಶಿಕ್ಷಣವು ವೇಗವಾಗಿ ಹರಡಿದ್ದುದರಿಂದ, ಕಂಪ್ಯೂಟರ್ ಬೆಲೆಗಳು ಕುಸಿದಿರುವುದ ರಿಂದ ದೊಡ್ಡ ಮತ್ತು ಮಧ್ಯಮ ಗಾತ್ರದ ನಗರಗಳಲ್ಲಿ ಸೈಬರ್ ಕೆಫೆಗಳು ನಾಯಿಕೊಡೆಗಳಂತೆ ತಲೆಯೆತ್ತುತ್ತಿವೆ.

■

ಓದುಗರ ಸಮೀಕ್ಷೆಯ ಪ್ರಕಾರ ೧೯೯೯ರಲ್ಲಿ ಬಳಕೆದಾರರ ಸಂಖ್ಯೆ ೧.೪ ದಶಲಕ್ಷದಷ್ಟಿದ್ದು ೨೦೦೨ರ ವೇಳೆಗೆ ೪.೬೩ ದಶಲಕ್ಷದಷ್ಟು ಬೆಳೆದಿದೆ.

ಇಂದು ನಮ್ಮ ದೇಶದಲ್ಲಿ ವಿವಿಧ ರೀತಿಗಳಲ್ಲಿ ಹಾಗೂ ವಿಶಾಲವ್ಯಾಪ್ತಿಯಲ್ಲಿ ಅಂತರ್‌ಜಾಲ ಹೇಗೆ ಸದುಪಯೋಗಗೊಳ್ಳುತ್ತಿದೆಯೋ ಅದೇ ರೀತಿಯಲ್ಲಿ ದುರುಪಯೋಗಗೊಳ್ಳುವ ಸಾಧ್ಯತೆಯೂ ಇದೆ. ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ಮಾಹಿತಿ ತಂತ್ರಜ್ಞಾನದ (ದುರುಪಯೋಗ ನಿಷೇಧ) ಕಾನೂನಿನ ೬೭ನೇ ಪರಿಚ್ಛೇದದ ಅಡಿಯಲ್ಲಿ ಸೈಬರ್ ಅಪರಾಧದಲ್ಲಿ ತೊಡಗಿದ್ದ ಚೆನ್ನೈ ನಗರದ ಡಾ॥ ಎಲ್. ಪ್ರಕಾಶ್ ಎಂಬ ೪೪ ವರ್ಷದ ತಜ್ಞ ವೈದ್ಯನನ್ನು ಬಂಧಿಸಲಾಗಿದೆ. ಈತನು ಅಂತರ್‌ಜಾಲದ ದುರುಪಯೋಗ ಮಾಡಿಕೊಂಡು ಹಲವಾರು ಅಶ್ಲೀಲ ಚಲನಚಿತ್ರಗಳು, ಛಾಯಾ ಚಿತ್ರಗಳು ಮತ್ತು ವಿಕೃತ ಕಾಮವನ್ನು ಬಿಂಬಿಸುವ ವೆಬ್‌ಸೈಟ್‌ಗಳನ್ನು ಹೊಂದಿ ಕಾನೂನುಬಾಹಿರವಾಗಿ ಅಪಾರ ಹಣ ಗಳಿಸುತ್ತಿದ್ದನೆಂದು ಪೊಲೀಸರು ಆಪಾದಿಸಿದ್ದಾರೆ. ಅಮಾಯಕರಾದ ಹದಿಹರೆಯದ ಹುಡುಗ ಹುಡುಗಿಯರನ್ನು ಮೋಸದಿಂದಲೋ, ಪ್ರಾಣಭಯ ಹಾಕಿಯೋ ದುರುಪಯೋಗ ಮಾಡಿಕೊಂಡು ಅವರಿಂದ ಊಹಿಸಲೂ ಅಸಾಧ್ಯವಾದ ಅನೇಕ ವಿಕೃತಕಾಮದ ಕೃತಿಗಳನ್ನು ಮಾಡಿಸಿ ಅವುಗಳನ್ನು ಚಿತ್ರೀಕರಿಸಿ ಅವನ್ನು ಹಣ ನೀಡುವ ವಿದೇಶೀಯ ವೆಬ್‌ಸೈಟ್‌ಗಳಿಗೆ ಮಾರುವ, ಅಪಾರ ಹಣ ಗಳಿಸುವ ದಂಧೆ ನಡೆಸುತ್ತಿದ್ದನೆಂದು ತಿಳಿದುಬಂದಿದೆ. ಇವನು ತಯಾರಿಸಿದ ಈ ಅಶ್ಲೀಲ ದಂಧೆಗೆ ಚೆನ್ನೈ ನಗರದ ಹಲವಾರು ಗಣ್ಯವ್ಯಕ್ತಿಗಳು, ಉನ್ನತ ಪೊಲೀಸ್ ಅಧಿಕಾರಿಗಳು ಹಾಗೂ ಇನ್ನಿತರ ಸರ್ಕಾರಿ ಅಧಿಕಾರಿಗಳು ಶಾಮೀಲಾಗಿದ್ದರು ಎಂಬುದೂ ತಿಳಿದುಬಂದಿದೆ. ಇನ್ನೂ ಬೆಳಕಿಗೆ ಬರದಿರುವ ಇಂಥ ಹೀನ ಸ್ತ್ರೀ ಶೋಷಣೆಯ ಇನ್ನೆಷ್ಟು ವೆಬ್‌ಸೈಟ್‌ಗಳು ಅಂತರ್‌ಜಾಲದಲ್ಲಿ ಅಡಗಿವೆಯೋ! ನಮ್ಮ ದೇಶದಲ್ಲಿ ಅಂತರ್‌ಜಾಲದ ಈ ಬಗೆಯ ದುರುಪಯೋಗಕ್ಕಾಗಿ ಹಣ ಹೂಡಬಲ್ಲ ತಾಖತ್ತಿರುವವರು ಸರ್ಕಾರಿ ಅಧಿಕಾರದ ಅಂಗಳಗಳಲ್ಲಿ ಪ್ರಭಾವ ಬೀರಬಲ್ಲ ವ್ಯಕ್ತಿಗಳು, ಪೊಲೀಸರನ್ನು ಕೊಂಡುಕೊಳ್ಳಬಲ್ಲ ಧನದಾಹಿಗಳು. ಆದ್ದರಿಂದಲೂ ಅಪಾರ ಹಣ ದೋಚುತ್ತಿರುವುದನ್ನು ಕೂಡಲೇ ತಡೆಗಟ್ಟಬೇಕಾಗಿದೆ.

ಹೊಸ ತಾಂತ್ರಿಕತೆಗಳ ಆವಿಷ್ಕಾರಗಳು ಬಳಕೆಗೆ ಬಂದಹಾಗೆಲ್ಲಾ ಅವು ಮಹಿಳೆಯನ್ನು ಒಂದು ಉಪಭೋಗದ ಸಾಮಗ್ರಿಯನ್ನಾಗಿಸಿ, ಅವಳನ್ನು ಶೋಷಿಸುವ ಸಾಧನಗಳಾಗುತ್ತಿವೆ ಎಂಬುದು ಖೇದಕರ ಸಂಗತಿ. ಈಗಾಗಲೇ ನಮ್ಮ ಭಾರತೀಯ ಸಂದರ್ಭದಲ್ಲಿ ಉಳ್ಳವರ ಮತ್ತು ಬಡವರ ನಡುವಿನ ಅಂತರ ಹೆಚ್ಚಾಗುತ್ತಿದ್ದು ಬಡವರ, ಬಲಹೀನರ ದನಿಯಿಲ್ಲದ ಜನಸಮುದಾಯಗಳ ಗುಂಪಿಗೆ ಸೇರಿದ ಮಹಿಳೆಯರ ಶೋಷಣೆಗೆ ಅಂತರ್‌ಜಾಲದ ಉಪಯೋಗವೂ ಒಂದು ಸಾಧನವಾಗುತ್ತಿರುವುದು ಗಂಭೀರವಾದ ಸಂಗತಿಯೇ ಸರಿ.

ಅಂತರ್‌ಜಾಲದ ಬಗ್ಗೆ ಎರಡು ಅಭಿಪ್ರಾಯಗಳಿವೆ. ಒಂದು ಅಭಿಪ್ರಾಯದಂತೆ, ಪ್ರಪಂಚದ ಅನೇಕ ಸಮಸ್ಯೆಗಳನ್ನು ಪರಿಹರಿಸಬಲ್ಲ ತಾಂತ್ರಿಕ ಆವಿಷ್ಕಾರವೇ ಅಂತರ್‌ಜಾಲ. ಇನ್ನೊಂದು ಅಭಿಪ್ರಾಯವು, ಅಂತರ್‌ಜಾಲದ ಅವಶ್ಯಕತೆಯಿರುವ ಶಿಕ್ಷಣ ಹಾಗೂ ಹಣದ ಬಲವಿಲ್ಲದವರ ಬದುಕನ್ನು ಬಗ್ಗಡಗೊಳಿಸಬಲ್ಲ ಶಕ್ತಿಶಾಲಿ ಮಾಧ್ಯಮ ಎಂದೇ ಗುರ್ತಿಸಿದೆ. ಮೊದಲನೆಯ ಅಭಿಪ್ರಾಯದ ಪ್ರಕಾರ ಅಂತರ್‌ಜಾಲವು ಮಾಹಿತಿ ಸ್ವಾತಂತ್ರ್ಯದ ಹರಿಕಾರ ಎನಿಸಿಕೊಂಡಿದೆ. ಈ ತಾಂತ್ರಿಕತೆ ಹಾಗೂ ಅದು ಒದಗಿಸಿಕೊಟ್ಟಿರುವ ಮಾಹಿತಿ ಸ್ವಾತಂತ್ರ್ಯ ಯಾರಿಗಾಗಿ? ಏತಕ್ಕಾಗಿ? ಎಂಬ ಪ್ರಶ್ನೆಗಳನ್ನು ಎರಡನೆಯ ಅಭಿಪ್ರಾಯ ಬಿಂಬಿಸುತ್ತದೆ.

ಅಂತರ್‌ಜಾಲದ ಉಪಯೋಗದ ಬಗ್ಗೆ ಸಂಶೋಧನೆ ಮಾಡಿರುವ ಶುಭಾಂಗಿ ಆಪ್ಟೆಯವರ ಪ್ರಕಾರ ಹಾಗೂ ಇನ್ನಿತರ ವಿದ್ವಾಂಸರ ಪ್ರಕಾರ, ಅಂತರ್‌ಜಾಲದ ಅಬ್ಬರದ ಪ್ರಚಾರದ ಮೇಲ್ಪದರಗಳನ್ನು ಒಂದೊಂದಾಗಿ ಕಳಚುತ್ತಾ ಹೋದಂತೆ ಅದರಲ್ಲಿ ಅಡಗಿರುವ ಅಸಮಾನತೆಗಳು - ಅಂದರೆ ಅಂತರ್‌ಜಾಲದ ಉಪಯೋಗದ ವ್ಯಾಪ್ತಿ ಹಾಗೂ ಅದರ ಉಪಯೋಗಗಳು ಯಾರನ್ನು ತಲುಪುತ್ತಿವೆ ಎಂಬುವಾಗ ಅಲ್ಲಿ ಅಡಗಿರುವ ಅಸಮಾನತೆಗಳು ಕಣ್ಣಿಗೆ ರಾಚುತ್ತವೆ. ಅಂತರ್‌ಜಾಲದಲ್ಲಿ ಇಂದು ಲಭ್ಯವಿರುವ ಮಾಹಿತಿ, ತಾಂತ್ರಿಕತೆ, ಜ್ಞಾನ ಇತ್ಯಾದಿಗಳು ಸಾಮಾಜಿಕವಾಗಿ ಆರ್ಥಿಕವಾಗಿ ಬಲಿಷ್ಠರಾದವರನ್ನು ಮತ್ತಷ್ಟು ಬಲಗೊಳಿಸಿ ಸಿರಿವಂತರ ಮತ್ತು ಬಡವರ ನಡುವಣ ಅಂತರವನ್ನು ಇನ್ನಷ್ಟು ಹೆಚ್ಚಿಸುತ್ತಾ ಹೋಗುತ್ತಿವೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಅಂತರ್‌ಜಾಲದ ತಾಂತ್ರಿಕತೆಯ ಪ್ರಯೋಜನಗಳು ಎಲ್ಲರಿಗೂ ದಕ್ಕುತ್ತಿವೆಯೇ ಎಂಬ ಪ್ರಶ್ನೆಗೆ 'ಇಲ್ಲ' ಎನ್ನುವುದೇ ಉತ್ತರವಾಗಿದೆ.

ಇಂದು, ಲಭ್ಯವಾಗಬಹುದಾದ ಇತ್ತೀಚಿನ ಮಾಹಿತಿಯ ಜ್ಞಾನವನ್ನು ಶಕ್ತಿಗೆ ಅಥವಾ ಅಧಿಕಾರಕ್ಕೆ ಸಮೀಕರಿಸಲಾಗುತ್ತಿದೆ. ಆದ್ದರಿಂದ ಇಂದು ಯಾರಿಗೆ ಇತ್ತೀಚಿನ ತಂತ್ರಜ್ಞಾನ ಹಾಗೂ ಇನ್ನಿತರ ಪ್ರಕಾರಗಳ ಮಾಹಿತಿ ಇಲ್ಲವೋ ಅವರು ಇಂದಿನ ಸೈಬರ್ ಜಾಲದ ಜಗತ್ತಿನಲ್ಲಿ ಇನ್ನಷ್ಟು ಬಲಹೀನರಾಗುವುದರಲ್ಲಿ ಸಂಶಯವಿಲ್ಲ. ಅಂತರ್‌ಜಾಲ ಆಧುನಿಕ ತಾಂತ್ರಿಕತೆಯ ಬಹುಮುಖ್ಯ ಆವಿಷ್ಕಾರವಾಗಿದ್ದು, ಇನ್ನಿತರ ಎಲ್ಲಾ ಹೊಸ ತಾಂತ್ರಿಕತೆಯ ಆವಿಷ್ಕಾರಗಳಿವೆ. - ಇದರ ಉಪಯೋಗವೂ ಸಹ ಬರೀ ಉಳ್ಳವರ ಸ್ವತ್ತಾಗದೇ ಎಲ್ಲರಿಗೂ ದಕ್ಕುವಂತಾಗಬೇಕಾದ ಅಗತ್ಯವಿದೆ. ಏಕೆಂದರೆ, ಇದನ್ನು ಆದಷ್ಟೂ ಹೆಚ್ಚು ಜನರು ಸಮಾಜದ ಒಳಿತಿಗಾಗಿ ಉಪಯೋಗಿಸಿಕೊಳ್ಳಬೇಕಾಗಿದೆ. ಅದರಲ್ಲಿಯೂ ಸ್ತ್ರೀಯರಿಗೆ ಅಂತರ್‌ಜಾಲದ ಬಳಕೆಯಿಂದ ಉಂಟಾಗುವ ಜ್ಞಾನ ಹಾಗೂ ಉಪಯೋಗಗಳ ಆಯ್ಕೆ ಎರಡೂ ಎಟುಕುವಂತೆ ಮಾಡಬೇಕಾಗಿದೆ. ಈ ದಿಸೆಯಲ್ಲಿ ಮಹಿಳಾ ಕಾರ್ಯಶೀಲ ಕಾರ್ಯಕರ್ತರುಗಳು ಹಾಗೂ ಪ್ರಗತಿಪರ ಮಹಿಳಾ ಸಂಘಟನೆಗಳು ಅಂತರ್‌ಜಾಲವನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳ ಬೇಕಾಗಿದೆ. ಮಹಿಳೆಯರ ಗುಂಪುಗಳು, ಸ್ತ್ರೀ ಸಂಘಟನೆಗಳು ಹಾಗೂ ಸ್ತ್ರೀಪರ ಮಾನವೀಯ ಕಾಳಜಿಗಳನ್ನು ಉಳ್ಳವರು, ಪ್ರಪಂಚದಲ್ಲಿ ತಮ್ಮಂತೆಯೇ ಆಲೋಚಿಸುವ, ಕೆಲಸಮಾಡುವ ಅಥವಾ ಸಮಾನ ಮನಸ್ಕರಾದ ಗುಂಪುಗಳೊಡನೆ ವೇಗವಾಗಿ ಹಾಗೂ ಕಡಿಮೆ ಖರ್ಚಿನಲ್ಲಿ ಸಂಪರ್ಕ ಬೆಳೆಸಿಕೊಂಡು ಮಾಹಿತಿಯನ್ನು ಹಂಚಿಕೊಳ್ಳಲು ಹಾಗೂ ಪರಸ್ಪರ ಸಹಕಾರ ಬೆಂಬಲಗಳನ್ನು ನೀಡಲು ಅಂತರ್‌ಜಾಲವನ್ನು ಉಪಯೋಗಿಸಿ ಕೊಳ್ಳುವುದು ನಮ್ಮ ದೇಶದಲ್ಲಿ ತುರ್ತಾಗಿ ಆಗಬೇಕಾದ ಕೆಲಸವಾಗಿದೆ. ಇದರಿಂದ ಭಾರತೀಯ ಮಹಿಳಾ ಚಳುವಳಿಯನ್ನು ಬಲಪಡಿಸಲು ಸಾಧ್ಯವಾಗುವುದಲ್ಲದೆ ಚಳುವಳಿಯ ಮುಖ್ಯ ಗುರಿಗಳಾದ ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆಗಳ ವಿರುದ್ಧ ಕೆಲಸ ಮಾಡುತ್ತಿರುವ ಶಕ್ತಿಗಳನ್ನೆದುರಿಸುವ ಸಲುವಾಗಿ ಒಂದಾಗಲು ಹಾಗೂ ಈ ಗುರಿಗಳತ್ತ ಹೆಜ್ಜೆಯಿಡಲು ಸಾಧ್ಯವಾಗಬಹುದು.

ಸೈಬರ್ ಜಗತ್ತಿನಲ್ಲಿ ತುಸು ತಾಳ್ಮೆಯಿಂದ ಹುಡುಕಾಡಿದಲ್ಲಿ, ಮಹಿಳೆಯರು ಅಲ್ಲಿ ಈಗಾಗಲೇ ಹಲವಾರು ಜಾಲಗಳನ್ನು ತಮ್ಮ ನಡುವೆ ಬೆಸೆದುಕೊಂಡಿರುವುದನ್ನು ಕಾಣಬಹುದು. ಹಲವಾರು ಸ್ತ್ರೀ ಸಂಘಟನೆಗಳು ಈಗಾಗಲೇ ಅಂತರ್‌ಜಾಲದಲ್ಲಿ ವೆಬ್‌ಸೈಟ್‌ಗಳನ್ನು ತೆರೆದು ತಮ್ಮ ಸಂಘ/ಸಂಘಟನೆಗಳ ಇತಿಹಾಸ, ಕಾರ್ಯವ್ಯಾಪ್ತಿ ಮತ್ತು ಚಟುವಟಿಕೆಗಳನ್ನು ಸರ್ವರ ಉಪಯೋಗಕ್ಕಾಗಿ ತೆರೆದಿಟ್ಟಿರುವುದು ನಿಜಕ್ಕೂ ಒಂದು ಸ್ವಾಗತಾರ್ಹ ಬೆಳವಣಿಗೆ. ಉದಾಹರಣೆಗೆ ಗ್ಲೋಬಲ್ ವಿಮೆನ್ಸ್ ಆಕ್ಷನ್ ೨೦೦೦ ಜಾಲವನ್ನು ೧೯೯೯ರ ಮಾರ್ಚ್ ತಿಂಗಳಲ್ಲಿ ತೆರೆಯಲಾಗಿದ್ದು ಈ ಜಾಲ ಏಷ್ಯಾ, ಆಫ್ರಿಕಾ ಮುಂತಾದ ದೇಶಗಳ ವೆಬ್‌ಸೈಟ್‌ಗಳನ್ನು ಹೊಂದಿದೆ (www. Women action. Org). ದಿ ಐ ಐ ಎ ವಿ ವೆಬ್‌ಸೈಟ್‌ನಲ್ಲಿ ಮ್ಯಾಪಿಂಗ್-ದಿ-ವರ್ಲ್ಡ್ (www. Jia v.nl/mapping-the-World) ಇದರಲ್ಲಿ ಮಹಿಳೆಯರನ್ನು ಕುರಿತ ವಿಶ್ವದಲ್ಲಿರುವ ಗ್ರಂಥಾಲಯಗಳು ಹಾಗೂ ಮಾಹಿತಿ ಕೇಂದ್ರಗಳ ಮೂಲ ಮಾಹಿತಿ (data base) ಇದ್ದು, ಈ ಮಾಹಿತಿ ದಿನೇದಿನೇ ಬೆಳೆಯುತ್ತಾ ಹೋಗುತ್ತಿದೆ.




ಇವೆಲ್ಲಾ ಬೆಳವಣಿಗೆಗಳಿಗಿಂತಲೂ ಹೆಚ್ಚು ಆಸಕ್ತಿ ಕೆರಳಿಸುವ ವಿಷಯವೆಂದರೆ ಈಗಾಗಲೇ ಸೈಬರ್ ಸ್ತ್ರೀವಾದದ ಸಿದ್ಧಾಂತ ಉದಯವಾಗಿರುವುದು. ಇದು ಅಂತರ್‌ಜಾಲದಲ್ಲಿ ಸ್ತ್ರೀಪರ ಕಾಳಜಿಗಳನ್ನು ಬಿಂಬಿಸುವ ಸ್ತ್ರೀವಾದಿ ಸಿದ್ಧಾಂತವಾಗಿದೆ. ''ಸೈಬರ್ ಸ್ಪೇಸ್, ಕೈಗಾರಿಕಾ

ವಿನ್ಯಾಸಗಳ ಸಾಂಸ್ಥೀಕರಣ, ಶಿಕ್ಷಣ ಸಂಸ್ಥೆಗಳು ಇತ್ಯಾದಿಗಳ ವಸ್ತುನಿಷ್ಠ ವಿಶ್ಲೇಷಣೆಗಳನ್ನು ಈ ಹೊಸ ಸಿದ್ಧಾಂತದ ಗಡಿಯಲ್ಲಿ ಸೇರ್ಪಡೆ ಮಾಡಿಕೊಳ್ಳಲಾಗಿದೆ. ಉನ್ನತ ಶಿಕ್ಷಣ ಸಂಸ್ಥೆಗಳು, ತಾಂತ್ರಿಕ ಸಂಸ್ಥೆಗಳು, ಔದ್ಯೋಗಿಕ ಮತ್ತು ಕೈಗಾರಿಕಾ ಸಂಸ್ಥೆಗಳ ತಾಂತ್ರಿಕತೆಯ ಪ್ರಕ್ರಿಯೆಗಳಲ್ಲಿ ಹಾಗೂ ವೇಗವಾಗಿ ಬೆಳೆದು ವ್ಯಾಪಿಸುತ್ತಿರುವ ಒಪ್ಪಂದದ ತಾಂತ್ರಿಕತೆಯ ಸಂಸ್ಕೃತಿಯಲ್ಲಿರುವ, ಅಧಿಕಾರದ ಹಾಗೂ ಸಬಲೀಕರಣದ ನೆಲೆಗಳಿಂದ ಮಹಿಳೆಯರನ್ನು ಹೊರಗಿಡುವ ಮತ್ತು ಅವರಿಗೆ ಈ ನೆಲೆಗಳು ದಕ್ಕದಂತೆ ಮಾಡುವ ಲಿಂಗ ಅಸಮಾನತೆಯ ಹುನ್ನಾರಗಳನ್ನು ಸೈಬರ್ ಸ್ತ್ರೀವಾದ ಗುರ್ತಿಸಿದೆ. ಹೊಸ ಹೊಸ ತಾಂತ್ರಿಕ ಆವಿಷ್ಕಾರಗಳ ಬಳಕೆಯಿಂದಾಗಿ ಮಹಿಳೆಯರ ಬದುಕಿನ ಮೇಲಾಗುವ ದುಷ್ಪರಿಣಾಮಗಳ ಬಗ್ಗೆ ಹಾಗೂ ನಮ್ಮ ದಿನನಿತ್ಯದ ಬದುಕಿನಲ್ಲಿ ತಾಂತ್ರಿಕತೆಯ ಸಂಸ್ಕೃತಿಯು ಪರೋಕ್ಷವಾಗಿ ಲಿಂಗ ಅಸಮಾನತೆಗಳನ್ನು ಬಲಪಡಿಸುತ್ತಿರುವ ವಿಧಾನಗಳ ಬಗ್ಗೆ ಜಾಗೃತಿ ಮೂಡಿಸಲು ನಡೆಸುವ ಹೋರಾಟ ಸಹ ಸೈಬರ್ ಸ್ತ್ರೀವಾದವಾಗಿದೆ (ಶುಭಾಂಗಿ ಆಪ್ಟೆ, ೨೦೦೦).

ಅಂತರ್‌ಜಾಲದಲ್ಲಿ ಸಾಕಷ್ಟು ಸ್ತ್ರೀವಾದೀ ಕಾಳಜಿಗಳನ್ನು ಕುರಿತ ಮಾಹಿತಿ ಲಭ್ಯವಿದ್ದರೂ ಸಹ ಅದರಲ್ಲಿ ಸಿಂಹಪಾಲು ಪಾಶ್ಚಿಮಾತ್ಯ ದೇಶಗಳಿಗೆ ಸಂಬಂಧಿಸಿದ ಮಾಹಿತಿಯಾಗಿದೆ. ಪ್ರಪಂಚದ ದಕ್ಷಿಣಾರ್ಧ ಗೋಲದಲ್ಲಿರುವ ಏಷ್ಯನ್, ಆಫ್ರಿಕನ್ ಮತ್ತಿತರ ಅಭಿವೃದ್ಧಿಶೀಲ ದೇಶಗಳ ಮಹಿಳಾ ಕಾಳಜಿಗಳ ಬಗ್ಗೆ ಚರ್ಚಿಸುವ ಮಾಹಿತಿ ನೀಡುವ ವೆಬ್‌ಸೈಟ್‌ಗಳಿದ್ದರೂ ಸಹ ಅವು ಕಡಿಮೆ ಸಂಖ್ಯೆಯಲ್ಲಿ ಇರುವುದನ್ನು ಗಮನಿಸಬಹುದು. ಭಾರತೀಯ ಮಹಿಳೆಯರ ಬಗ್ಗೆ ಜನಪ್ರಿಯವಾದ ಭಾರತೀಯ ಮಹಿಳಾ ಪತ್ರಿಕೆಗಳು ಮಾಹಿತಿ ನೀಡುವ ರೀತಿಯಲ್ಲಿ, ಅವು ಬರೆಯುವ ಮಹಿಳೆಯರ ವಿಷಯಗಳಿಂದ ಅಥವಾ ಕಾಳಜಿಗಳೆಂದೇ ಸಮಾಜ ಗುರ್ತಿಸಿರುವ ನವೀನ ಅಡುಗೆಗಳು, ಫ್ಯಾಷನ್, ಉಡುಗೆ ತೊಡುಗೆ, ಆಭರಣ, ಸೌಂದರ್ಯ, ಶಾರೀರಿಕ ಆರೋಗ್ಯ ರಕ್ಷಣೆ, ಮಕ್ಕಳ ಲಾಲನೆ ಪಾಲನೆ ಇತ್ಯಾದಿಗಳ ಬಗ್ಗೆ ಬೇಕಾದಷ್ಟು ಮಾಹಿತಿ ಅಂರ್ತಜಾಲದಲ್ಲಿದ್ದರೂ ಭಾರತೀಯ ಸ್ತ್ರೀವಾದಿ ಮಾಹಿತಿ ಮೂಲಗಳು ಬಹಳ ಕಡಿಮೆ ಸಂಖ್ಯೆಯಲ್ಲಿರುವುದು ಚಿಂತಾಜನಕ ವಿಷಯವಾಗಿದೆ. ಅಲ್ಲದೆ ಪಾಶ್ಚಿಮಾತ್ಯ ಸರ್ಚ್ ಎಂಜಿನ್ನುಗಳಲ್ಲಿ ಉದಾಹರಣೆಗೆ ಯಾಹೂ, ಲೈಕೋಸ್, ಆಲ್ಟಾ ವಿಸ್ತಾ ಇತ್ಯಾದಿಗಳಲ್ಲಿ ಸ್ತ್ರೀವಾದ ಎಂದು ವರ್ಗೀಕರಿಸಿದ ಮಾಹಿತಿ ಮೂಲವೇ ಇದ್ದರೂ ಸಹ ಭಾರತೀಯ ಸರ್ಚ್ ಎಂಜಿನ್ನುಗಳಲ್ಲಿ ಸ್ತ್ರೀವಾದ ಎಂಬ ವರ್ಗೀಕರಿಸಿದ ಮಾಹಿತಿ ಇಲ್ಲದಿರುವುದು ಎದ್ದು ಕಾಣುವಂತಹ ಕೊರತೆಯಾಗಿದೆ.

ಇಂದಿನ ಮಾಹಿತಿ ಯುಗದಲ್ಲಿ ಸ್ತ್ರೀವಾದಿಗಳಾಗಲೀ, ಸ್ತ್ರೀಪರ ಕಾಳಜಿಗಳನ್ನುಳ್ಳವರಾಗಲೀ, ಮಾನವ ಹಕ್ಕುಗಳಿಗಾಗಿ ಹೋರಾಡುವವರಾಗಲೀ ಅಂತರ್‌ಜಾಲದ ಸಂವಹನ ಶಕ್ತಿಯನ್ನು ಹಾಗೂ ಅದು ಮುಕ್ತವಾಗಿ ತೆರೆದಿಟ್ಟಿರುವ ಅವಕಾಶಗಳನ್ನು ಅಲಕ್ಷಿಸುವಂತಿಲ್ಲ. ಈ ಹೊಸ ತಾಂತ್ರಿಕತೆಯ ಬಳಕೆಯಲ್ಲಿ ಎದುರಾಗುವ ಏನೇ ಸಮಸ್ಯೆಗಳಿದ್ದರೂ ಸಹ ಸ್ತ್ರೀಯರು ಸ್ತ್ರೀವಾದಿಗಳು ಸ್ತ್ರೀಪರ ಮಾನವೀಯ ಕಾಳಜಿಗಳುಳ್ಳವರೆಲ್ಲರೂ ಅಂತರ್‌ಜಾಲದಲ್ಲಿ ಪರಸ್ಪರ ಸಂಪರ್ಕವನ್ನು ಹಾಗೂ ಸಂಪರ್ಕಜಾಲಗಳನ್ನು ಏರ್ಪಡಿಸಿಕೊಳ್ಳುವುದು ಇಂದಿನ ಅಗತ್ಯವಾಗಿದೆ. ಹಾಗೆಯೇ ಸ್ತ್ರೀಪರ ಕಾಳಜಿಗಳನ್ನು ಮತ್ತು ಸ್ತ್ರೀವಾದವನ್ನು ಅಂತರ್‌ಜಾಲದಲ್ಲಿ ಹೆಚ್ಚು ಗೋಚರವಾಗುವಂತೆ ಮಾಡಬೇಕಾಗಿದೆ. ಇದರಿಂದ ಪ್ರಜಾಸತ್ತೆಯ ಹಾಗೂ ವಿಶ್ವದ ಎಲ್ಲಾ ಸಮುದಾಯಗಳ ಪ್ರಾತಿನಿಧಿಕ ಬೆಳವಣಿಗೆಗಾಗಿ ಸದುಪಯೋಗಪಡಿಸಿಕೊಳ್ಳಬಹುದಾದ ಪ್ರಯತ್ನದಲ್ಲಿ ಭಾಗಿಗಳಾಗಬಹುದಾಗಿದೆ. ಇಂದು ಅಂತರ್‌ಜಾಲದ ಗುಣಾತ್ಮಕ ಆಯಾಮಗಳನ್ನು ಎಲ್ಲರೂ ಗುರ್ತಿಸಿ, ಶಿಕ್ಷಣಕ್ಕಾಗಲೀ, ಸಂಶೋಧನೆಗಾಗಲೀ, ಮಾಹಿತಿಯ ಸಂವಹನಕ್ಕಾಗಲೀ, ಚಳುವಳಿಯನ್ನು ನಡೆಸುವುದಕ್ಕಾಗಲೀ, ಸ್ತ್ರೀಪರ ಕಾರ್ಯ ಚಟುವಟಿಕೆಗಳಿಗಾಗಲೀ ಅಂತರ್‌ಜಾಲವನ್ನು ಯಶಸ್ವಿಯಾಗಿ ಉಪಯೋಗಿಸಿಕೊಳ್ಳಬಹುದಾಗಿದೆ.

**ಕೆ. ಸರೋಜಾ**
ಸಹ ಪ್ರಾಧ್ಯಾಪಕರು, ಮಾನವ ವಿಕಾಸ ವಿಭಾಗ, ಗ್ರಾಮೀಣ ಗೃಹ ವಿಜ್ಞಾನ ಮಹಾವಿದ್ಯಾಲಯ
ಕೃಷಿ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೫

## ಮುದ್ರೆಯೊಳಗೆ ನಿದ್ರಿಸುವ ಗಾಂಧಿ !

ನಾನು ನನ್ನುಡುಗಿಗೆ ಕಾಣಿಕೆಯಾಗಿ ಪುಟ್ಟ
ಟೈಟಾನಿಕ್ ಹಡಗೊಂದ ಕೊಡಿಸಬೇಕೆಂದಾಗ
ನನ್ನ ಜೇಬಲ್ಲಿ ಹತ್ತರ ನೋಟೊಳಗಿನ ಗಾಂಧಿ ನಗುತ್ತಾನೆ !

ಗಾಂಧೀ... ನೀ ನಡೆಯುವಾಗ ಧೂಳು ಮೆತ್ತುವ
ಕಾಲುದಾರಿಗಳೆಲ್ಲಾ ಈಗ ಡಾಂಬರು ಹೊದಿಕೆಯ
ಟೈರುದಾರಿಗಳಾಗಿ, ಬೂಟಿನ ಸದ್ದಿಗೆ ಹೈ ಹೀಲ್ಡ ಚಪ್ಪಲಿಗೆ
ಟಿಕ್..ಟಿಕ್.. ಧ್ವನಿಯಾಗಿ ಅಪ್ಪಚ್ಚಿಯಾದ ಹೆಣದ
ರಕ್ತ ಹೀರುತ್ತಿವೆ !

ಈ ರಸ್ತೆಯ ಮಧ್ಯೆ ನಿರಂತರವಾಗಿ ನಿಂತ ನಿನ್ನ ಕಾಲುಗಳು
ಸೋತಿರಬೇಕು ! ನಿನಗೊಂದು ಕೂಡಲು ಕುರ್ಚಿ
ಕೊಡಿಸುವ ಕರುಣೆ ಇಲ್ಲಾರಿಗೂ ಇಲ್ಲ!
ಈ ಹೊಗೆ, ಧೂಳು, ಇಂಗಾಲವ ಹೀರಿ ಹೀರಿ ನಿನ್ನ
ನಿನ್ನ ಆರೋಗ್ಯ ಕೆಟ್ಟಿರಬೇಕು, ನಿನ್ನ ಪ್ರತಿಮೆಗಳೆಲ್ಲವನ್ನು
ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಕೊಡಿಸುವವರೂ ಇಲ್ಲ!
ಆದರೂ ನೀ ನಿನ್ನ ಕೆಲಸದಲ್ಲಿ ನಿರತವಾಗಿದ್ದೀಯ
ರಸ್ತೆಯ ಮಧ್ಯೆ ಟ್ರಾಫಿಕ್ ಪೋಲಿಸ್ !

ಮೋಸ, ಭ್ರಷ್ಟಾಚಾರ, ಹಿಂಸೆಗೆ ಭಾಷ್ಯ ಬರೆಯುವ
ನಿನ್ನ ಮುಖ ಮುದ್ರೆಯ ನೋಟುಗಳು !
ಕಛೇರಿಯೊಳಗಿನ ಕಮಟಾಂಡವ ಕಣ್ಣಾರೆಕಂಡು
ಕಣ್ಣೀರಿಡುವ ನಿನ್ನ ಫೋಟೋಗಳು !





ನೀನು ನೊಡಬಾರದೆಂದದ್ದನ್ನೆಲ್ಲಾ ನಿನ್ನ ಕಣ್ಣೆದುರಿಗೆ
ಚುಚ್ಚಿ-ಚುಚ್ಚಿ.... ತೋರಿಸಿ ಗಹಗಹಿಸಿ ನಗುವ
ನಾವುಗಳು
ಗೂಡ್ಸೆಯ ಗೂಡೊಳಗೆ ಕಾವು ಪಡೆಯುವ
ಮೊಟ್ಟೆಗಳು !

ನಿನ್ನ ಸತ್ಯಾಗ್ರಹದ ಬುನಾದಿಯ ಮೇಲೆ ಅಸತ್ಯದ
ಬಣ್ಣ-ಬಣ್ಣದ ರಂಗಿನ ಮನೆಗಳು,
ಅಹಿಂಸೆಯ ಹಾಲಿನ ಬಟ್ಟಲೊಳಗೆ ರಕ್ತ ಹೆಪ್ಪುಗಟ್ಟಿದೆ.
ಇಂಡಿಯಾದ ಇಂದ್ರಿಯಗಳ ನಿಗ್ರಹಿಸುವರಾರಿಲ್ಲ
ಒಂದನೇ ತರಗತಿಯ ಪಠ್ಯಪುಸ್ತಕದೊಳಗೆ
ಗಾಂಧಿ ತಾತನಾಗಿ ಮಕ್ಕಳೊಂದಿಗೆ ಆಟವಾಡುತ್ತಲೇ ಇರು
ಇತ್ತ ತಲೆ ಹಾಕಲೇ ಬೇಡ !

ಮುದ್ರೆಯೊಳಗೆ ನಿದ್ರಿಸುವ ಗಾಂಧಿಯ
ಎಲ್ಲೆಂದರಲ್ಲಿ ಗುದ್ದಿಗುದ್ದಿ ಎಬ್ಬಿಸಿಬಿಡುತ್ತಾರೆ !
ಗಲಿಬಿಲಿಗೊಂಡ ಗಾಂಧಿ ತನ್ನ ಚಾಳೀಸು ಮುಟ್ಟಿನೋಡಿ
ಒಡೆದಿಲ್ಲ ಎಂದು ನಿಟ್ಟುಸಿರುಬಿಟ್ಟು
ಮತ್ತೆ ಮುದ್ರೆಯೊಳಗೆ ನಿದ್ರೆಗೆ ಜಾರುತ್ತಾನೆ !

**ಜಿ. ಅರುಣ್ ಕುಮಾರ್**
ಜಾನಪದ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

# ಸಂಘ ಕಟ್ಟಿ ಹೃದಯ ಬಲಪಡಿಸಿಕೊಳ್ಳಿ

ಶೀರ್ಷಿಕೆಯನ್ನೋದಿ ಹುಬ್ಬೇರಿಸಿದಿರಾ? ತಬ್ಬಿಬ್ಬಾದಿರಾ? ಯಾವುದೋ ಕೆಲಸಕ್ಕೆ ಬಾರದ ಲೇಖನ ಎಂದು ಪುಟ ತಿರುಗಿಸುವ ಹವಣಿಕೆಯಲ್ಲಿದ್ದೀರಾ ? ನಿಮ್ಮಾಣೆ, ಈ ಲೇಖನ ಓದಿ ಮುಗಿಸದೆ ಮುಂದುವರಿಯದಿರಿ ! 'ಇವನೆಂತಹ ಲೇಖಕ ? ಇಂಥಾ ಲೇಖಕರೂ ಇದ್ದಾರೆಯೇ ಕನ್ನಡ ಸಾಹಿತ್ಯ ಲೋಕದಲ್ಲಿ'' ಎಂದು ಗೊಣಗಿಕೊಂಡಿರಾ ? ಓದುವ ಹವ್ಯಾಸವನ್ನೇ ಮರೆಯುತ್ತಿರುವ ಜನರನ್ನು ಓದುವಂತೆ ಮಾಡಲು ಇನ್ಯಾವ ತಂತ್ರ ಉಪಯೋಗಿಸಬಹುದು ನೀವೇ ಹೇಳಿ! ಏನಾದರಾಗಲಿ... ಲೇಖನ ಓದುವ ಮನಸ್ಸು ಮಾಡಿದ್ದಕ್ಕೆ ಧನ್ಯವಾದಗಳು ! ಹೀಗೆ ಬಲವಂತ ಮಾಡದಿದ್ದರೆ ನೂರಾರು ಛಾನಲ್ಲುಗಳನ್ನು ನಿರಂತರ ಬಿತ್ತರಿಸುವ ಈ ಟಿವಿ ಕಾಲದಲ್ಲಿ ಓದುವ ಮನಸ್ಸು ಯಾರಿಗೆ ತಾನೇ ಬಂದೀತು?

'ಸಂಘ ಕಟ್ಟಿರಿ, ಹೃದಯ ಬಲಪಡಿಸಿಕ್ಕೊಳ್ಳಿ' ಎಂಬ ಈ ಲೇಖನದ ಶೀರ್ಷಿಕೆ, ಹಣ ಕಸಿದು ಟೋಪಿ ಹಾಕುವ ಜಾಹೀರಾತಿನಂತೆ ನಿಮಗೆ ಕಂಡಿರಬಹುದು. 'ಹದಿನೈದೇ ದಿನಗಳಲ್ಲಿ ಬಳುಕುವ ಮೈಯನ್ನು ಪಡೆಯಿರಿ', 'ಎರಡೇ ದಿನಗಳಲ್ಲಿ ಹತ್ತು ಕೆಜಿ ತೂಕ ಕಡಿಮೆ ಮಾಡಿಕೊಳ್ಳಿ' ಮುಂತಾದ ಜಾಹೀರಾತಿನಂತೆ! ಕ್ಷಮಿಸಿ, ನನ್ನದು ಜಾಹೀರಾತಲ್ಲ. ನಿಮ್ಮಿಂದ ನಾನು ಯಾವುದೇ ರೀತಿಯ ಪ್ರತಿಫಲವನ್ನೂ ಅಪೇಕ್ಷಿಸುವುದಿಲ್ಲ (ಸಂಪಾದಕರನ್ನು ಹೊರತುಪಡಿಸಿ). ಹಾಗೆ ನಾನೇನಾದರೂ ಪ್ರತಿಫಲ ಅಪೇಕ್ಷಿಸಿದರೂ ನೀವದನ್ನು ಉಪೇಕ್ಷೆ ಮಾಡುವಿರೆಂಬುದೂ ನನಗೆ ಚೆನ್ನಾಗಿ ಗೊತ್ತು! ಈಗ ಆ ವಿಷಯ ಬೇಡ, ಪ್ರಸ್ತುತ ಲೇಖನದ ವಿಷಯಕ್ಕೆ ಬರೋಣ.

ನನ್ನ ಸ್ನೇಹಿತ ವಿಶ್ವನಿಗೆ ಕೇವಲ ನಲವತ್ತೈದಕ್ಕೆ ಹಾರ್ಟು ಕೈಕೊಟ್ಟಿತು! ಪುಣ್ಯವಶಾತ್ ಸಕಾಲದಲ್ಲಿ ವೈದ್ಯಕೀಯ ನೆರವು ಸಿಕ್ಕಿ ಬಚಾವಾದ ಎನ್ನಿ. ವಿಶ್ವನ ಹಾರ್ಟು ಸುಮಾರಾಗಿ ಚಾಲನೆಯಾಗಬೇಕಾದರೆ ಅವನು 'ಬೈಪಾಸು' ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡು ಬರಬೇಕಾಯಿತು. ವೈದ್ಯರು ಯಾವುದೇ ರೀತಿಯ ಮಾನಸಿಕ ಮತ್ತು ದೈಹಿಕವಾದ ಒತ್ತಡವಿರುವಂತಹ ಕೆಲಸವನ್ನು ಮಾಡಬೇಡಿ ಎಂದು ವಿಶ್ವನಿಗೆ ಹೇಳಿಬಿಟ್ಟರು. ವೈದ್ಯರ ಮಾತನ್ನು ತಳ್ಳಿಹಾಕುವಂತಿಲ್ಲ; ಹೇಳೀ-ಕೇಳೀ ಹಾರ್ಟಿಗೆ ಸಂಬಂಧಿಸಿದ ವಿಷಯ!

ನಾನೂ ವಿಶ್ವ ಒಟ್ಟಿಗೇ ಓದಿದವರು ಮತ್ತು ಒಂದೇ ಕಾರ್ಖಾನೆಯಲ್ಲಿ ಇಂಜಿನಿಯರ್ ಆಗಿ ಕೆಲಸ ಮಾಡುತ್ತಿದ್ದವರು. ದೈನಂದಿನ ಕಾರ್ಖಾನೆಯ ಕೆಲಸಗಳಲ್ಲಿ ಮಿತಿಮೀರಿದ ಮಾನಸಿಕ ಒತ್ತಡಕ್ಕೆ ಈಡಾಗಬೇಕಾದ ಸಂದರ್ಭಗಳು ಸರ್ವೇಸಾಮಾನ್ಯ. ಈ ಪರಿಸ್ಥಿತಿಯನ್ನು ಮನಗಂಡು, ಹಣಕ್ಕೆ ಕೊರತೆಯಿಲ್ಲದ ವಿಶ್ವ, ಆರೋಗ್ಯದ ನಿಮಿತ್ತ ಕೆಲಸಕ್ಕೆ ರಾಜೀನಾಮೆ ಇತ್ತು, ಹಾಯಾಗಿ ಮನೆಯಲ್ಲಿ ಕುಳಿತುಬಿಟ್ಟ.

ಎಡೆಬಿಡದೆ ಇಪ್ಪತ್ತು ವರ್ಷ ದಿನಕ್ಕೆ ಸರ್ವೇಸಾಮಾನ್ಯವಾಗಿ ಎಂಟರಿಂದ ಹತ್ತು ತಾಸು ಕಾರ್ಖಾನೆಯಲ್ಲಿ ಕಾಲ ಕಳೆಯುತ್ತಿದ್ದವನಿಗೆ ಒಮ್ಮೆಲೇ ದಂಡಿಯಾಗಿ ಸಮಯ ಸಿಕ್ಕರೆ ಏನಾಗಬಹುದು ಊಹಿಸಿ! ಹೆಂಡತಿಗೆ ಸಹಾಯ ಮಾಡಲು ಹೋಗಿ ಸಾಕಷ್ಟು ಅವಾಂತರಗಳನ್ನು ಮಾಡಿದನಂತೆ! ವಿಶ್ವನ ಮಡದಿ ವಿಶಾಲೂ ಸಾಕ್ಷಾತ್ ಚಂಡಿ ಅವತಾರವನ್ನೇ ಹಲವು ಸಲ ತಾಳಬೇಕಾಯಿತಂತೆ ! ಗೋಧಿ ಹಿಟ್ಟು ಕಲೆಸಲು ಹೋಗಿ ಮೈದಾ ಹಿಟ್ಟು ಕಲೆಸಿದನಂತೆ ! ಸಾರಿಗೆ ಎರಡೆರಡು ಸಲ ಉಪ್ಪು ಹಾಕಿದನಂತೆ ! ಅವನ ಮಡದಿಯ ದೂರಿನಂತೆ, ಇಂಥಾ ತಪ್ಪುಗಳ ಸಂಖ್ಯೆ ನೂರು ಮುಟ್ಟಿದ್ದವಂತೆ. ಕೃಷ್ಣ ಶಿಶುಪಾಲನನ್ನು ಸಹಿಸುವಂತೆ ನೂರು ತಪ್ಪುಗಳನ್ನು ಸಹಿಸಿ ನಂತರ ನನ್ನ ಬಳಿ ದೂರು ನೀಡಿದಳು. ಮಿಯಾ-ಬೀಬಿಗೆ ರಾಜಿ ಮಾಡಿಸಲು ಖಾಜಿಯಾಗಿ ನಾನು ಮಧ್ಯೆ ಪ್ರವೇಶಿಸಿದೆ. ವಿಶ್ವ, ಯಾವ ಕಾರಣಕ್ಕೂ ಅಡಿಗೆ ಮನೆಯನ್ನು ಪ್ರವೇಶಿಸಿ ದಾಂಧಲೆ ಎಬ್ಬಿಸಬಾರದೆಂದೂ, ಸಾಮಾನ್ಯವಾಗಿ ಎಲ್ಲ ಗಂಡಸರೂ ಹಚ್ಚಿಕೊಂಡಿರುವಂತಹ ಹವ್ಯಾಸಗಳನ್ನು ಹಚ್ಚಿಕೊಳ್ಳಬಹುದೆಂದೂ, ಅದಕ್ಕೆ ವಿಶಾಲೂ ಅಡ್ಡಿ ಮಾಡಬಾರದೆಂಬ ರಾಜಿ ಸೂತ್ರಕ್ಕೆ ಇಬ್ಬರನ್ನೂ ಒಪ್ಪಿಸಿ ಬಂದಿದ್ದೆ.

ವಾರ ಕಳೆಯುವುದರಲ್ಲಿ ಪರಿಸ್ಥಿತಿ ಸುಧಾರಿಸಬಹುದೆಂದು ತಿಳಿದಿದ್ದ ನನ್ನ ಊಹೆ ತಲೆಕೆಳಗಾಗಿತ್ತು... ಪರಿಸ್ಥಿತಿ ಇನ್ನೂ ಉಲ್ಬಣಗೊಂಡಿತ್ತು! ಸಾಮಾನ್ಯವಾಗಿ ಗಂಡಸರೆಲ್ಲ ಹಚ್ಚಿಕ್ಕೊಳ್ಳುವಂತ ಇಸ್ಪೀಟು, ಕುದುರೆ ಜೂಜು, ಕ್ಲಬ್ಬು, ಪಬ್ಬು ಮುಂತಾದ ಯಾವುದೇ ಹವ್ಯಾಸವನ್ನು ಹೊಸದಾಗಿಯಾದರೂ ಶುರು ಮಾಡಿಕೊಳ್ಳುವ ಮುಕ್ತ ಅವಕಾಶವನ್ನು ಅವನ ಹೆಂಡತಿ ನೀಡಿದ್ದರೂ ಸಹ, ಅದನ್ನು ಉಪಯೋಗಿಸಿಕೊಳ್ಳುವುದರಲ್ಲಿ ನನ್ನ ಮಿತ್ರ ವಿಶ್ವ ಅಸಮರ್ಥನಾಗಿದ್ದ. ಇದರಿಂದ ಅವನ ಮನೆಯಲ್ಲಿ ಪರಿಸ್ಥಿತಿ ಇನ್ನೂ ಹದಗೆಟ್ಟಿತು!

◆ ಎಸ್. ಜಿ. ಶಿವಶಂಕರ್



ಈ ಸಂದರ್ಭದಲ್ಲಿಯೇ ವಿಶ್ವನ ಹವ್ಯಾಸಗಳ ಬಗೆಗೆ ಒಂದೆರಡು ಮಾತುಗಳನ್ನು ಹೇಳುವುದು ಉಚಿತವಾದೀತು. ವಿಶ್ವನಿಗೆ ಯಾವ ರೀತಿಯ ಹವ್ಯಾಸಗಳೂ ಇರಲಿಲ್ಲ. ಶಾಲಾ-ಕಾಲೇಜುಗಳ ಪಠ್ಯ ಪುಸ್ತಕಗಳನ್ನು ಬಿಟ್ಟು ಇನ್ಯಾವ ಪುಸ್ತಕವನ್ನೂ ಓದಿರಲಿಲ್ಲ. ಸಾಹಿತ್ಯಕ್ಕೂ ಅವನಿಗೂ ಎಣ್ಣೆ-ಸೀಗೇಕಾಯಿ ಸಂಬಂಧ! ಟಿ. ವಿ. ನೋಡುವುದು ಸಹ ಅಷ್ಟಕ್ಕಷ್ಟೆ ! ಉಸಿರಾಡಲು ಸಹ ಪುರುಸೊತ್ತಿಲ್ಲದಂತೆ ನೂರಾರು ಛಾನಲ್ಲುಗಳಿಂದ ಅಂಕೆಯಿಲ್ಲದೆ ಮೂಡಿಬರುವ ಟಿವಿ ಕಾರ್ಯಕ್ರಮಗಳನ್ನು ನೋಡುವುದು ಸಹ ನನ್ನ ಪ್ರಿಯ ಮಿತ್ರನ ಹವ್ಯಾಸವಾಗಿರಲಿಲ್ಲ. ಸಂಗೀತ, ಸಿನೀಮಾ ಎಂದರೂ ಮುಖ ಸಿಂಡರಿಸಿಕೊಳ್ಳುವ ಮನುಷ್ಯ ವಿಶ್ವ.

ಬೈಪಾಸ್ ಮಾಡಿಸಿಕೊಂಡಿದ್ದರಿಂದ ಶರೀರಕ್ಕೆ ದಣಿವು ನೀಡುವ ಯಾವುದೇ ಆಟವನ್ನು ಸಹ ಆಡುವಂತೆ ಇರಲಿಲ್ಲ. ಐವತ್ತರ ಗಡಿಯಲ್ಲಿರುವವರು ಇನ್ನೆಂತಾ ಆಟ ಆಡಲು ಸಾಧ್ಯ ? ಇಸ್ಪೀಟಿನಂತಹ ಚಟವನ್ನು ಸಹ ಅಂಟಿಸಿಕೊಂಡಿರದ ಮನುಷ್ಯ ವಿಶ್ವ! ವೈದ್ಯರ ಹೇಳಿಕೆಯ ಮೇರೆಗೆ, ಬೆಳಿಗ್ಗೆ ಒಂದು ಗಂಟೆ ಮತ್ತು ಸಂಜೆ ಒಂದು ಗಂಟೆಯ ವಾಕಿಂಗ್ ಬಿಟ್ಟರೆ ಇಡೀ ದಿನ ಮನೆ ಮಂದಿಗೆಲ್ಲಾ ವಿಶ್ವ ದುಃಸ್ವಪ್ನವಾಗಿಬಿಟ್ಟ! ಮನೆಯವರೆಲ್ಲರಿಗೂ ಅವರವರ ಕೆಲಸಗಳಲ್ಲಿ ಸಹಾಯ ಮಾಡಲು ಹೋಗಿ, ಕೆಲಸ ಕೆಟ್ಟಾಗ ಅವರಿಂದ ಬೈಸಿಕೊಂಡು, ಮುಖ ಗಂಟಿಕ್ಕಿಕೊಂಡು ಕೂರುತ್ತಿದ್ದನಂತೆ. ಕೊನೆಗೊಮ್ಮೆ ವಿಶ್ವನ ವರ್ತನೆಯಿಂದ ಬೆಂದು ಬಸವಳಿದ ಅವನ ಮನೆಯವರು ನನಗೆ ಗಂಟುಬಿದ್ದರು ! ಹೇಗಾದರೂ ವಿಶ್ವನನ್ನು ಯಾವುದಾದರೂ ಹವ್ಯಾಸದಲ್ಲಿ ತೊಡಗಿಸಿಕೊಳ್ಳುವಂತೆ ಮಾಡಬೇಕೆಂಬ ಕೋರಿಕೆಯೊಂದಿಗೆ ! 'ಎಲ್ಲರ ಮನೆಯ ದೋಸೆ ತೂತಾದರೆ, ನಮ್ಮ ಮನೆಯ ಕಾವಲಿಯೇ ತೂತು' ಎಂಬ ಗಾದೆ ನನಗೆ ಅಕ್ಷರಶಃ ಅನ್ವಯವಾಗುತ್ತದೆ ! ಉದರ ನಿಮಿತ್ತ ಕಾರ್ಖಾನೆಯಲ್ಲಿ ಕನಿಷ್ಠ ಎಂಟು ತಾಸು ದುಡಿತ, ನಂತರ ಹೊರಗೆ ಮೂರ್ನಾಲ್ಕು ಸಂಘಗಳನ್ನು ಕಟ್ಟಿಕೊಂಡು ಒದ್ದಾಡುತ್ತಿರುವವನು ನಾನು ! ನನ್ನವಳಂತೂ 'ಇದ್ಯಾವ ಕರ್ಮ ನಿಮಗೆ?' ಎಂದು ಲೆಕ್ಕವಿಲ್ಲದಷ್ಟು ಸಲ ಹೀಯಾಳಿಸಿ ಬೇಸತ್ತಿದ್ದಾಳೆ. ಇಂಥಾ ಪರಿಸ್ಥಿತಿಯಲ್ಲಿ ನಾನಿರುವಾಗ, ಇವನ ಜೊತೆ ಕುಳಿತು ಹರಟೆ ಹೊಡೆಯಲು, ಇಲ್ಲಾ ನಾನು ಹೋದಲ್ಲೆಲ್ಲ ಇವನನ್ನು ಎಳೆದೊಯ್ಯಬೇಕು ಎಂದರೆ ಸಾಧ್ಯವೆ ? ಇದಕ್ಕೆ ಪರಿಹಾರವೆಂದು ನನಗೆ ಪರಿಚಯವಿದ್ದ ಒಬ್ಬ ಮನಃಶಾಸ್ತ್ರಜ್ಞರ ಬಳಿಗೆ ಎಳೆದುಕೊಂಡು ಹೋದೆ. ಎಳೆದುಕೊಂಡು ಹೋದೆ ಎಂದು ಏಕೆ ಹೇಳಿದೆನೆಂದರೆ ಸುಲಭದಲ್ಲಿ ಬರಲು ವಿಶ್ವ ಒಪ್ಪಿರಲಿಲ್ಲ. ಕೊನೆಗೆ ಹೋಗುತ್ತಿರುವುದು 'ಹೃದಯ ತಜ್ಞರ ಬಳಿಗೆ' ಎಂದು ಸುಳ್ಳು ಹೇಳಿದ್ದೆ!

ವೈದ್ಯರು ವಿಶ್ವನ ಸಮಸ್ಯೆಯನ್ನು ಸಮಾಧಾನದಿಂದ ಕೇಳಿದರು. ಪ್ರತಿ ಸಂದರ್ಶನಕ್ಕೆ ಅವರ ಫೀಜು ಇನ್ನೂರೈವತ್ತು ರೂಪಾಯಿಗಳಷ್ಟೆ ! ನನ್ನ ಸ್ನೇಹಿತನ ಸಮಸ್ಯೆಗಳನ್ನು ನಾನು ಹೇಳುತ್ತಿದ್ದಾಗ ಅವರು ವಿಶ್ವನ ಕಡೆಗೆ ಆಗಾಗ ನೋಡುತ್ತಿದ್ದರು. ಅವರು ನೋಡುತ್ತಿದ್ದ ರೀತಿ ವಿಶ್ವನಿಗೆ ಇಷ್ಟವಾಗಲಿಲ್ಲ ! ಅದಂತೂ ಅವನ ಮುಖದಲ್ಲಿ ಸ್ಪಷ್ಟವಾಗಿಯೇ ಕಾಣುತ್ತಿತ್ತು. ವೈದ್ಯರಿಗೆ ನನ್ನ ಪರಿಚಯ ಸಾಕಷ್ಟಿತ್ತು. ನಮ್ಮ ಸಂಘವೊಂದರಲ್ಲಿ ಅವರನ್ನು ಮನಸ್ಸಿಗೆ ಸಂಬಂಧಿಸಿದ ಖಾಯಿಲೆಗಳ ವಿಷಯವಾಗಿ ಮಾತನಾಡಲು ಒಮ್ಮೆ ಆಹ್ವಾನಿಸಿದ್ದೆ. ನನ್ನ ಮತ್ತು ವಿಶ್ವನ ಮಾತುಗಳನ್ನು ಕೇಳಿದ ನಂತರ ಅವರು ವಿಶ್ವನನ್ನು ನೋಡುತ್ತಾ ಗಂಭೀರವಾಗಿ ಹೇಳಿದರು :

'ನೀವೊಂದು ಸಂಘವನ್ನು ಏಕೆ ಕಟ್ಟಬಾರದು ?'

ಅವರ ಮಾತಿನಿಂದ ನನಗೆ ಮೈಯೆಲ್ಲಾ ಉರಿಯಿತು ! ಸಂಘ ಕಟ್ಟುವುದು ಕೆಲಸವಿಲ್ಲದವರು ಮಾಡುವ ಅರ್ಥವಿಲ್ಲದ ಕ್ರಿಯೆ ಎಂಬಂತೆ ಹೇಳಿದ್ದರು !

'ಇದೇನು ಡಾಕ್ಟರೆ ? ಕಾಯಿಲೆಗೆ ಔಷಧಿ ಕೊಡಿ ಅಂದರೆ... ಸಂಘ ಕಟ್ಟಿ ಅಂತ ಹೇಳ್ತೀರಲ್ಲ?' ಅನಿಷ್ಟದ ಸುದ್ದಿ ಕೇಳಿದಂತೆ ವಿಶ್ವ ಮುಖ ಸಿಂಡರಿಸಿಕೊಂಡು ಹೇಳಿದ.

'ಬರೀ ಘನ ರೂಪದಲ್ಲಿ ಕೊಡೋದು ಮಾತ್ರ ಔಷಧಿ ಅಂತ ತಿಳಿದಿದ್ದೀರೇನು? ಸಲಹೆ ಮೂಲಕಾನೂ ಔಷಧಿಯನ್ನು ಕೊಡಬಹುದು.'

'ಸ್ವಲ್ಪ ಬಿಡಿಸಿ ಹೇಳಿದ್ರೆ ಒಳ್ಳೇದು !'

ಡಾಕ್ಟರರನ್ನು ಅಣಕಿಸುವಂತೆ ಹೇಳಿದ ನನ್ನ ಮಿತ್ರ.

'ನಿಮ್ಮ ಸ್ನೇಹಿತರನ್ನು ನೋಡಿ.'

ಯಾವುದೋ ದೀರ್ಘ ಮಾತಿಗೆ ಪೀಠಿಕೆ ಹಾಕುವಂತೆ ಪ್ರಾರಂಭಿಸಿದ್ದರು ಮನಃಶಾಸ್ತ್ರಜ್ಞರು.

'ಅವನನ್ನೇನು ಹೊಸದಾಗಿ ನೋಡೋದು ? ಚಿಕ್ಕಂದಿನಿಂದಾನೂ ನೋಡ್ತಾನೇನೆ ಇದ್ದೀನಿ. ಹಾಗೇ ನರಪೇತಲನ ಹಾಗೆ ಸಾಯ್ತಾ ಇದ್ದಾನೆ.'

ವಿಶ್ವನ ಮಾತಿನಲ್ಲಿ ಅಸಡ್ಡೆಯಿತ್ತು ; ತಿರಸ್ಕಾರವಿತ್ತು !

'ನಾನು ಹೇಳಿದ್ದು ಬೇರೆ ಅರ್ಥದಲ್ಲಿ. ಅವರು ಹತ್ತಾರು ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ಜೇನು ನೊಣದಂತೆ ಬಿಸಿಯಾಗಿದ್ದಾರಲ್ಲವಾ ? ಸದಾ ಯಾವುದಾದರೊಂದು ಕೆಲಸವನ್ನು ಹಚ್ಚಿಕೊಂಡು ಅಲೀತಾ ಇರ್ತಾರಲ್ಲವಾ ?'

'ಬರೀ ಅಲೆಯೋದೇನು ? ಹೊತ್ತುಹೊತ್ತಿಗೆ ಹೊಟ್ಟೆಗೆ ತಿನ್ನದೆ ಸಾಯ್ತಾನೆ !'

'ಸರಿಯಾಗಿ ಹೇಳಿದ್ರಿ. ಸದಾ ಚಟುವಟಿಕೆಯಿಂದಿರೋ ಅಂಥಾವರಿಗೆ ಆರೋಗ್ಯ ಚೆನ್ನಾಗಿರುತ್ತೆ. ನೀವು ಇವರ ಸಂಘಗಳಿಗೆ ಸೇರ್ಕೊಂಡರೆ, ನಿಮ್ಮ ಸಮಸ್ಯೆಗಳು ತಂತಾನೇ ಬಗೆಹರಿಯುತ್ತವೆ. ಇವರ ಧ್ಯಾನ ಕೇಂದ್ರಕ್ಕೆ ಸೇರ್ಕೊಂಡರೆ ನಿಮ್ಮ ಬಿಪಿ ತಂತಾನೇ ಇಳಿಯುತ್ತೆ. ಇವರ ವಾಕರ್ಸ್ ಕ್ಲಬ್ಬಿಗೆ ಸೇರಿದ್ರೆ ಹೃದಯ ಬಲವಾಗುತ್ತೆ. ಇನ್ನು ಇವರು ನಡೆಸ್ತಿರೋ ಸ್ವಸ್ಥ ಜೀವನ ಸಂಘಕ್ಕೆ ಸೇರಿದರೆ ಮಾನಸಿಕ ಆರೋಗ್ಯ ಉತ್ತಮವಾಗುತ್ತೆ.'

'ಡಾಕ್ಟರೆ, ನಿಮ್ಮದ್ಯಾಕೋ ಅತಿಯಾಯ್ತು. ಹಗಲು-ರಾತ್ರಿ ಅನ್ನದೆ ಸಂಘ-ಸಂಸ್ಥೆ ಅಂತ ಅಲೀತಿರೋ ಇವನನ್ನ ಸುಧಾರಿಸಬೇಕೂಂತ ಇವನ ಮನೆಯವರು ಮತ್ತು ನನ್ನಂತ ಸ್ನೇಹಿತರು ಅದೆಷ್ಟು ಒದ್ದಾಡ್ತಿದ್ದೀವಿ ಗೊತ್ತೆ ? ಸಮಯಕ್ಕೆ ಸರಿಯಾಗಿ ಮನೆಗೆ ಹೋಗೋದಿಲ್ಲ! ಮನೆಯವರ ಬೇಕು-ಬೇಡಗಳನ್ನ ಮನಸ್ಸಿಗೆ ಹಾಕ್ಕೊಳ್ಳೊಲ್ಲ! ಮನೆಗೆ ಕಾಳು-ಕಡ್ಡಿ ತಂದುಹಾಕೋದಿಲ್ಲ! ಇವನ ವಿಷಯ ನಿಮಗೆ ಸರಿಯಾಗಿ ತಿಳೀದು !'

ನನ್ನ ಮಿತ್ರ ಕೊಂಚ ಖಾರವಾಗಿಯೇ ನುಡಿದ.

'ಇರಬಹುದು, ನೀವು ಹೇಳೋದೆಲ್ಲಾ ನಿಜ ಇರಬಹುದು. ಆದರೆ, ಇದು ಆರೋಗ್ಯವಂತ ಮನುಷ್ಯನ ಲಕ್ಷಣಗಳು ! ನಾನು ನಿಮ್ಮ ಹತ್ತಿರ ಹೆಚ್ಚು ವಾದ ಮಾಡೋದಿಲ್ಲ. ಆಚೆ ಇನ್ನೂ ಇಬ್ಬರು ಪೇಷಂಟುಗಳು ಕಾದಿದ್ದಾರೆ. ನಿಮಗೆ ಚೆನ್ನಾಗಿ ಬದುಕಬೇಕು, ಹೆಚ್ಚು ಕಾಲ ಬದುಕಬೇಕು, ಹೃದಯವನ್ನು ಬಲಪಡಿಸಿಕೊಳ್ಳಬೇಕು ಅನ್ನೋ ಹಾಗಿದ್ರೆ, ನಾನು ಹೇಳಿದ ಹಾಗೆ ಮೈತುಂಬಾ ಕೆಲಸಗಳನ್ನು ಹಚ್ಚಿಕೊಳ್ಳಿ.

## ಕೆಸರಿನ ಕೊಳದಿಂದ

ಮನದ ಮೌನ ಪುತ್ಥಳಿಗೆ
ಪದದ ಪತ್ತಲವುಡಿಸಿ
ಕತ್ತಲಿನ ಕೊರಡೊಳಗೆ
ಕವಿತೆ ಕೊನರಿತು; ಕೆಸರಿನ
ಕೊಳದಿಂದ ಕಮಲವರಳಿತು.
ದ್ವಂದ್ವಗಳ ಒಡಲಿಂದ
ಕಡಲಾದ ಪದಗಳಿಗೆ ದಡವಿಲ್ಲ
ಬೆಸೆದ ಭಾವಗಳೆಲ್ಲ
ಕೊರಲು ಚಿಗುರಿದ ತೆರದಿ



ಹಸಿರಾಯಿತು; ಹೂ ದಳವೇ
ಪದವಾಗಿ ಎದೆಯ ಕನಸುಗಳೆಲ್ಲ
ಉಸಿರಾಯಿತು.
ಶೂನ್ಯದಾ ಮಡಿಲಲ್ಲಿ ಬೆಳಕಾಯಿತು
ಕಣ್ಣನಾಲಯ ಮೇಲೆ ಹೊಳಪಾಡಿತು
ಬಚ್ಚಿಟ್ಟ ಬರಡೆಲ್ಲ
ಪುಟ್ಟ ಆಸೆಯ ಹೊತ್ತು ಬದುಕಾಯಿತು.
ಬಯಲು ದಾರಿಯ ನಡುವೆ
ನೆಲನೆಲವೆಲ್ಲ ಮರಮರವಾಗಿ
ಮುಗಿಲೇರಿತು
ಮುಗಿಲ ಮೌನದ ಆಚೆ
ನನ್ನ ಭಾವದ ಭಾಷೆ
ತಾರೆಗಳ ತುಟಿಯಲ್ಲಿ ನಗುವಾಯಿತು !

ಗಣೇಶ ಹೊಸ್ಮನೆ
ಜಾನ್ಮನೆ-೫೮೧ ೩೧೫, ಶಿರಸಿ (ಉತ್ತರ ಕನ್ನಡ)

ಮನಸ್ಸಿಗೆ ಸಂತೋಷ, ಧನ್ಯತೆಯನ್ನು ನೀಡೋ ಅಂಥ ಕೆಲಸಗಳನ್ನ ಮಾಡಿ, ಬೇಡಾಂದ್ರೆ ಬಿಡಿ. ಆಯ್ಕೆ ನಿಮ್ಮದು. ನೀವಿನ್ನು ಹೋಗಬಹುದು. ನಿಮ್ಮ ಫೀಸಿಗೆ ರಶೀತಿ ಬೇಕಾದರೆ ಆಚೆ ರಿಸೆಪ್ಷನ್ನಿನಲ್ಲಿ ಪಡೆಯಿರಿ.'

ತಾವು ತೆಗೆದುಕೊಳ್ಳುವ ಕನ್ಸಲ್ಟೇಶನ್ ಫೀಸಿಗೆ ತಕ್ಕಷ್ಟು ಸಮಯ ಮಾತಾಡಿದ ನಂತರ ಮುಲಾಜಿಲ್ಲದೆ ಹೇಳಿದರು.

ವಾಪಸ್ಸು ಬರುವಾಗ ದಾರಿಯುದ್ದಕ್ಕೂ ನನ್ನ ಸ್ನೇಹಿತ, ವಾಚಾಮಗೋಚರವಾಗಿ ನನ್ನನ್ನೂ ಮತ್ತು ವೈದ್ಯರನ್ನೂ ಬೈಯುತ್ತಲೇ ಇದ್ದ. ನಾನು ನಿರ್ಲಿಪ್ತನಂತೆ ಅವನ ಬೈಗುಳಕ್ಕೆ ಮುಕ್ತ ಅವಕಾಶವನ್ನು ಒದಗಿಸಿಕೊಟ್ಟೆ.

ಮತ್ತೊಂದು ವಾರ ನನ್ನ ಪ್ರಿಯ ಮಿತ್ರ ವಿಶ್ವನನ್ನು ಭೇಟಿ ಮಾಡಲು ನನಗೆ ಧೈರ್ಯವಾಗಲಿಲ್ಲ. ವೈದ್ಯರ ಸಲಹೆಯನ್ನು ಅವನು ಸಾರಾಸಗಟಾಗಿ ತಿರಸ್ಕರಿಸಿರುವಂತೆ ತೋರಿತು. ಅವನಿಗೆ ಸೂಕ್ತವಾಗಿರುವಂಥ ಚಟುವಟಿಕೆ ಯಾವುದೆಂದು ಒಂದು ದಿನ ಯೋಚಿಸುತ್ತಿದ್ದಾಗಲೇ ದೂರವಾಣಿಯಲ್ಲಿ ವಿಶ್ವನ ದನಿ! 'ತುಂಬಾ ಮುಖ್ಯವಾದ ವಿಷಯ ಮಾತನಾಡ ಬೇಕಾಗಿದೆ.... ಸಂಜೆ ಮನೆಗೆ ಬರ್ತೀಯಾ ? ಇಲ್ಲಾ ನಾನೇ ಬರಲೋ ?' ಎಂದು ಕೇಳಿದ. 'ಹೇಗಾದರೂ ಸರಿ ಮಹರಾಯ' ಎಂದಿದ್ದಕ್ಕೆ, 'ಸರಿ, ನೀನೇ ಬಾ.... ಮನೇಲಿ ಕಾಯುತಿರ್ತೀನಿ' ಎಂಬ ಆದೇಶವನ್ನು ನೀಡಿದ ವಿಶ್ವ.

ಸಂಜೆ ಏಳಕ್ಕೆ ವಿಶ್ವನ ಮನೆಯಲ್ಲಿ ಹಾಜರಾದೆ. ಊಟ-ತಿಂಡಿಯ ವಿಷಯದಲ್ಲಿ ನನ್ನ ಗೆಳೆಯ ತುಂಬಾ ಶಿಸ್ತಿನ ಸಿಪಾಯಿ. ಮೈಸೂರು ಪಾಕು ಮತ್ತು ಕರಿದ ಗರಿಗರಿ ಅವಲಕ್ಕಿ ತಟ್ಟೆಯ ಮುಂದೆ ನಮ್ಮ ಮಾತು-ಕತೆ ನಡೆಯಿತು.

'ಆ ಸೊಟ್ಟ ಮೂತಿಯ ಡಾಕ್ಟರು ಮತ್ತು ಅಪ್ರಯೋಜಕನಾದ ನಿನ್ನ ಸಲಹೆಯಂತೆ, ನಾನು ಎರಡು ಸಂಘಗಳನ್ನು ಪ್ರಾರಂಭಿಸೋಣ ಎಂದಿರುವೆ.'

ಮನಸ್ಸಿಲ್ಲದ ಮನಸ್ಸಿನಿಂದ ಅವನು ನುಡಿದಂತಿತ್ತು; 'ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಎಂಬ ಗಾದೆಯಂತೆ!

'ಸಂತೋಷ. ಸ್ವಲ್ಪ ವಿವರವಾಗಿ ಹೇಳು.'

ಶುದ್ಧ ತುಪ್ಪದಲ್ಲಿ ಮಾಡಿದ ಮೈಸೂರು ಪಾಕನ್ನು ನಾನು ಮಾತ್ರ ಸವಿಯುತ್ತಾ ಕೇಳಿದೆ. ರಕ್ತದಲ್ಲಿ ಕೊಲೆಸ್ಟ್ರಾಲ್ ಹೆಚ್ಚುವುದೆಂಬ ಕಾರಣಕ್ಕೆ ವಿಶ್ವ ತುಪ್ಪ ಎಣ್ಣೆಯಲ್ಲಿ ತಯಾರಿಸಿದ ಆಹಾರ ತಿನ್ನುವಂತಿರಲಿಲ್ಲ. ಅವನು ಸಲಾಡ್ ತಿನ್ನುತ್ತಿದ್ದ.

'ಮೊದಲನೆಯ ಸಂಘದ ಹೆಸರು, ಹುಚ್ಚರ ಕಲ್ಯಾಣ ಸಂಘ!'

ಮಿತ್ರನ ಮಾತಿಗೆ, ಬಾಯಲ್ಲಿ ಬೆಣ್ಣೆಯಂತೆ ಕರಗುತ್ತಿದ್ದ ಮೈಸೂರು ಪಾಕು ಗಂಟಲಲ್ಲಿ ಅಡ್ಡ ಕೂತಿತ್ತು! ಗಂಟಲಲ್ಲಿ ಗೊರಗೊರ ಶಬ್ದ ಮೂಡಿತು!

'ಇದೆಂಥಾ ಸಂಘವೋ? ಇದರ ಧ್ಯೇಯೋದ್ದೇಶ ಗಳೇನು ?' ಅನುಮಾನಿಸುತ್ತಾ ಕೇಳಿದೆ.

'ಸಂಘ-ಸಂಸ್ಥೆಗಳನ್ನು ಹಚ್ಚಿಕೊಂಡಿರೋ ನಿನ್ನಂಥವರು, ಕೀರ್ತಿಶನಿಯ ಬೆನ್ನು ಹತ್ತಿದ ಸಮಾಜ ಸೇವಕರು ಮುಂತಾದ ವರನ್ನು ಗುರುತಿಸಿ ಅವರನ್ನು ಸರಿ ದಾರಿಗೆ ಹಚ್ಚುವುದು.'

'ಸರಿ, ನಿನ್ನ ಎರಡನೆಯ ಸಂಘ ?'

'ಸ್ವ.ನಿ.ಘೋ.ಗ. ಸಂಘ !'

'ಇದೇನೋ ವಿಚಿತ್ರ ಹೆಸರು ?'

'ಇದು ಶಾರ್ಟ್ ಫಾರಮ್ಮು. ಪೂರ್ತಿ ಹೆಸರು : ಸ್ವಯಂ ನಿವೃತ್ತಿ ಘೋಷಿಸಿಕೊಂಡು ಮನೆಯಲ್ಲಿ ಕುಳಿತಿರುವ ಗಂಡಸರ ಸಂಘ' ಎಂದು ವಿವರಣೆ ಬಂತು!

'ಧ್ಯೇಯೋದ್ದೇಶಗಳೇನು ?'

'ಸ್ವಯಂ ನಿವೃತ್ತಿ ತೆಗೆದುಕೊಂಡಿರುವ ಗಂಡಸರನ್ನು ಸಂಘಟಿಸಿ, ಅವರ ಸಮಸ್ಯೆಗಳಿಗೆ ಸ್ಪಂದಿಸಿ, ಅವರ ಮಾನಸಿಕ ಮತ್ತು ದೈಹಿಕ ಆರೋಗ್ಯ ವರ್ಧಿಸುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.'

ನನ್ನ ಮಿತ್ರನಾಗಲೇ ಸಂಘ-ಸಂಸ್ಥೆಗಳ ಭಾಷೆಯಲ್ಲಿ ಮಾತಾಡುತ್ತಿದ್ದ.

'ನಿನ್ನ ಎರಡನೆಯ ಸಂಘ ಚೆನ್ನಾಗಿದೆ.'

ನಿಷ್ಪಕ್ಷಪಾತದಿಂದ ಹೇಳಿದೆ.

'ನಿನ್ನ ಹೊಗಳಿಕೆ ಬೇಕಾಗಿಲ್ಲ. ಮತ್ತೆ, ನಿನ್ನಂಥವರಿಗೆ ಈ ಸಂಘದಲ್ಲಿ ಪ್ರವೇಶವಿಲ್ಲ.'

'ನಾನು ಬರೋದೂ ಇಲ್ಲ ಮಹರಾಯ! ನನ್ನವೇ ನನಗೆ ಸಾಕಷ್ಟಿವೆ! ವಿಷ್ ಯೂ ಆಲ್ ದಿ ಬೆಸ್ಟ್! ನಿನ್ನ ಎರಡೂ ಸಂಘಗಳಿಗೂ ಯಾವ ರೀತಿಯ ಸಹಾಯ ಬೇಕಾದ್ರೂ ಮಾಡ್ತೀನಿ.'

ಮಂತ್ರಿಗಳೋಪಾದಿಯಲ್ಲಿ ಆಶ್ವಾಸನೆ ಕೊಟ್ಟೆ!

'ಮೊದಲನೆಯ ಸಂಘ ಗುರುತಿಸೋ ಹುಚ್ಚರಲ್ಲಿ ನೀನೇ ಮೊದಲನೆಯವನು. ಇನ್ನು, ಎರಡನೆಯ ಸಂಘಕ್ಕೆ ನಿನ್ನ ಅವಶ್ಯಕತೆ ಇಲ್ಲ.'

ನನ್ನ ಮೇಲೆ ಸೇಡು ತೀರಿಸಿಕೊಳ್ಳುವವನಂತೆ ಹೇಳಿದ.

'ಆಗಲಿ ಮಹರಾಯ! ನನ್ನದೇನೂ ಅಭ್ಯಂತರವಿಲ್ಲ. ಇವತ್ತೇನು ಇಷ್ಟೊಂದು ಖಾರವಾಗಿದ್ದೀಯಲ್ಲ? ಏನು ಕಾರಣ ?'

ಹೌದು, ನನ್ನ ಮಿತ್ರನ ಮಾತಿನಲ್ಲಿ ಕೋಪ ಎದ್ದು ಕುಣಿಯುತ್ತಿತ್ತು! ನನ್ನ ಅನುಮಾನ ಪರಿಹಾರವಾಗ ಬೇಕಿತ್ತು! ಇವನ ಕೋಪಕ್ಕೇನು ಕಾರಣ ?

'ಅದಕ್ಕೆ ಉತ್ತರ ನನ್ನ ಹತ್ತಿರ ಇದೆ.' ಮಿತ್ರನ ಮಡದಿ ವಿಶಾಲೂ, ಘಮಘಮಿಸುವ ಫಿಲ್ಟರ್ ಕಾಫಿಯ ಪರಿಮಳ ವನ್ನು ರೂಮಿನಲ್ಲಿ ಹರಡುತ್ತಾ ಬಂದಳು! 'ಇವರಿಷ್ಟೊಂದು ಗರಂ ಆಗಿರೋದಕ್ಕೆ ಕಾರಣ ಇದೆ! ಇವರ ಎರಡನೆಯ ಸಂಘ ಇದೆಯಲ್ಲ? ಅದಕ್ಕೆ ಪರ್ಯಾಯವಾಗಿ ನಾನು, ಸ್ವಯಂ ನಿವೃತ್ತಿ ಘೋಷಿಸಿಕೊಂಡ ಗಂಡಸರ ಮಡದಿಯರ ಸಂಘ ಪ್ರಾರಂಭಿಸುವ ಪ್ರಸ್ತಾಪ ಮಾಡಿದ್ದೇನೆ. ಅದಕ್ಕೇ ಇವರಿಗೆ ಕೋಪ.'

ಮಿತ್ರನ ಮಡದಿಯ ಮಾತುಗಳಿಂದ ನನ್ನ ಮನಸ್ಸಿನಲ್ಲಿ ಮೂಡಿದ್ದ ಅನುಮಾನದ ಕತ್ತಲು ಕಳೆದಿತ್ತು!

ಅದಾದ ಒಂದೇ ವಾರಕ್ಕೆ, ಮಿತ್ರನ ಮಡದಿ ಪ್ರಸ್ತಾಪಿಸಿದ್ದ ಸಂಘ ವಿಧ್ಯುಕ್ತವಾಗಿ ಪ್ರಾರಂಭವಾಯಿತು! ಆಹ್ವಾನ ಬಂದಿತ್ತು ಹೋಗಿದ್ದೆ. ಅಲ್ಲಿ ನನ್ನ ಮಿತ್ರ ಕಂಡಿರಲಿಲ್ಲ!

ಮುಂದೆ ಐದಾರು ತಿಂಗಳುಗಳಲ್ಲಿ ಆ ಸಂಘ ಚೆನ್ನಾಗಿ ಕೆಲಸ ಮಾಡಿ ಒಳ್ಳೆಯ ಹೆಸರು ಗಳಿಸಿತು. ಅದುವರೆಗೂ ಹೃದಯದ ತೊಂದರೆಯಿದ್ದ ವಿಶ್ವನ ಮಡದಿಮಿತ್ರನ ಮಡದಿಯ ಆರೋಗ್ಯ ಗಣನೀಯವಾಗಿ ಸುಧಾರಿಸಿತ್ತು! ಆದರೆ ನನ್ನ ಮಿತ್ರನ ಸಂಘಗಳೇ ಪ್ರಾರಂಭವಾಗಿರಲಿಲ್ಲ! ಅದರ ಬಗ್ಗೆ ಕೇಳಲು ಹೋದರೆ ಗುರ್ರೆನ್ನುತ್ತಿದ್ದ. ಹೀಗಾಗಿ, ನಾನೂ ಸಹ ಕೇಳುವುದನ್ನು ಬಿಟ್ಟುಬಿಟ್ಟೆ.

ಕೆಲವು ತಿಂಗಳುಗಳ ನಂತರ ತಿಳಿಯಿತು, ನನ್ನ ಮಿತ್ರ ಸ್ವತಃ ಸಂಘ ಸ್ಥಾಪಿಸದಿದ್ದರೂ ತನ್ನ ಮಡದಿಯ ಸಂಘವನ್ನು ಬಲಪಡಿಸಲು ಓಡಿಯಾಡುತ್ತಿದ್ದಾನೆ ಎಂದು. ಏನಾದರಾಗಲಿ, ನನ್ನ ಮಿತ್ರ ಈ ಮೂಲಕ ತನ್ನ ಹೃದಯವನ್ನು ಬಲಪಡಿಸಿಕೊಂಡು ತನ್ನ ಆಯುಸ್ಸನ್ನು ಹೆಚ್ಚಿಸಿಕೊಳ್ಳುವನು ಎಂಬುದು ನನ್ನ ಖಚಿತ ಅಭಿಪ್ರಾಯ!

ಅಂದ ಹಾಗೆ..... ಹೃದಯದ ತೊಂದರೆಯಿದ್ದರೆ ನೀವೂ ಒಂದೆರಡು ಸಂಘಗಳನ್ನೇಕೆ ಪ್ರಾರಂಭಿಸ ಬಾರದು ? ಸಂಘ ಕಟ್ಟಿ ಹೃದಯ ಬಲಪಡಿಸಿಕೊಳ್ಳಿ!

**ಎಸ್. ಜಿ. ಶಿವಶಂಕರ್**
'ಶಿವಲತ', ೫೧೭೭, ಹೆಚ್.ಟಿ. ಡಬ್ಬಲ್ ರಸ್ತೆ
ವಿಜಯನಗರ ೨ನೇ ಹಂತ, ಮೈಸೂರು-೧೭



# ನ್ಯಾಯಕ್ಕಾಗಿ ಹೋರಾಡುವುದು ಅಪರಾಧವಲ್ಲ

*- ಗದ್ದರ್*

---

**ಸಮಾಜದಲ್ಲಿ ಬಲಿಷ್ಠರು ಕೆಳಸ್ತರಗಳ ಜನರ ಮೇಲೆ, ಆದಿವಾಸಿಗಳ ಮೇಲೆ ನಡೆಸುವ ದಬ್ಬಾಳಿಕೆಯನ್ನು ಗದ್ದರ್ ಹಾಡುಗಳು ಎತ್ತಿತೋರಿಸುತ್ತವೆ. ಉಳ್ಳವರ ಪರ ವಹಿಸುವ ಸರಕಾರವನ್ನು ಅವರು ಚುಚ್ಚದೇ ಬಿಡುವವರಲ್ಲ. ತಮ್ಮ ಮೇಲೆ ನಡೆದ ದೌರ್ಜನ್ಯಗಳನ್ನೆಲ್ಲ ಉಸಿರೆತ್ತದೇ ಸಹಿಸುತ್ತ ಬಂದವರಿಗೆ ಗದ್ದಾರರ ಈ ಘರ್ಜನೆಗಳು ಜಾಗೃತಿಯ ಸಂದೇಶ ಮುಟ್ಟಿಸುವುದರಲ್ಲಿ ಸಂಶಯವಿಲ್ಲ. ಅವರ ಕ್ರಾಂತಿಗೀತೆಗಳನ್ನು ಕೇಳಲು ನೆರೆಯುವವರ ಸಂಖ್ಯೆ ಹೆಚ್ಚುತ್ತಲೇ ಇದೆ.**

✦

ರಾಹುಲ ಬೆಳಗಲಿ

ರಷ್ಯದಲ್ಲಿ ಗೋರ್ಕಿ, ಅರ್ಜೆಂಟಿನಾದಲ್ಲಿ ಚೆ ಗವೇರರಂತಹ ಹೋರಾಟಗಾರರು ಇದ್ದರೂ, ಭಾರತದಲ್ಲಿ ಅದೇ ರೀತಿ ಹೋರಾಟದ ಪ್ರತೀಕ ಗದ್ದರ್. ಗೋರ್ಕಿ ಹಾಗೂ ಚೆ ಗವೇರರು ಕಾದಂಬರಿ ಹಾಗೂ ಹೋರಾಟದ ಮೂಲಕ ಜಗತ್ಪ್ರಸಿದ್ಧರಾದರೆ, ಗದ್ದರ್ ಹಾಡುಗಳನ್ನು ಬರೆದು, ಕ್ರಾಂತಿಗೀತೆಗಳನ್ನು ಹಾಡುತ್ತ, ತಮ್ಮದೇ ಆದ ರೀತಿಯಲ್ಲಿ ಅಭಿನಯ ಕಲೆಯನ್ನು ಮೈಗೂಡಿಸಿಕೊಂಡಿರುವ ಅಪ್ರತಿಮ ಸಾಹಿತಿ ಹಾಗೂ ಸಾಂಸ್ಕೃತಿಕ ಕ್ರಾಂತಿಯೋಧ. ಅನಕ್ಷರಸ್ಥರು, ಓದಲು-ಬರೆಯಲು ಬಲ್ಲವರಿಂದ ಹಿಡಿದು ಬುದ್ಧಿಜೀವಿಗಳು ಸಹ ಗದ್ದರ್ ಕಾರ್ಯಕ್ರಮವಿದೆಯೆಂದರೆ ಹಾಡುಗಳನ್ನು ಕೇಳಲು ಹಾತೊರೆಯುತ್ತಾರೆ.

ಗದ್ದರ್ – ಆಂಧ್ರಪ್ರದೇಶದಲ್ಲಿ ಮನೆಮನೆಗೆ ಪರಿಚಿತ ಹೆಸರು. ಕೈಯಲ್ಲಿ ಕೆಂಪು ವಸ್ತ್ರ, ಹೆಗಲಿಗೆ ಕಂಬಳಿ, ಕಾಲಿಗೆ ಗೆಜ್ಜೆ, ಬಿಳಿ ಪಂಚೆ ಉಟ್ಟು ಜನರ ಮುಂದೆ ನಿಂತರೆ ಸಾಕು, ಮುಂದಾಗಲಿರುವ ಕ್ರಾಂತಿಗೆ ಮುನ್ನುಡಿಯೆಂದೇ ಭಾಸವಾಗುವುದು. ಇನ್ನು, ಹಾಡಲು ಶುರು ಮಾಡಿದರಂತೂ ಮುಗಿಯಿತು; ಅದು ಹಾಡಲ್ಲ, ಅದು ಅನ್ಯಾಯದ ವಿರುದ್ಧದ ಘರ್ಜನೆ. ಇನ್ನೇನು ಜನ ಯಾವುದಕ್ಕೂ ಲೆಕ್ಕಿಸದೇ ಹೋರಾಟಕ್ಕಿಳಿದೇ ಬಿಡುತ್ತಾರೆ ಎನ್ನುವ ಆತಂಕ ಸರ್ಕಾರವನ್ನು ಕಾಡಲು ಶುರುವಾಗುತ್ತೆ.

ಗದ್ದರ್ – ಕ್ರಾಂತಿಯ ಕುರಿತು ಭಾಷಣ ಮಾಡುವುದಿಲ್ಲ, ದೊಡ್ಡ ದೊಡ್ಡ ಪದಗಳಿಂದ ಅರ್ಥ ಮಾಡಿಕೊಳ್ಳುವ ಕಠಿಣತೆಯನ್ನು ತರುವುದಿಲ್ಲ. ಕೇವಲ ಸರಳ ಪದಗಳಿಂದ ಕೂಡಿದ ಹಾಡು ಹಾಗೂ ಸಂಗೀತದ ಮೂಲಕ ಕ್ರಾಂತಿಯ ಸಂದೇಶ ಸಾರುತ್ತಾರೆ. ಶೋಷಿತ ಹಾಗೂ ಕೆಳವರ್ಗದ ಜನರಿಗೆ ಗದ್ದರ್ ಸ್ಫೂರ್ತಿಯ ಸೆಲೆಯಾಗಿದ್ದಾರೆ.

ಗದ್ದರ್ ಅವರ ನಿಜವಾದ ಹೆಸರು ಗುಮ್ಮಡಿ ವಿಟ್ಠಲ ರಾವ್. ಆಂಧ್ರಪ್ರದೇಶದ ಮೇಡಕ್ ಜಿಲ್ಲೆಯ ಹಳ್ಳಿ ತುಪ್ರಾನದ ಬಡ ದಲಿತ ಕುಟುಂಬದಲ್ಲಿ ಜನನ. ತಂದೆ ತಾಯಿ ಶೇಷಯ್ಯ ಮತ್ತು ಲಚುಮಮ್ಮ. ಹುಟ್ಟಿದ ದಿನಾಂಕ ನಿಜಕ್ಕೂ ವಿಶೇಷ. ಗದ್ದರ್ ಹುಟ್ಟಿದ್ದು ೩೦ ಜನವರಿ ೧೯೪೮ರಂದು. ಗಾಂಧೀಜಿ ಒಬ್ಬ ಮತಾಂಧನ ಗುಂಡಿಗೆ ಬಲಿಯಾದ ದಿನ ಅವತ್ತು. ಗದ್ದರ್ ಹುಟ್ಟು, ಹೋರಾಟ 'ಅಹಿಂಸೆ' 'ಹಿಂಸಾ' ಮಾರ್ಗದೆಡೆಗೆ ಪರಿವರ್ತಿತವಾದಂತೆ ಅರ್ಥೈಸುತ್ತದೆ.

ಶೇಷಯ್ಯ ಕೆಲದಿನಗಳ ಕಾಲ ಮಹಾರಾಷ್ಟ್ರದಲ್ಲಿ ಕಲ್ಲು ಕುಟ್ಟುವ ಕೆಲಸ ಮಾಡುವಾಗ, ಅಂಬೇಡ್ಕರ್ ವಿಚಾರಗಳು ಅವರನ್ನ ಪ್ರಭಾವಿತಗೊಳಿಸಿದವು. ಅಂಬೇಡ್ಕರ್ ಒಬ್ಬರೇ ದಲಿತರ ಆಶಾಕಿರಣವೆಂದು ಅವರು ನಂಬಿದ್ದರು. ಶೇಷಯ್ಯ ತನ್ನ ಮಕ್ಕಳಿಗೆ ಉಳಿದ ದಲಿತರಂತೆ ಹೆಸರಿಡದೇ ಗೌರವಯುತವಾದ ಸರಸ್ವತಿ, ಶಾಂತಾಬಾಯಿ, ಬಾಲಮಣಿ, ನರಸಿಂಗರಾವ್ ಹಾಗು ವಿಟ್ಠಲ ರಾವ್ ಎಂದು ಹೆಸರಿಟ್ಟರು. ದಿನಗಳು ತಳೆದಂತೆ, ಗದ್ದರ್ ತಂದೆಯಿಂದ ಅಂಬೇಡ್ಕರ್ ವಿಚಾರಗಳ ಕುರಿತು ತಿಳಿದುಕೊಂಡರು.

'ವಿಟ್ಠಲ ರಾವ್' ಪ್ರಾಥಮಿಕ ಶಿಕ್ಷಣವನ್ನು ತುಪ್ರಾನದಲ್ಲಿ ಪಡೆದರು. ಆ ಶಾಲೆಯ ಮುಖ್ಯೋಪಾಧ್ಯಾಯರಿಗೆ ಒಬ್ಬ 'ದಲಿತ' ಹುಡುಗನಿಗೆ 'ರಾವ್' ಎಂಬ ಹೆಸರು ಇದ್ದದ್ದು ಇಷ್ಟವಿರಲಿಲ್ಲ. ದಲಿತರಿಗೆ ಅಂತಹ ಹೆಸರು ಇಟ್ಟುಕೊಳ್ಳಲು ಹಕ್ಕಿಲ್ಲ, ಅದು ಕೇವಲ ಮೇಲ್ಜಾತಿಯವರಿಗೆ ಸಂಬಂಧಪಟ್ಟದ್ದು ಎಂದು 'ರಾವ್' ಎಂಬ ಹೆಸರಿನ ಭಾಗವನ್ನು ತೆಗೆದುಹಾಕಿದರು. 'ವಿಟ್ಠಲ ರಾವ್' 'ವಿಟ್ಠಲ'ನಾದ. ವಿಟ್ಠಲ ೧೯೬೮ರಲ್ಲಿ ಹತ್ತನೇ ತರಗತಿಯಲ್ಲಿ ಉತ್ತೀರ್ಣಗೊಂಡ ಪ್ರಥಮ ದಲಿತ ಹುಡುಗನೆಂದು ಎನ್ನಿಸಿಕೊಂಡನು. ಕೆಲ ದಿನಗಳ ನಂತರ ಕುಟುಂಬಕ್ಕೆ ಆಶ್ರಯದಾತನಾಗಿದ್ದ ತಂದೆ ತೀರಿಕೊಂಡರು. ಇಂಜಿನಿಯರಿಂಗ್ ವ್ಯಾಸಂಗ ಮಾಡಲು ಸ್ಥಾನ ಗಳಿಸಿಕೊಂಡ ಪ್ರಥಮ ದಲಿತನಾದರೂ, ಒಬ್ಬ ದಲಿತ ಹುಡುಗನಿಗೆ ಈ ತರಹದ ಆಡಂಬರ ಆಗಬರುವುದಿಲ್ಲವೆಂದು ಶಿಕ್ಷಣ ತ್ಯಜಿಸಿ, ಯಾವುದಾದರೂ ಕೆಲಸ ಹುಡುಕಿ ದುಡಿಯಲು ನಿರ್ಧರಿಸಿದರು.

ಆ ಕ್ಷಣದಿಂದ ಗದ್ದರ್ ಜೀವನದ ದಿಕ್ಕೇ ಬದಲಾಯಿತು. ಆ ಸಂದರ್ಭದಲ್ಲಿಯೇ ಶುರುವಾದ ತೆಲಂಗಾಣಾ ಚಳುವಳಿಗೆ ಸೇರಿಕೊಂಡರು. ತಾವೇ ಒಂದು ತಂಡವನ್ನು ಕಟ್ಟಿಕೊಂಡು 'ಬುರ್ರಕಥಾ', ಹರಿಕಥೆಯ ರೂಪದಲ್ಲಿ ನಿರುದ್ಯೋಗ ಹಾಗೂ ಶೋಷಿತರ ಸಮಸ್ಯೆಗಳ ಕುರಿತು ಹಾಡತೊಡಗಿದರು. ಇದರ ಜೊತೆಗೆ, ಸ್ವಾತಂತ್ರ್ಯ ಹೋರಾಟಗಾರರ ಧೈರ್ಯ ಹಾಗೂ ಬ್ರಿಟೀಷರ ದಬ್ಬಾಳಿಕೆ ಕುರಿತು ಹಾಡುಗಳನ್ನು ಹಾಡಿ ಸ್ವಾತಂತ್ರ್ಯ ಅಮೂಲ್ಯವಾದದ್ದು ಎಂದು ಜನರಲ್ಲಿ ತಿಳಿ ಹೇಳುತ್ತಿದ್ದರು.

ಗದ್ದರ್ ಕ್ರಾಂತಿ ಹಾಗೂ ಹೋರಾಟ ರಂಗಕ್ಕೆ ದುಮ್ಮಿಕ್ಕಲು ಮುಖ್ಯವಾಗಿ ಕಾರಣವಾದದ್ದು ಶ್ರೀಕಾಕುಳಂ ಶಸ್ತ್ರ ಹೋರಾಟ. ಅದು ಸಿ.ಪಿ.ಐ (ಎಂ.ಎಲ್.) ನೇತೃತ್ವದ ಆದಿವಾಸಿಗಳ ಹೋರಾಟ. ವೆಂಕಟಮಿ ಸತ್ಯಂ, ಆದಿಬಾತ್ಲಾ ಕೈಲಾಸಂ, ಡಾ॥ ಚಂಗಟ್ಟಿ, ಭಾಸ್ಕರ ರಾವ್ ಹಾಗೂ ಇನ್ನಿತರ ನಾಯಕರ ಬಲಿದಾನ ಇವರಿಗೆ ಸ್ಫೂರ್ತಿಯಾಯಿತು. ನಂತರ ತೀವ್ರವಾದ ಆಸಕ್ತಿಯಿಂದ ಶ್ರೀಕಾಕುಳಂ ಚಳುವಳಿ ಹಾಗೂ

ಇನ್ನಿತರ ಚಟುವಟಿಕೆಗಳ ಕುರಿತು ಹಲವಾರು ಪುಸ್ತಕಗಳನ್ನು ಓದಿದರು.

'ಜನ ನಾಟ್ಯ ಮಂಡಳಿ' ಎಂಬ ಹೊಸ ತಂಡವನ್ನು ಕಟ್ಟಿದರು. ತಮ್ಮ ಎಲ್ಲ ಕೆಲಸ-ಕಾರ್ಯಗಳು ಇನ್ನು ಮುಂದೆ 'ಗದ್ದರ್' ಹೆಸರಿನಿಂದ ಹೊರಬರಲಿ ಎಂದು ನಿರ್ಧರಿಸಿದರು. ೧೯೧೩ರಿಂದ ೧೯೩೦ರವರೆಗೆ ಬ್ರಿಟಿಷರನ್ನು ಧೈರ್ಯವಾಗಿ ಎದುರಿಸಿದ ಪಂಜಾಬಿನ 'ಗದ್ದರ್' ಪಕ್ಷದ ನೆನಪಿನಲ್ಲಿ ತಮ್ಮ ಹೆಸರನ್ನು ಬದಲಾಯಿಸಿಕೊಂಡರು.

'ಬ್ಯಾಂಕಿಂಗ್' ಪರೀಕ್ಷೆ ಬರೆದು, ೧೯೭೫ರಲ್ಲಿ ಕೆನರಾ ಬ್ಯಾಂಕ್‌ನಲ್ಲಿ ಕ್ಲರ್ಕ್ ಹುದ್ದೆ ಸಿಕ್ಕರೂ, ಕ್ರಾಂತಿ-ಹೋರಾಟ ಸಿದ್ಧಾಂತದೆಡೆಗೆ ಮನಸ್ಸು ವಾಲುತ್ತಿತ್ತು. ಸಾಂಸ್ಕೃತಿಕ ಹಾಗೂ ಹಾಡುಗಳ ಕಾರ್ಯಕ್ರಮಗಳತ್ತ ಹೆಚ್ಚಿನ ಆಸಕ್ತಿ ತೋರುತ್ತ ಬ್ಯಾಂಕಿಗೆ ಗೈರುಹಾಜರು ಆಗತೊಡಗಿದರು. ಜನರಿಗಾಗಿ ತಾನು ಮಾಡುತ್ತಿರುವ ಕೆಲಸ ಕಾರ್ಯಗಳಿಗೆ ಈ ನೌಕರಿ ಅಡ್ಡ ಬರುತ್ತಿದೆಯೆಂದು ೧೯೮೪ರಲ್ಲಿ ಬ್ಯಾಂಕಿಗೆ ರಾಜೀನಾಮೆ ನೀಡಿದರು.

೧೯೮೫ರ ವರ್ಷದ ಆಸುಪಾಸಿನಲ್ಲಿಯೇ ಕರಮಚೇಡು ಗ್ರಾಮದ ಜಮೀನ್ದಾರ ನಿರ್ದಯವಾಗಿ ದಲಿತರನ್ನು ಹಿಂಸಿಸುತ್ತಿದ್ದ. ಅವರ ಮನೆಗಳಿಗೆ ದಾಳಿ ಮಾಡಿಸಿದ್ದಲ್ಲದೇ ಹಲವರನ್ನು ಕೊಲ್ಲಿಸಿದ್ದ. ಇಂತಹ ಹೀನಕೃತ್ಯವನ್ನು ತಡೆದುಕೊಳ್ಳಲಾಗದೆ ಗದ್ದರ್ ಜೀವದ ಹಂಗನ್ನು ತೊರೆದು, ಕರಮಚೇಡು ದಲಿತರು ಹೆಚ್ಚು ಶೀಘ್ರವಾಗಿ ಸಂಘಟಿತರಾಗುವ ನಿಟ್ಟನಲ್ಲಿ ಕಾರ್ಯಕ್ರಮ ನಡೆಯಿಸಿಕೊಟ್ಟರು. ಜಮೀನ್ದಾರ ಹಾಗೂ ಸರಕಾರದಿಂದ ಯಾವುದೇ ರೀತಿಯಲ್ಲೂ ಕಾರ್ಯಕ್ರಮ ತಡೆಹಿಡಿಯಲು ಸಾಧ್ಯವಾಗಲಿಲ್ಲ.

ಸಿಟ್ಟಿನಿಂದ ಗದ್ದರ್ ಅವರ ಮನೆಗೆ ದಾಳಿ, ಕುಟುಂಬದ ಸದಸ್ಯರ ಮೇಲೆ ಹಲ್ಲೆ ಜರುಗಿದವು. ಆದರೆ ಗದ್ದರ್ ಯಾವುದಕ್ಕೂ ಮಣಿಯಲಿಲ್ಲ.

ಗದ್ದರ್ ಎಲ್ಲಿಯೇ ಕಾರ್ಯಕ್ರಮ ನೀಡಿದರೂ, 'ಹುತಾತ್ಮರಿಗೆ ಕೆಂಪು ಸಲಾಮು' ಮಾಡಿಯೇ ಹಾಡುಗಳ ಆರಂಭ. ಸಮಾಜದ ಪರಿವರ್ತನೆಗಾಗಿ ಬಲಿದಾನ ಮಾಡಿದವರ ನೆನಪಿನಲ್ಲಿ ಗದ್ದರ್ ಸಾಕಷ್ಟು ಹಾಡುಗಳನ್ನು ಬರೆದಿದ್ದಾರೆ. ಅದು ದಲಿತರು ಆಡುವ ಭಾಷೆಯಲ್ಲಿಯೇ ಬರೆದು, ಪದ್ಯ ಹಾಗೂ ಗದ್ಯಗಳನ್ನು ಹೊಸ ರೀತಿಯಲ್ಲಿ ತೆಲುಗು ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ. ಇದಕ್ಕೂ ಮುಂಚೆ, ತೆಲುಗು ಸಾಹಿತ್ಯ ಕೇವಲ ಉಚ್ಚ, ಮಧ್ಯಮ ಹಾಗೂ ಜಮೀನ್ದಾರ ವರ್ಗಕ್ಕೆ ಮಾತ್ರ ಸೀಮಿತವಾಗಿತ್ತು.

ಅಲ್ಲಿಯವರೆಗೂ ಸಂಸ್ಕೃತ ಭಾಷೆಯಿಂದ ಪ್ರಭಾವಕ್ಕೊಳಗಾಗಿದ್ದ ತೆಲುಗು ಭಾಷೆ, ಗದ್ದರ್ ಮೂಲಕ ಹೊಸ ಬದಲಾವಣೆಯನ್ನು ಕಂಡಿತು. ಭಾಷಾ ವಿನ್ಯಾಸ, ಒಗಟುಗಳು, ಗಾದೆಮಾತುಗಳು ಅಕ್ಷರದಿಂದ ದೂರವಿದ್ದವರ ಮನಗಳಿಗೆ ಮುಟ್ಟಿತು – ಅದರಲ್ಲಿಯೂ ಲಿಪಿಯೇ ಇಲ್ಲದ ತೆಲಂಗಾಣ ಭಾಷೆ ಪ್ರಾಮುಖ್ಯತೆ ಪಡೆಯಿತು. ಇದರಿಂದಾಗಿ ಗದ್ದರ್ ತೆಲಂಗಾಣ ಜನಾಂಗ ಹಾಗೂ ಭಾಷಾ ಲಿಪಿಗಳ ಮಧ್ಯದ ಕೊಂಡಿಯಾದರು. ಇದಕ್ಕೂ ಮೊದಲು ಪ್ರಸಿದ್ಧ ಕವಿ ಜೋಜು ಆ ತೆಲುಗು ಸಾಹಿತ್ಯದಲ್ಲಿ ಮಿಂಚನ್ನೇ ಹರಿಸಿದ್ದರು. ಆದರೆ ಗದ್ದರ್ ಹಾಡುಗಳನ್ನು ಸಾಧನಗಳಾಗಿ ಪರಿವರ್ತಿಸಿ ಜನರಲ್ಲಿ ಕುಟುಂಬ, ಸಮಾಜ, ವೈವಿಧ್ಯತೆ, ರಾಜ್ಯ ಮುಂತಾದವುಗಳ ಕುರಿತು ಹೊಸ ದೃಷ್ಟಿಕೋನ ತಂದರು.

ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿಗಳ ದಬ್ಬಾಳಿಕೆಯನ್ನು ಎತ್ತಿ ತೋರಿಸುತ್ತ ಬರೆದಿರುವ ಗದ್ದರ್ ಅವರ ಹಲವು ಹಾಡುಗಳಲ್ಲಿ, ಇತ್ತೀಚೆಗೆ ಅಮೆರಿಕ ತನ್ನ ಸರ್ವಾಧಿಕಾರ ಹಾಗೂ ತನ್ನದೊಂದೇ ಹಿಡಿತದಲ್ಲಿ ವಿಶ್ವವಿರಬೇಕೆಂಬುವುದರ ಕುರಿತು ಒಂದು ಹಾಡಿನಲ್ಲಿ ಹೀಗೆ ವಿವರಿಸಿದ್ದಾರೆ: ''ಆಗೋ! ಅತ್ತ ನೋಡಿ, ಅಮೆರಿಕ ಬರುತ್ತಿದೆ, ಮುಂಜಾನೆ ಟೂತ್‌ಪೇಸ್ಟ್ ರೂಪದಲ್ಲಿ, ಮಧ್ಯಾಹ್ನ ಕೋಕೋ ಕೋಲಾ ರೂಪದಲ್ಲಿ, ಸಂಜೆ ವಿಸ್ಕಿ ಹಾಗೂ ರಮ್ ರೂಪದಲ್ಲಿ, ಭಾರತೀಯರ ಮನಸ್ಸುಗಳನ್ನು ಹಿಡಿದಿಟ್ಟುಕೊಳ್ಳಲು ಸ್ಟಾರ್ ಟಿವಿ.'' ಹೀಗೆ ಸಾಗುತ್ತೆ ಅವರ ಹಾಡು. ಭಾರತ ಹಾಗೂ ಸಾಮ್ರಾಜ್ಯಶಾಹಿಯ ಹೋರಾಟವನ್ನು ಕೋಕೋ ಕೋಲಾ ಹಾಗೂ ತೆಂಗಿನ ಎಳೆ-ನೀರಿಗೆ ಹೋಲಿಸುತ್ತಾರೆ.

೬ ಏಪ್ರಿಲ್ ೧೯೯೭ರಂದು ಮೂವರು ದುಷ್ಕರ್ಮಿಗಳು ಗದ್ದರರ ಮನೆಗೆ ನುಗ್ಗಿ ಗುಂಡು ಹಾರಿಸಿದರು. ಈ ಕೃತ್ಯವನ್ನೆಸಗಿದವರು ಅಪರಿಚಿತರಿದ್ದರೂ ಸಹ ಪೊಲೀಸರ ಏಜೆಂಟರೆಂಬುವುದೇ ಹಲವು ಜನಗಳ ಸಂಶಯ.

ಗದ್ದರ್ ಪತ್ನಿ ವಿಮಲ ಹೇಳುವ ಹಾಗೆ ''ಒಟ್ಟು ನಾಲ್ವರಲ್ಲಿ, ಒಬ್ಬ ಮನೆಯೊಳಗೆ ಬಂದು, ತಾನು ವಾರಂಗಲ್‌ನಿಂದ ಬಂದವನೆಂದು ಗದ್ದರ್‌ಗೆ ಪರಿಚಯ ಮಾಡಿಕೊಂಡ. ಮರುಕ್ಷಣವೇ ಇನ್ನುಳಿದ ಮೂವರು ಸಹ ಒಳಬಂದು, ಅವರಲ್ಲೊಬ್ಬನು ತನ್ನ ರಿವಾಲ್ವರನ್ನು ತೆಗೆದು ಗದ್ದರ್‌ನತ್ತ ಗುಂಡು ಹಾರಿಸಿದನು. ಗುಂಡಿನ ಶಬ್ದ ಕೇಳಿದ ಕೂಡಲೇ, ನಾನು ನನ್ನ ಮಕ್ಕಳ ಹೊರ ಕೋಣೆಯತ್ತ ಬಂದೆ. ಅವರನ್ನು ಹಿಡಿಯಲೆತ್ನಿಸಿದಾಗ, ಗಾಳಿಯಲ್ಲಿ ಗುಂಡು ಹಾರಿಸಿ, ಕಾರಿನಿಂದ ಪರಾರಿಯಾಗಿಬಿಟ್ಟರು.

''ನಾನು ಆ ನಾಲ್ವರನ್ನು ಗುರುತು ಹಿಡಿಯಬಲ್ಲೆ. ಅವರು ಪೊಲೀಸರ ಕಡೆಯವರೇ'' ಎಂದು ಗಟ್ಟಿ ನಂಬಿಕೆಯಿಂದ ವಿಮಲ ನುಡಿಯುತ್ತಾರೆ. ಪೊಲೀಸರಿಗೂ ಇದೇ ದೂರನ್ನು ನೀಡಿದ್ದಾರೆ.

'ಗದ್ದರ್‌ಗೆ ಗುಂಡೇಟು' ಎಂಬ ಸುದ್ದಿ ಕೇಳಿದ ಕೂಡಲೆ ದಲಿತರ ಜಂಘಾಬಲವೇ ಉಡುಗಿಹೋದಂತಾಯಿತು. ಜೀವನ್ಮರಣಗಳ ನಡುವೆ ಮೂರು ದಿನಗಳವರೆಗೆ ಹೋರಾಡಿದರು. ಆಪರೇಷನ್ ಮಾಡಿದಾಗ ಎರಡು ಗುಂಡುಗಳನ್ನು ಹೊರ ತೆಗೆಯಲಾಯಿತು. ಆದರೆ ಎದೆಯ ಪಕ್ಕದಲ್ಲಿಯೇ ಹೊಕ್ಕಿದ್ದ ಗುಂಡನ್ನು ತೆಗೆಯಲಿಲ್ಲ. ಕಾರಣ, ಗುಂಡು ಹೊರತೆಗೆದರೆ, ಜೀವಕ್ಕೆ ಅಪಾಯವೆಂದು ದೇಹದಲ್ಲಿಯೇ ಉಳಿಸಿದರು.

ಈಗಲೂ ಸಹ ಗದ್ದರ್ ಎದೆಯಲ್ಲಿ ಗುಂಡು ಇಟ್ಟುಕೊಂಡೇ ಎಲ್ಲ ಕಡೆ ಸಂಚರಿಸುತ್ತ ಕಾರ್ಯಕ್ರಮಗಳನ್ನು ನೀಡುತ್ತಿದ್ದಾರೆ. ಅದು ಅವರಿಗೆ ಹೋರಾಟದ ಮೇಲಿರುವ ನಂಬುಗೆ ಹಾಗೂ ಬಡವರ ಪರ ಇರುವ ಕಾಳಜಿ ತೋರಿಸುತ್ತದೆ.

ಇಂತಹ ವ್ಯಕ್ತಿಯನ್ನು ನೋಡಬೇಕೆನ್ನುವ ಕಾತುರ ನನ್ನ ಮನಸ್ಸಿನಲ್ಲಿ ಕಾಡುತ್ತಲೇ ಇತ್ತು. ಆದರೆ ಹೇಗೆ? ಆಂಧ್ರಪ್ರದೇಶದಲ್ಲಿ ಅವರನ್ನು ಭೇಟಿಯಾಗುವುದಂತೂ ಅಸಾಧ್ಯದ ಮಾತು. ಕಾರಣ, ಅವರು ಎಲ್ಲಿರುತ್ತಾರೆ ಎಂಬುವುದೇ ತಿಳಿಯುವುದಿಲ್ಲ. ಒಂದು ಕಡೆಯೂ ನಿಲ್ಲದೆ ಸದಾ ಚಟುವಟಿಕೆಯಲ್ಲಿರುವ ಗದ್ದರ್ ಸಿಗುವುದೇ ಕಷ್ಟ.

ಕೆಲವೇ ದಿನಗಳ ಹಿಂದೆ, ಮಹಾಲಿಂಗಪುರಕ್ಕೆ ಗದ್ದರ್ ಬರುತ್ತಾರೆ ಅಂತ ಸುದ್ದಿ ಕೇಳಿ ಬಂದಿತು. ೧೩ನೇ ರಾಜ್ಯ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಕಾರ್ಯಕ್ರಮ ನೀಡಲಿದ್ದಾರೆಂದು ಗೊತ್ತಾಯಿತು. ತಕ್ಷಣವೇ ಬಸ್ ಹತ್ತಿ, ಅಲ್ಲಿ ತಲುಪಿದೆ.



*ಗದ್ದರ್ ಜೊತೆಯಲ್ಲಿ ಲೇಖಕ*

ಸಮ್ಮೇಳನದ ಉದ್ಘಾಟನೆಯು ಜರುಗಿತು. ಕ್ರಾಂತಿಕವಿ ವರವರ ರಾವ್ ಉದ್ಘಾಟಿಸಿದರು. ಗದ್ದರ್ ಬರುವುದು ವಿಳಂಬವಾಗಿತ್ತು. ಕ್ಷಣಕ್ಷಣಕ್ಕೂ ಗದ್ದರ್ ಈಗ ಬರುತ್ತಾರೆ, ಆಗ ಬರುತ್ತಾರೆಂದು ಸಂಘಟಕರು ಮೈಕಿನಲ್ಲಿ ಹೇಳ್ತಾನೇ ಇದ್ದರು. ಬೆಳಿಗ್ಗೆ ೧೧ ಗಂಟೆಯಿಂದ ಮಟ ಮಟ ಮಧ್ಯಾಹ್ನ ೩.೩೦ ಗಂಟೆಯವರೆಗೂ ಜನರು ನಿರೀಕ್ಷೆಯಲ್ಲಿಯೇ ಕ್ಷಣಗಳನ್ನು ಕಳೆಯತೊಡಗಿದರು. ಕೊನೆಗೆ ತಮ್ಮದೇ ಆದ ವೇಷದಲ್ಲಿ ಗದ್ದರ್ ವೇದಿಕೆ ಮೇಲೇರಿ ಬಂದಾಗ, ಎಲ್ಲರಲ್ಲಿಯೂ ರೋಮಾಂಚನ ಮೂಡಿಸಿತು. ಸೂಜಿ ಬಿದ್ದರೂ ಸಹ ಶಬ್ದವಾಗುವಂತಹ ನಿಶ್ಯಬ್ದತೆ ಆವರಿಸಿತ್ತು.

ಇಂತಹ ಒಂದು ಸಂದರ್ಭ ವ್ಯರ್ಥಗೊಳಿಸಬಾರದು, ಹೇಗಾದರೂ ಮಾತನಾಡಿಸಬೇಕೆಂದು ನಿರ್ಧರಿಸಿದೆ. ಇಂತಹ ಅಪೂರ್ವ ಕ್ಷಣಗಳು ಮತ್ತೆ ಮತ್ತೆ ಸಿಗಲಾರದೆಂದು ನೇರವಾಗಿ ಗದ್ದರ್ ಆಪ್ತರತ್ತ ಹೋಗಿ ಮಾತನಾಡಿಸುವ ನನ್ನ ಇಂಗಿತ ಕುರಿತು ತಿಳಿಸಿದೆ.

ಆದರೆ, ಮಾತನಾಡುವುದು ಏನು, ಹೇಗೆಂದು ಮನಸ್ಸನ್ನು ಕಾಡ್ತಾನೇ ಇತ್ತು. ನಾನು ನನ್ನ ಬಗ್ಗೆ ಪರಿಚಯ ಮಾಡಿಕೊಂಡಾಗ ಗದ್ದರ್ ಹರ್ಷದಿಂದ ಬರಮಾಡಿಕೊಂಡರು. ಯಾವುದೇ ಗಂಭೀರತೆ ಹಾಗೂ ಸಿಡುಕಿನಿಂದ ನನ್ನ ಪ್ರಶ್ನೆಗೆ ಉತ್ತರಿಸಲಿಲ್ಲ. ಸದಾ ಹಸನ್ಮುಖಿಯಾಗಿ, ಅತ್ಯಂತ ಸರಳವಾದ ಭಾಷೆಯಲ್ಲಿ ಉತ್ತರಿಸಿದರು. ಮುಕ್ತ ಮನಸ್ಸಿನಿಂದ ಮಾತನಾಡಿದರು.

''ನಕ್ಸಲೀಯ ಚಳುವಳಿಯ ಸಶಸ್ತ್ರ ಹೋರಾಟವೇ ಅನ್ಯಾಯದ ವಿರುದ್ಧ ಹೋರಾಡಲು ಸೂಕ್ತ ಮಾರ್ಗವೆಂದು ಜನ ನಂಬುತ್ತಿದ್ದಾರೆ. ಹೆಚ್ಚಿನ ಬಡ ದಲಿತರು ಸಹಕರಿಸುತ್ತಿದ್ದಾರೆ. ಬುದ್ಧಿಜೀವಿಗಳು ಸಹ ಜೊತೆಗಿದ್ದಾರೆ. ನ್ಯಾಯಕ್ಕಾಗಿ

ಹೋರಾಡುವುದರಲ್ಲಿ ಯಾವುದೇ ತಪ್ಪಿಲ್ಲ. ಯಾವಾಗ ಯಾವುದೇ ರೀತಿಯ ನ್ಯಾಯ ಹಾಗೂ ಹಕ್ಕು ಸಿಗುವುದಿಲ್ಲವೋ, ಆಗ ಕಸಿದುಕೊಳ್ಳುವುದು ಅನಿವಾರ್ಯವಾಗುತ್ತೆ. ತಮ್ಮ ಪಾಡಿಗೆ ತಾವು ಜೀವನ ನಡೆಸುವುದಕ್ಕೆ ಯಾರನ್ನೂ ಕೇಳಬೇಕಾಗಿಲ್ಲ, ನಕ್ಸಲೀಯರ ಹೋರಾಟ ಸತ್ಯಕ್ಕಾಗಿ'' ಎಂದು ಗದ್ದರ್ ಪ್ರತಿಪಾದಿಸುತ್ತಾರೆ.

ಕಾಡು-ಮೇಡುಗಳಲ್ಲಿ, ಕಷ್ಟ-ನಷ್ಟ ಅನುಭವಿಸುತ್ತ, ಜಮೀನ್ದಾರರ ದಬ್ಬಾಳಿಕೆಯ ವಿರುದ್ಧ ರೋಷದಿಂದ ನಕ್ಸಲೀಯರು ಎದುರಿಸಿದರೂ, ಯಾವಾಗಲೂ ಬಡವರ ಪರವಾಗಿ ಹಾಗೂ ಶೋಷಿತರ ಬೆನ್ನೆಲುಬಾಗಿ ನಿಲ್ಲುತ್ತಾರೆ. ಹೀಗಿದ್ದರೂ ಅವರ ಮೇಲೆ ಸುಳ್ಳು ಆರೋಪಗಳು ಹೊರಿಸುವುದು ತಪ್ಪಿಲ್ಲವೆಂದು ಗದ್ದರ್ ವ್ಯಥೆಪಡುತ್ತಾರೆ.

ಇತ್ತೀಚೆಗೆ ಬಸ್ ಸ್ಫೋಟ ದುರಂತದಿಂದಾಗಿ ೧೮ ಜನ ಅಮಾಯಕರು ಬಲಿಯಾದಾಗ ಪೊಲೀಸರು, ''ಇದು ನಕ್ಸಲೀಯರ ಕೈವಾಡವೆಂದು ಹೇಳಿಕೆ ನೀಡಿದರು. ಜನರಿಗಾಗಿಯೇ ತ್ಯಾಗ-ಬಲಿದಾನ ಮಾಡುತ್ತಿರುವ ನಕ್ಸಲೀಯರೇ ಹೇಗೆ ಜನರನ್ನು ಕೊಲ್ಲುತ್ತಾರೆ ?'' ಎಂದು ಗದ್ದರ್ ಪ್ರಶ್ನಿಸುತ್ತಾರೆ.

''ನಂಬರ್ ಪ್ಲೇಟುಗಳು ಇಲ್ಲದೆಯೇ ಪೊಲೀಸರು ಕಾಡಿಗೆ ನುಗ್ಗಿ ಕಾಡುವಾಸಿಗಳಿಗೆ ತೊಂದರೆ ನೀಡುತ್ತಾರೆ. ಆ ದಿನವು ಸಹ ಪೊಲೀಸರೇ ಆ ಬಸ್ಸನ್ನು ಮುಂದೆ ಮಾಡಿ, ತಾವು ಅದನ್ನು ಹಿಂಬಾಲಿಸಿದರು. ಈ ರಾಜ್ಯದಲ್ಲಿ ಜನರನ್ನು ರಕ್ಷಿಸುವ ಬದಲು ಕೊಲ್ಲುವ ಪೊಲೀಸರಿಗೇನು ಕಡಿಮೆಯಿಲ್ಲ.''

''ಹೈಟೆಕ್ ಸರಕಾರವೆಂದೇ ಕರೆಯಲ್ಪಡುವ ನಾಯ್ಡು ಸರಕಾರ ಮೊಸಳೆ ಕಣ್ಣೀರು ಹರಿಸುವುದಲ್ಲದೇ ಬೇರೇನೂ ಮಾಡಿಲ್ಲ. ಮನಸ್ಸಿಗೆ ಬಂದಾಗಲೆಲ್ಲ ಬಿಲ್ ಗೇಟ್ಸ್‌ನನ್ನು ಆಮಂತ್ರಿಸುವುದು, ಇಲ್ಲದಿದ್ದರೆ ವಿಶ್ವಬ್ಯಾಂಕ್‌ನಿಂದ ರಾಜ್ಯದ ಅಭಿವೃದ್ಧಿಗೆ ೫೦,೦೦೦ ಕೋಟಿ ರೂ.ಗಳಷ್ಟು ಸಾಲ ಮಾಡುವುದು. ಆದರೆ, ಇನ್ನೂವರೆಗೂ ಯಾವೊಂದು ಅಭಿವೃದ್ಧಿ ಕಾರ್ಯಕ್ರಮಗಳಿಗೆ ಚಾಲನೆ ದೊರೆತಿಲ್ಲ. ಆ ೫೦,೦೦೦ ಕೋಟಿ ರೂಪಾಯಿ ಹಣ ಸರಕಾರ ಗುಳುಂ ಮಾಡಿತೋ ಅಥವಾ ಕಂಪ್ಯೂಟರ್ ತಿಂದುಹಾಕಿತೋ ಗೊತ್ತಿಲ್ಲ'' ಎಂದು ಆಂಧ್ರದ ಹೈಟೆಕ್ ಸರಕಾರದ ಕುರಿತು ಗದ್ದರ್ ವ್ಯಂಗ್ಯವಾಡುತ್ತಾರೆ.

''ನಕ್ಸಲೀಯ ಚಳುವಳಿ ಕೊನೆಗಾಣಿಸಲು ಸರಕಾರ ಪರಸ್ಪರ ಮಾತುಕತೆಗೆ ಆಹ್ವಾನ ನೀಡುತ್ತದೆ. ಆದರೆ, ತಾನು ಮಾತು ಕೊಟ್ಟಂತೆ ನಡೆಯುವುದೇ ಇಲ್ಲ. ಮಾತುಕತೆಯ ಮುನ್ನ ಹತ್ತು-ಹನ್ನೆರಡು ದಿನಗಳವರೆಗೆ ಎನ್‌ಕೌಂಟರ್ ನಡೆಯಕೂಡದೆಂದು ಹೇಳಿದರೂ, ಮಾತುಕತೆಯ ಎರಡು ದಿನಗಳ ಮೊದಲೇ ಮೋಸದಿಂದ ನಕ್ಸಲೀಯರನ್ನು ಕೊಂದು ಹಾಕುತ್ತಾರೆ. ಇಂತಹ ಸರಕಾರದ ಜೊತೆ ಮಾಡನಾಡುವುದಾದರೂ ಹೇಗೆ ?

''ಇತ್ತೀಚೆಗೆ ತಾನೆ ಪದ್ಮಕ್ಕ ಎಂಬ ಹೋರಾಟಗಾರ್ತಿಯನ್ನು ಪೊಲೀಸರು ಮೋಸ ದಿಂದ ಕೊಂದು ಎನ್‌ಕೌಂಟರ್ ಎಂದು ಹೇಳಿಕೆ ನೀಡಿತು. ನಿಜಕ್ಕೂ ಯಾವುದೇ ಎನ್‌ಕೌಂಟರ್‌ಗಳು ನಡೆಯುವುದಿಲ್ಲ. ಪೊಲೀಸರೇ ಅವರಿರುವ ತಾಣಗಳಿಗೆ ದಾಳಿ ನಡೆಸಿ, ಬಂಧಿಸಿ, ನಂತರ ದೂರದ ಪ್ರದೇಶವೊಂದರಲ್ಲಿ ಅವರ ಮೇಲೆ ಗುಂಡಿನ ಸುರಿಮಳೆಗೆಯ್ಯುತ್ತಾರೆ. ಅವರೆಲ್ಲರೂ ಎಲ್ಲಿ ಹೋಗಿದ್ದಾರೆಂದು ಹುಡುಕುವಷ್ಟರಲ್ಲಿ ಎಲ್ಲರ ಹೆಣ ಕೊಳೆತು ಹೋಗಿರುತ್ತದೆ'' ಎಂದು ಗದ್ದರ್ ಸರ್ಕಾರ ಹಾಗೂ ನಕ್ಸಲೀಯರ ಸಂಬಂಧವಲ್ಲದೆ ಪೊಲೀಸರ ದೌರ್ಜನ್ಯ ಹಾಗು ದಬ್ಬಾಳಿಕೆ ಕುರಿತು ರೋಷ ವ್ಯಕ್ತಪಡಿಸುತ್ತಾರೆ.

''ಭಾರತಕ್ಕೆ ಸ್ವಾತಂತ್ರ್ಯ ಬಂದು ೫೫ ವರ್ಷಗಳಾದರೂ ಯಾವುದೇ ಪ್ರಯೋಜನವಾಗಿಲ್ಲ. ಕೇವಲ ಮತ ಹಾಕುವ ಮೂಲಕ ನಿರ್ಧರಿಸಲ್ಪಡುವ ಚುನಾವಣೆಗಳಿಂದ ಪುನಃ ಅದೇ ಭ್ರಷ್ಟ ರಾಜಕಾರಣಿಗಳು ಗೆಲ್ಲುತ್ತಾರೆ. ಇಷ್ಟು ವರ್ಷಗಳಾದರೂ ಶ್ರೀಮಂತ ಶ್ರೀಮಂತನಾಗುತ್ತಲೇ ಇದ್ದಾನೆ, ಬಡವ ಇನ್ನಷ್ಟು ಬಡತನಕ್ಕೆ ಸಿಲುಕುತ್ತಿದ್ದಾನೆ.

''ಇಂತಹ ಪರಿಸ್ಥಿತಿಯಲ್ಲಿ, ಹೊಸದಾದ ಪ್ರಜಾಪ್ರಭುತ್ವ ಚಳುವಳಿಯ ಅಗತ್ಯತೆ ತುಂಬ ಇದೆ. ಎಲ್ಲ ಬುದ್ಧಿಜೀವಿಗಳು, ಪ್ರಗತಿಪರ ಚಿಂತಕರು, ಜಾತ್ಯತೀತ ಮನೋಭಾವದವರು, ಕಮ್ಯೂನಿಸ್ಟ್ ಹಾಗೂ ಸಮಾಜವಾದಿ ಸಂಘಟನೆಗಳು ಜೊತೆಗೂಡಿ ಹೊಸ ರೀತಿಯ ಪ್ರಜಾಪ್ರಭುತ್ವಕ್ಕೆ ನಾಂದಿಯಾಗಬೇಕು. ಇವೆಲ್ಲವೂ ಸಾಧ್ಯ,'' ಎಂದು ಗದ್ದರ್ ತಮ್ಮ ಆಶಯ ವ್ಯಕ್ತಪಡಿಸುತ್ತಾರೆ.




ಅಂಬೇಡ್ಕರ್ ರಚಿತ ಭಾರತದ ಸಂವಿಧಾನದ ಮೇಲೆ ಅಭಿಮಾನ ಹೊಂದಿರುವ ಗದ್ದರ್, ''ಈಗಲೂ ಸಹ ಸರಕಾರ ಸಂವಿಧಾನದ ನಿಯಮಗಳನ್ನು ಶೇ. ೧೦ರಷ್ಟು ಪಾಲಿಸಿದರೆ ಸಾಕು, ದೇಶ ಉದ್ಧಾರವಾಗುವುದು. ಭ್ರಷ್ಟಾಚಾರ, ಬಡತನ, ನಿರುದ್ಯೋಗ ಮುಂತಾದ ಸಮಸ್ಯೆಗಳು ಹೋಗುತ್ತವೆ'' ಎಂದು ಹೇಳುತ್ತಾರೆ.

''ಜನರಿಂದ ಮಾಡಲ್ಪಟ್ಟ ವಸ್ತುಗಳನ್ನು ಬಳಸಬೇಕು. ಒಬ್ಬ ಕಾರ್ಮಿಕನ ಬೆವರು ಹಾಗೂ ಕಷ್ಟ ಅದರಲ್ಲಿ ಅಡಗಿರುತ್ತದೆ. ಅವರ ಉದ್ಯೋಗ ಪರಿಗಣಿಸಿ ಕೀಳಾಗಿ ನೋಡುವುದು ಹಾಗೂ ಅವರಿಂದ ತಯಾರಾದ ವಸ್ತು ಯಾವುದೇ ರೀತಿಯಲ್ಲಿ ಉಪಯೋಗವಿಲ್ಲವೆಂದು ನಿರ್ಲಕ್ಷಿಸುವುದು ಒಬ್ಬ ಕಾರ್ಮಿಕನಿಗೆ ಅವಮಾನ ಮಾಡಿದಂತೆ, ಅದಕ್ಕಿಂತಲೂ ಮನುಷ್ಯನನ್ನು ತುಚ್ಛವಾಗಿ ಕಂಡಂತೆ ತೋರುತ್ತದೆ'' ಎಂದು ಗದ್ದರ್ ಮನುಷ್ಯ ಸಮಾಜದಲ್ಲಿ ಒಂದಾಗಿ ಹಾಗೂ ಸಮಾನತೆಯಿಂದ ಬಾಳುವುದು ಅತ್ಯವಶ್ಯವೆಂದು ಹೇಳುತ್ತಾರೆ.

''ಹಾಡುಗಳೇ ನನ್ನ ಶಸ್ತ್ರಗಳು. ಅವುಗಳ ಮೂಲಕವೇ ನನ್ನ ಹೋರಾಟ. ಜನ ಜಾಗೃತಿ ಮೂಡಿಸುವುದು ಅತ್ಯವಶ್ಯವಾಗಿದೆ. ಹಳ್ಳಿಯ ಮುಗ್ಧ ಜನರನ್ನು ಎಚ್ಚರಿಸಬೇಕಾದರೆ ಹಾಗೂ ಅರ್ಥ ಮಾಡಿಸಬೇಕಾದರೆ, ಅದು ಕೇವಲ ಹಾಡಿನಿಂದ ಮಾತ್ರ ಸಾಧ್ಯ. ನನ್ನ ಕೊನೆಯ ಉಸಿರು ಇರುವವರೆಗೂ ಹಾಡುತ್ತೇನೆ'' ಎಂದು ಸಾಮಾಜಿಕ ಕ್ರಾಂತಿಯತ್ತ ಒಲವು ತೋರಿಸುತ್ತಾ, ಅಸಾಧ್ಯವಾದುದನ್ನು ಮಾಡಬಹುದೆಂದು ಹಾಡುಗಳ ಮೂಲಕ ಜನರನ್ನು ಹುರಿದುಂಬಿಸುವಲ್ಲಿ ಗದ್ದರ್ ಯಶಸ್ವಿಯಾಗಿದ್ದಾರೆ.

''ಎಲ್ಲಿಯವರೆಗೆ ನನ್ನ ಜನರನ್ನು ಮನುಷ್ಯರೆಂದು ಗುರುತಿಸಿ ಗೌರವಿಸುವುದಿಲ್ಲವೋ ಅಲ್ಲಿಯವರೆಗೂ ನಾನು ಕ್ರಾಂತಿಗೀತೆ ಹಾಡುವುದನ್ನು ನಿಲ್ಲಿಸುವುದಿಲ್ಲ. ಈ ಕ್ರಾಂತಿಯ ಪರಂಪರೆ ಪೀಳಿಗೆಯಿಂದ ಪೀಳಿಗೆಗೆ ಮುಂದುವರೆಯುತ್ತೆ'' ಎಂದು ಹೇಳಲು ಗದ್ದರ್ ಎಂದಿಗೂ ಮರೆಯುವುದಿಲ್ಲ.

ಗದ್ದರ್‌ಗೆ ಕೇವಲ ಜನರಿಂದ ಬೆಂಬಲ ಹಾಗೂ ಸ್ಫೂರ್ತಿ ದೊರೆಯುವುದಲ್ಲದೇ ಅವರ ಕುಟುಂಬ ಸಹ ಎಲ್ಲ ರೀತಿಯ ಸಹಕಾರ ನೀಡಲು ಮುಂದಾಗುತ್ತದೆ. ಗದ್ದರ್ ಪತ್ನಿ ವಿಮಲ, ಮಕ್ಕಳಾದ ಸೂರ್ಯಡು (ಸೂರ್ಯ) ,ಚಂದ್ರಡು (ಚಂದ್ರ) ಹಾಗು ವೆನ್ನಿಲಾ (ಚಂದ್ರಕಿರಣ) – ಇವರೆಲ್ಲರ ಸ್ಫೂರ್ತಿ ಗದ್ದರ್‌ಗೆ ಸದಾ ಚೈತನ್ಯ ತುಂಬುತ್ತದೆ.

೫೪ರ ಇಳಿವಯಸ್ಸಿನಲ್ಲಿ ಗದ್ದರ್ ತಮ್ಮ ಜೀವನದಲ್ಲಿ ಎಲ್ಲ ರೀತಿಯ ಕಷ್ಟಗಳನ್ನು ಎದುರಿಸಿದ್ದಾರೆ. ಅಸ್ಪೃಶ್ಯತೆ, ಬಡತನ, ಜೈಲು ವಾಸ, ಭೂಗತ ಜೀವನ ಹಾಗೂ ಗುಂಡಿನ ರುಚಿಯನ್ನು ಸಹ ಸವಿದಿದ್ದಾರೆ.

ಗದ್ದರ್ ಜನರ ಅತಿಯಾದ ಭಾವನಾತ್ಮಕ ಸಂಬಂಧಗಳನ್ನು ದೂರವಿರಿಸಿ, ವೈಚಾರಿಕ ಸಂಬಂಧಗಳ ಮೂಲಕ, ಓದು, ಹೋರಾಟ ಹಾಗೂ ವಿಮರ್ಶೆಯ ಮೂಲಕ ಜನರಿಗೆ ಹತ್ತಿರವಾಗಿದ್ದಾರೆ. ಗುಂಡುಗಳು ಅವರನ್ನು ಸಾಯಿಸುವ ಇರಾದೆ ಹೊಂದಿ, ದೇಹವನ್ನು ಹೊಕ್ಕಿದ್ದರೂ, ಗದ್ದರ್ ಅವುಗಳನ್ನೇ ಕೊಂದುಹಾಕಿದ್ದಾರೆ. ಅವರ 'ಸ್ಟೀಲ್ ದೇಹ'ದಲ್ಲಿ ಇನ್ನೂ ಒಂದು ಗುಂಡು ಇದೆ. ಆದರೆ, ಅದು ಯಾವತ್ತು ಸ್ವಾತಂತ್ರ್ಯಕ್ಕಾಗಿ, ಹೋರಾಟಕ್ಕಾಗಿ ಬರೆಯುವ ಹಾಡುಗಳನ್ನು ಹಾಗೂ ಚಟುವಟಿಕೆಗಳನ್ನು ತಡೆಯುವ ಸಾಹಸ ಮಾಡಿಲ್ಲ, ಮಾಡುವುದೂ ಇಲ್ಲ.

ಗದ್ದರ್ ಜೊತೆ ಮಾತನಾಡುತ್ತ ಸಮಯ ಹೋದದ್ದೇ ಗೊತ್ತಾಗಲಿಲ್ಲ. ಗಡಿಯಾರದ ಮುಳ್ಳುಗಳು ಕಾರ್ಯಕ್ರಮ ಹತ್ತಿರವಾಗುತ್ತಿರುವ ಸಮಯ ತೋರಿಸಿದಾಗ, ಗದ್ದರ್ ಕಾರ್ಯಕ್ರಮ ನಡೆಯಿಸಿಕೊಡಲು ಮುಂದಾದರು.

ಮತ್ತೆ, ಅಂಥದ್ದೇ ಒಂದು ಅದ್ಭುತ ಕಾರ್ಯಕ್ರಮ ನೀಡಲಿಕ್ಕೆ, ಜನರಲ್ಲಿ ಜಾಗೃತಿ ಮೂಡಿಸಲಿಕ್ಕೆ, ಒಗ್ಗಟ್ಟು ಹಾಗೂ ಕ್ರಾಂತಿಯ ಸಂದೇಶ ನೀಡಲಿಕ್ಕೆ ಸಜ್ಜಾಗತೊಡಗಿದರು ಗದ್ದರ್.


ರಾಹುಲ ಬೆಳಗಲಿ
ಪತ್ರಿಕೋದ್ಯಮ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ-೫೮೦ ೦೦೩

# ನೆಬ್ಯುಲಗಳ ಪರಿಚಯ



**ಕ**ಳೆದ ತಿಂಗಳು ಏಡಿಗಂತಿ (ಕ್ರಾಬ್) ನೆಬ್ಯುಲದ ಬಗ್ಗೆ ಅದನ್ನು ಹುಡುಕಲು ಶನಿಗ್ರಹದ ಸಹಾಯ ಪಡೆಯಬಹುದೆಂದು ಬರೆದಿದ್ದೆನಷ್ಟೇ. ಅದನ್ನೋದಿದ ಕೆಲವರು (ಕೇವಲ ಮೂರು ಜನ) ದೂರದರ್ಶಕದ ಮೂಲಕ ಅದನ್ನು ಹುಡುಕುವ ಪ್ರಾಮಾಣಿಕ ಪ್ರಯತ್ನ ಮಾಡಿದರು. ಕ್ರಾಬ್ ನೆಬ್ಯುಲ ಕಾಣಲಿಲ್ಲ ಎಂದು ದೂರವಾಣಿಯಲ್ಲಿ ವರದಿ ಮಾಡಿದರು. ಆಶ್ಚರ್ಯವೇನಿಲ್ಲ, ನಮ್ಮ ದೂರದರ್ಶಕದಲ್ಲೂ ಅದು ಕಾಣಲಿಲ್ಲ. ಪ್ರಕಾಶಮಾನವಾಗಿದ್ದ ಶನಿಗ್ರಹದ ಬೆಳಕಿನಲ್ಲಿ ನೆಬ್ಯುಲ ಮಂಕಾಗಿಬಿಟ್ಟಿತ್ತು. ಜಗತ್ತಿನ ಇತರ ಖಗೋಳ ವೀಕ್ಷಕರಿಂದಲೂ ಇದೇ ವರದಿ ಬಂದಿತ್ತು. (ತಾರಾಲಯದ ಪಕ್ಕದ ಕ್ರಿಕೆಟ್ ಸ್ಟೇಡಿಯಂನಲ್ಲಿದ್ದ ಪ್ರಖರ ವಿದ್ಯುತ್ ದೀಪದ ಬೆಳಕಿನ ಕಾರಣ, ನಮ್ಮಲ್ಲಿಯ ಆಕಾಶದಲ್ಲಿ ಹುಣ್ಣಿಮೆಗಿಂತ ಹೆಚ್ಚು ಬೆಳಕು ಪಸರಿಸಿತ್ತು.)

ಉಪಾಧ್ಯಾಯ/ಯಿನಿಯರ ಮುಂದಿನ ಪ್ರಶ್ನೆ ಇಂದಿನ ನಭಾವಲೋಕನಕ್ಕೆ ಸಾಮಗ್ರಿ ಒದಗಿಸಿತು. ನೆಬ್ಯುಲ ಎಂದರೇನು? ಖಡಾಖಂಡಿತವಾಗಿ ದೂರದರ್ಶಕದ ಮೂಲಕ ಕಾಣುತ್ತದೆ ಎನ್ನುವಂತಹ, ಸುಲಭವಾಗಿ ಹುಡುಕಬಹುದಾದ ನೆಬ್ಯುಲ ಇಲ್ಲವೇ ?

ಎರಡನೆಯ ಪ್ರಶ್ನೆಯ ಉತ್ತರ ''ಇವೆ''. ಎಲ್ಲಿ ಎಂಬುದನ್ನು ತಿಳಿಯೋಣ. ಸಾಮಾನ್ಯವಾಗಿ ನಕ್ಷತ್ರಗಳು ಬಿಂದು ಅಥವಾ ಚುಕ್ಕೆಗಳಂತೆ ಕಾಣುವುವು. ದೊಡ್ಡ ದೊಡ್ಡ ದೂರದರ್ಶಕಗಳಿಂದ ನೋಡಿದಾಗ ನಕ್ಷತ್ರ ಹೆಚ್ಚು ಹೆಚ್ಚು ಪ್ರಕಾಶಮಾನವಾಗಿ ಕಾಣುತ್ತದೆಯೇ ಹೊರತು, (ಚಂದ್ರ ಅಥವಾ ಗ್ರಹಗಳಂತೆ) ಬಿಲ್ಲೆಯಂತೆ ಕಾಣುವುದಿಲ್ಲ. ಅವುಗಳಿರುವ ಅಗಾಧ ದೂರದ ಕಾರಣ ಅವುಗಳ ಅತಿ ಸಣ್ಣ ಕೋನೀಯ ಗಾತ್ರವನ್ನು ವರ್ಧಿಸುವುದು ಸಾಧ್ಯವೇ ಇಲ್ಲ. ಆದ್ದರಿಂದ ದೂರದರ್ಶಕದ ಮೂಲಕ ನೋಡಿದಾಗ ಚುಕ್ಕೆಯಂತೆ ಕಾಣದ ಕಾಯಗಳನ್ನು ಪ್ರತ್ಯೇಕಿಸಬಹುದು. ಚಾರ್ಲ್ಸ್ ಮೆಸಿಯರ್ ಮಾಡಿದ್ದು ಇದನ್ನೇ. ಚುಕ್ಕೆಯಂತಿಲ್ಲದೆ ಅದು ಹೇಗೆ ಕಾಣಬಹುದು ? ನಿಮ್ಮ ದೂರದರ್ಶಕ ಅಥವಾ ದುರ್ಬೀನಿನ ಸಾಮರ್ಥ್ಯಕ್ಕೆ ಅನುಗುಣವಾಗಿ ಅದು ಮೋಡದಂತೆ ಕಾಣಬಹುದು, ಹೊಗೆಯಂತೆ ಕಾಣಬಹುದು, ಹತ್ತಿಯ ತುಣುಕಿನಂತೆಯೂ ಕಾಣಬಹುದು. ಇವುಗಳನ್ನು ನೆಬ್ಯುಲ ಎಂದೇ ಕರೆದಿದ್ದಾರೆ. ಇದು ಮೊದಲನೆಯ ಪ್ರಶ್ನೆಯ ಉತ್ತರ




*ಈ ನಕ್ಷೆ ಫೆಬ್ರವರಿ ೧೫ಕ್ಕೆ ಅನ್ವಯವಾಗುವುದಾದರೂ ಚಂದ್ರನ ಸ್ಥಾನದ ಹೊರತಾಗಿ ತಿಂಗಳುದ್ದಕ್ಕೂ ಸಂಜೆ ಬಳಸಬಹುದು*

ಒರೈಯನ್ ನೆಬ್ಯುಲ ಎಂಬುದೊಂದು ನೆಬ್ಯುಲ. ಇದು ಹೆಸರೇ ಸೂಚಿಸುವಂತೆ ಒರೈಯನ್ ಪುಂಜದಲ್ಲಿದೆ. ಅಲ್ಲಿ ಮಹಾವ್ಯಾಧನ ಆಕೃತಿಯನ್ನು ಕಲ್ಪಿಸಿಕೊಳ್ಳಿ. ಆಯತಾಕಾರದ ನಾಲ್ಕು ಮೂಲೆಗಳಲ್ಲಿ ಎರಡು ಆತನ ಭುಜ, ಇನ್ನೆರಡು ಆತನ ಕಾಲುಗಳಾದರೆ, ಮಧ್ಯದ ಮೂರು ಚುಕ್ಕೆಗಳು ಆತನ ಸೊಂಟ ಪಟ್ಟಿಯನ್ನು ಸೂಚಿಸುತ್ತವೆ. ಈ ಸೊಂಟದ ಪಟ್ಟಿಗೆ ಇಳಿಬಿಟ್ಟ ಕತ್ತಿಯೊಂದನ್ನು ಕಲ್ಪಿಸಿಕೊಳ್ಳಲು ಕೆಲವು ಕ್ಷೀಣ ನಕ್ಷತ್ರಗಳಿವೆ. ಆ ಭಾಗವನ್ನು ದುರ್ಬೀನಿನಿಂದ ಸೂಕ್ಷ್ಮವಾಗಿ ಗಮನಿಸಿ. ಅಲ್ಲಿದೆ ಒರೈಯನ್


**ಡಾ|| ಬಿ. ಎಸ್. ಶೈಲಜಾ**


ನೆಬ್ಯುಲ. ದೂರದರ್ಶಕದ ಮೂಲಕ ನೋಡಿದಿರಾದರೆ ಅಲ್ಲಿ ನಾಲ್ಕು ನಕ್ಷತ್ರಗಳ ಪುಟ್ಟ ಟ್ರೆಪಿಝಿಯಂ ಕಾಣುವುದು. ತದೇಕಚಿತ್ತರಾಗಿ ಗಮನಿಸಿದರೆ ಈ ನಾಲ್ಕನ್ನು ಆವರಿಸಿರುವ ಮೋಡದಂತಹ ನೆಬ್ಯುಲ ಗೋಚರಿಸುವುದು.

ಸುಮಾರು ನೂರು ವರ್ಷಗಳ ಹಿಂದಿನವರೆಗೆ ನೆಬ್ಯುಲ ಎಂಬುದು ಸಾಧಾರಣ ವರ್ಗವಾಗಿತ್ತು. ದೊಡ್ಡ ದೊಡ್ಡ ದೂರದರ್ಶಕಗಳು ಬಳಕೆಯಾದಂತೆ, ಜೊತೆಗೇ ಹೊಸ ಹೊಸ ತಂತ್ರಜ್ಞಾನಗಳ ಸಹಾಯ ಒದಗಿದಂತೆ ನೆಬ್ಯುಲಗಳ ರಚನೆಯ ಅರಿವು ಮೂಡತೊಡಗಿತು. ಉದಾಹರಣೆಗೆ ಒರೈಯನ್ ನೆಬ್ಯುಲಕ್ಕೂ ಏಡಿಗಂತಿ ನೆಬ್ಯುಲಕ್ಕೂ ಅಗಾಧ ವ್ಯತ್ಯಾಸವಿದೆ. ಹಿಂದೆ ತಿಳಿಸಿದಂತೆ ಏಡಿಗಂತಿ ಎಂಬುದು ನಕ್ಷತ್ರದ ಅವಸಾನದ ಅವಶೇಷ. ಆದರೆ ಒರೈಯನ್ ನೆಬ್ಯುಲ ನಕ್ಷತ್ರಗಳ ಶಿಶುಪಾಲನಾ ಕೇಂದ್ರ. ಇಲ್ಲಿ



ಎಳೆಯ ನಕ್ಷತ್ರಗಳ ರಚನೆ ಬಿರುಸಾಗಿ ನಡೆದಿದೆ. ಇನ್ನು ಕೆಲವೇ ಮಿಲಿಯನ್ ವರ್ಷಗಳಲ್ಲಿ ಈ ಹೊಸ ನಕ್ಷತ್ರಗಳು ಬೆಳಕು ಚೆಲ್ಲತೊಡಗುವುವು.

ಸುಮಾರು ೫೦ ವರ್ಷಗಳಿಗೂ ಹಿಂದೆ ಪ್ರಕಟವಾಗಿರುವ ಯಾವುದೇ ಖಗೋಳ ವಿಜ್ಞಾನದ ಪುಸ್ತಕದಲ್ಲಿ ಆಂಡ್ರೋಮಿಡಾ ನೆಬ್ಯುಲ ಎಂಬ ಪದ ಕಾಣಬಹುದು. ಇದನ್ನು ಇಂದು ನಾವು ಗ್ಯಾಲಕ್ಸಿ ಎಂದು ಗುರುತಿಸುತ್ತೇವೆ. ಬಿಲಿಯನ್‌ಗಟ್ಟಲೆ ನಕ್ಷತ್ರಗಳ ಸಮೂಹವಾದ, ನಮ್ಮ ಆಕಾಶಗಂಗೆಯಂತಹುದೇ ಇನ್ನೊಂದು ಗ್ಯಾಲಕ್ಸಿ ಇದು. ವಿದ್ಯುತ್ ದೀಪದ ಸೋಂಕಿಲ್ಲದ ಸ್ಥಳಗಳಿಂದ ಇದನ್ನು ಬರಿಗಣ್ಣಿಂದ ಗುರುತಿಸಬಹುದು. ಪೆಗಸಸ್ (ನಕುಲ) ಚೌಕದಿಂದ ಕಾಸಿಯೋಪಿಯ (ಕುಂತಿ)ವರೆಗಿನ ಭಾಗವನ್ನು ಸೂಕ್ಷ್ಮವಾಗಿ ಗಮನಿಸಿ. ನಕ್ಷೆಯಲ್ಲಿ ದ್ರೌಪದಿ ಎಂಬ ಪದ ಬರೆದಿರುವ ಸ್ಥಳದಲ್ಲೇ ಇದೆ ಈ ಗ್ಯಾಲಕ್ಸಿ.

ಇನ್ನು ಗ್ರಹಗಳ ಬಗ್ಗೆ ತಿಳಿಯೋಣ. ಸೂರ್ಯಾಸ್ತವಾಗುತ್ತಿದ್ದಂತೆ ಪೂರ್ವದಲ್ಲಿ ಕಾಣುವ ಗ್ರಹ ಶನಿ. ಇದರ ಸ್ಥಾನದಲ್ಲಿ ಹೆಚ್ಚಿನ ವ್ಯತ್ಯಾಸ ವೇನಿಲ್ಲವಾದದ್ದರಿಂದ ಕಳೆದ ತಿಂಗಳು ಕೊಟ್ಟಿದ್ದ ಚಿತ್ರವನ್ನೇ ಈ ತಿಂಗಳೂ ಬಳಸಬಹುದು. ಭೂಮಿ ಇದನ್ನು ಹಿಂದೆ ಹಾಕಿ ಮುಂದೆ ಓಡಿಬಂದಿದೆ. ಆದ್ದರಿಂದ ಇಲ್ಲಿಯವರೆಗೂ ಇದು ಹಿಂದಕ್ಕೆ ಸರಿಯುತ್ತಿದ್ದಂತೆ ಕಾಣುತ್ತಿತ್ತು. ಇದೇ ಹಿಮ್ಮುಖ ಚಲನೆ. ಇದರ ಮುಕ್ತಾಯದ ಸೂಚಕವಾಗಿ ೨೨ರಂದು ಶನಿ ತಟಸ್ಥವಾಗಲಿದೆ. ಆಮೇಲೆ ನೇರನಡೆ (ಪಶ್ಚಿಮದಿಂದ ಪೂರ್ವಕ್ಕೆ) ಪ್ರಾರಂಭ. ಕ್ರಮೇಣ ಇದು ಮಿಥುನದತ್ತ ಚಲಿಸುವುದು.

ಸಂಜೆ ಪೂರ್ವದಂಚಿನಲ್ಲಿ ಕಾಣುವ ಇನ್ನೊಂದು ಗ್ರಹ ಗುರು. ಕರ್ಕಾಟಕ ರಾಶಿಯಲ್ಲಿರುವ ಇದು ಅತಿ ಪ್ರಕಾಶಮಾನವಾದ ನಕ್ಷತ್ರ ಸಿರಿಯಸ್ (ಲುಬ್ಧಕ)ಗಿಂತ ಹೆಚ್ಚು ಪ್ರಕಾಶಮಾನವಾಗಿದೆ. ಗ್ರಹ, ನಕ್ಷತ್ರಗಳ ವ್ಯತ್ಯಾಸವನ್ನು ತಿಳಿಯಲು ಇವೆರಡೂ ಉತ್ತಮ ಉದಾಹರಣೆಗಳಾಗುತ್ತವೆ. ದುರ್ಬೀನಿನಲ್ಲಿ ನೋಡಿದಿರಾದರೆ ಗುರುಗ್ರಹದ ಪಕ್ಕದಲ್ಲೇ ಪ್ರೆಸಿಪಿ ಎಂಬ ನಕ್ಷತ್ರ ಗುಚ್ಛವನ್ನು ಕಾಣಬಹುದು. ಸುಮಾರು ೫೦-೬೦ ನಕ್ಷತ್ರಗಳು ಒತ್ತಟ್ಟಿಗೆ ಸೇರಿ ನೆಬ್ಯುಲ ಇರಬಹುದು ಎಂಬ ಭ್ರಮೆಯನ್ನು ಹುಟ್ಟಿಸುವುವು. ಇದನ್ನು ಮೆಸಿಯರ್ ೪೪ (M೪೪) ಎಂಬ ಹೆಸರಿನಿಂದ ಗುರುತಿಸುತ್ತಾರೆ.

ಬೆಳಗಿನಜಾವ ಪೂರ್ವದಂಚಿನಲ್ಲಿ ವೃಶ್ಚಿಕರಾಶಿ ಕಂಗೊಳಿಸುವುದು. ಅದರ ಕೆಂಪು ನಕ್ಷತ್ರ ಜ್ಯೇಷ್ಠಾದ ಪಕ್ಕವೇ ಕಾಣುವ ಕೆಂಪು ಗ್ರಹ ಮಂಗಳ. ದಿನೇ ದಿನೇ ಇದು ನಕ್ಷತ್ರದಿಂದ ದೂರ ಸರಿಯುವುದನ್ನು ಕಾಣಬಹುದು. ಸಮೀಪದಲ್ಲೇ ಕಾಣುವ ಅತಿ ಪ್ರಕಾಶಮಾನವಾದ ಗ್ರಹ ಶುಕ್ರ. ದಿಗಂತದಂಚಿನಲ್ಲಿ ತಿಂಗಳ ಮೊದಲಲ್ಲಿ ಮಾತ್ರ ಕಾಣುವ ಗ್ರಹ ಬುಧ.

ಮಾರ್ಗದರ್ಶಿ ಚಂದ್ರ ಈ ಗ್ರಹಗಳ ಸಮೀಪ ಹಾದುಹೋಗುವ ತಾರೀಖುಗಳಂದು ಆಯಾಗ್ರಹಗಳ ಪರಿಚಯವನ್ನು ಖಚಿತಪಡಿಸಿಕೊಳ್ಳಬಹುದು. ೭ರಂದು ಚಂದ್ರ ಅಪರವಿಯಲ್ಲಿ ೧೯ರಂದು ಪುರರವಿಯಲ್ಲಿ ಇರುತ್ತದೆ. ಈ ಎರಡೂ ದಿನ ಅರ್ಧಚಂದ್ರ ಕಾಣುತ್ತದೆಯಷ್ಟೇ. ಒಂದೇ ದೂರದರ್ಶಕದ ಮೂಲಕ ಒಂದೇ ಕ್ಯಾಮರಾ ಬಳಸಿ ಈ ಎರಡು ದಿನ ಚಂದ್ರನ ಚಿತ್ರ ತೆಗೆದು ಪರಿಶೀಲಿಸಿ. ಸಣ್ಣ ಪ್ರಮಾಣದ ವ್ಯತ್ಯಾಸ ಸ್ಫುಟವಾಗಿ ಕಂಡುಬರುತ್ತದೆ.

ಕಳೆದ ನವೆಂಬರ್‌ನಲ್ಲಿ ಕಂಡುಹಿಡಿಯಲಾದ NEAT (Near Earth Asteroid Tracking ಎಂಬ ಯೋಜನೆ) ಎಂಬ ಹೆಸರಿನ ಧೂಮಕೇತು ಖಗೋಳಜ್ಞರನ್ನು ಆಕರ್ಷಿಸಿದೆ. ಫೆಬ್ರವರಿ ೧೮ರಂದು ಪುರರವಿ ಬಿಂದುವನ್ನು ತಲುಪುವ ಇದು ಬರಿಗಣ್ಣಿಗೂ ಕಾಣಬಹುದು ಎಂದು ಒಂದು ಲೆಕ್ಕಾಚಾರ. ಸಿಡಿದು ತುಂಡಾಗಬಹುದು ಎಂಬುದು ಇನ್ನೊಂದು ಲೆಕ್ಕಾಚಾರ. ಸಂಜೆಯ ಆಕಾಶದಲ್ಲಿ ಪಶ್ಚಿಮದ ಅಂಚಿನಲ್ಲಿ ಪೆಗಸಸ್‌ನಿಂದ ಕುಂಭರಾಶಿಯ ನಡುವಿನಲ್ಲಿ ಇದನ್ನು ಹುಡುಕಲು ಪ್ರಯತ್ನಿಸಿ. ಹೆಚ್ಚಿನ ಧೂಮಕೇತುಗಳಂತೆ ಇದೂ ಸಂಜೆಗೆಂಪಿನಲ್ಲಿ ಕರಗಿಹೋಗಿ ನಿರಾಶೆ ಉಂಟುಮಾಡಿಬಿಡಬಹುದು.

**ಖಗೋಳ ದಿನಚರಿ**

- ೧ ಅಮಾವಾಸ್ಯೆ (೧೫:೨೦ಕ್ಕೆ)
- ೩ ಬುಧಗ್ರಹ ವೀಕ್ಷಣೆಗೆ ಒಳ್ಳೆಯ ಅವಕಾಶ ಗರಿಷ್ಠ ಉನ್ನತಕೋನ (೨೫ ಡಿಗ್ರಿ)
- ೭ ಚಂದ್ರ ಅಪರವಿ ಬಿಂದುವಿನಲ್ಲಿ (೪೦೪೫೧೧ ಕಿ.ಮೀ. ದೂರ)
- ೯ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ)
- ೧೨ ಚಂದ್ರ-ಶನಿ ನಡುವೆ ಕನಿಷ್ಠಕೋನ
- ೧೫ ಚಂದ್ರ-ಗುರು ನಡುವೆ ಕನಿಷ್ಠಕೋನ
- ೧೭ ಹುಣ್ಣಿಮೆ (೦೪:೨೩ಕ್ಕೆ)
- ೧೯ ಚಂದ್ರ ಪುರರವಿ ಬಿಂದುವಿನಲ್ಲಿ (೩೬೪೪೮೪ ಕಿ.ಮೀ. ದೂರ)
- ೨೨ ಶನಿಗ್ರಹ ತಟಸ್ಥ ಹಿನ್ನಡೆಯ ಮುಕ್ತಾಯ
- ೨೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)
- ೨೫ ಚಂದ್ರ-ಮಂಗಳಗಳ ನಡುವೆ ಕನಿಷ್ಠಕೋನ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

## ಸುದ್ದಿ ಚಿತ್ರ



ಗುಲಬರ್ಗಾದಲ್ಲಿ 'ಜಾಗತೀಕರಣ ಸಮಸ್ಯೆ - ಸವಾಲುಗಳು' ವಿಚಾರ ಸಂಕಿರಣ ಮತ್ತು 'ಜಾಗತೀಕರಣ' ಪುಸ್ತಕ ವಿಮರ್ಶೆ ಕಾರ್ಯಕ್ರಮ ನಡೆಯಿತು. 'ಹೊಸತು' ಸಂಪಾದಕರಾದ ಡಾ|| ಜಿ. ರಾಮಕೃಷ್ಣ, ಪ್ರೊ|| ಆರ್. ಕೆ. ಹುಡಗಿ, ಪ್ರೊ|| ಬಿ. ಕೃಷ್ಣಮೂರ್ತಿ, ಪ್ರೊ|| ಪ್ರಭು ಕಾನಾಪುರೆ ಮತ್ತು ಇತರರು ಭಾಗವಹಿಸಿದ್ದರು.



"ಹೊಸತು" ತಿಂಗಳ ಪತ್ರಿಕೆ ವಾಚಕರು ದಿನಾಂಕ ೫.೧.೨೦೦೩ರಂದು ಗುಲಬರ್ಗಾದಲ್ಲಿ ನಡೆದ ಸಂಪಾದಕರೊಡನೆ ಸಮಾವೇಶ.

ವೇದಿಕೆಯ ಮೇಲೆ ಪ್ರೊ|| ಆರ್. ಕೆ. ಹುಡಗಿ, ಡಾ|| ಜಿ. ಆರ್., ಕಥೆಗಾರ ಶ್ರೀ ಚಿತ್ರಶೇಖರ ಕಂಠಿ ಮತ್ತು ಡಾ|| ನಾಗಾಬಾಯಿ ಬುಳ್ಳಾ.



# ಮೂರು ಗುಡ್ಡಗಳಲ್ಲಿ ಬಾಲ್ಯದ ದಿನಗಳು

■ ಅಡ್ದೂರು ಕೃಷ್ಣರಾವ್

**ಮಂ**ಗಳೂರಿನಲ್ಲಿ ಪ್ರಾಥಮಿಕ ಶಾಲೆಯಲ್ಲಿ ಕಲಿಯುತ್ತಿದ್ದಾಗ ನಾನೂ ತಮ್ಮನೂ ಬೇಸಿಗೆ ರಜೆಗಾಗಿ ತವಕದಿಂದ ಕಾಯುತ್ತಿದ್ದೆವು. ಶಾಲೆ ಮುಗಿದ ದಿನವೇ ಸಂಜೆ ಅಮ್ಮನೊಂದಿಗೆ ನಮ್ಮೂರು ಅಡ್ದೂರಿಗೆ ಹೊರಡುತ್ತಿದ್ದೆವು. ಬಸ್ಸಿನಲ್ಲಿ ಒಂದೂವರೆ ತಾಸು ಪ್ರಯಾಣಿಸಿ, ಗುರುಪುರದಲ್ಲಿ ಇಳಿಯುತ್ತಿದ್ದೆವು. ಅಲ್ಲಿಂದ ಅಡ್ದೂರಿಗೆ ಮೂರು ಕಿಲೋಮೀಟರ್ ನಡಿಗೆಯ ಹಾದಿ. ಕಾಲು ಸಂಕಗಳನ್ನು ದಾಟಿ, ಗದ್ದೆಗಳ ಹುಣಿಗಳಲ್ಲಿ ಸಾಗಿ, ಅಡ್ದೂರು ಹತ್ತಿರವಾಗುತ್ತಿದ್ದಂತೆ ಅಲ್ಲಿನ ಮೂರು ಗುಡ್ಡಗಳು ಕೈಬೀಸಿ ಕರೆಯುತ್ತಿದ್ದವು. ಆದರೆ ಅಜ್ಜನ ಕಾಲದ ಎಂಬತ್ತು ವರುಷ ಹಳೆಯ ಮನೆ ತಲಪಿದಾಗ ಕತ್ತಲಾಗಿರುತ್ತಿತ್ತು. ಹಾಗಾಗಿ ಗುಡ್ಡಗಳಲ್ಲಿ ಸುತ್ತಾಡಲು ಮರುದಿನದವರೆಗೂ ಕಾಯಬೇಕಾಗುತ್ತಿತ್ತು.

**ಕಲ್ಲುಗುಡ್ಡ ಸವಾರಿ**

ಮರುದಿನ ಸಂಜೆಯಾಗುತ್ತಿದ್ದಂತೆ ಗುಡ್ಡ ತಿರುಗಲು ಹೊರಡುತ್ತಿದ್ದೆವು. ''ಗುಡ್ಡೆಲೆ ಕಣ್ಣಂಡು ಹೋಗ್ಗು, ಬಿದ್ದು ಗಾಯ ಮಾಡಿಣತಿ'' ಎಂದು ಅಮ್ಮ ಎಚ್ಚರಿಸುತ್ತಿದ್ದರು. ನಾಯಿ 'ಕೂರ' ನಮ್ಮ ಜೊತೆಗಿರುತ್ತಿತ್ತು.

ಮನೆಯ ಹಿಂಬದಿಯ ಹಟ್ಟಿ ದಾಟಿ, ಕಾಲು ಹಾದಿಯಲ್ಲಿ ಐದು ನಿಮಿಷ ನಡೆದರೆ ಕಲ್ಲಗುಡ್ಡ ತಲಪುತ್ತಿದ್ದೆವು. ಗುಡ್ಡದಲ್ಲಿ ಹಲವಾರು ಗೇರು ಮರಗಳು. ಗೇರು ಹಣ್ಣೆಲ್ಲ ಬಾವಲಿಗಳ ಹಾಗೂ ದಾರಿಹೋಕರ ಪಾಲು.

ಕೆಲವೊಮ್ಮೆ ಹಾದಿಯಲ್ಲಿ ಉದ್ದ ಬಾಲದ ಕರಿ ಮುಖದ ಮಂಗಗಳು ಕಾಣಸಿಗುತ್ತಿದ್ದವು. ನಾವು ಹಳ್ಳಿಯಲ್ಲಿ ಅವಕ್ಕೆ ಮಂಗ ಎಂದಲ್ಲ, ''ಮುಜ್ಜು'' ಎನ್ನುತ್ತೇವೆ. ನಮ್ಮನ್ನು ಕಂಡರೆ ಅವು ಹೆದರುತ್ತಿರಲಿಲ್ಲ. ಮರದಲ್ಲಿ ಕೂತು ಪಿಳಿಪಿಳಿ ಕಣ್ಣು ಬಿಟ್ಟು ನೋಡುತ್ತಿದ್ದವು. ನಾವು ಕಲ್ಲೆಸೆದರೆ ಅಥವಾ ಡಬ್ಬ ಬಡಿದು ಸದ್ದು ಮಾಡಿದರೆ, ದೂರಕ್ಕೆ ಓಡಿಹೋಗಿ, ಮರವೇರಿ ಕೂತು ನೋಡುತ್ತಿದ್ದವು.

ಆ ಗುಡ್ಡದಲ್ಲಿ ಎತ್ತರದ ಜಾಗದಲ್ಲಿ ಎರಡಾಳೆತ್ತರದ ಎರಡು ಕಲ್ಲುಗಳು. ಒಂದು ಕಲ್ಲಿನಲ್ಲಿ ತುಸು ತಗ್ಗಿನ ಜಾಗವಿತ್ತು. ಅಲ್ಲಿ ಕಲ್ಲಿಗೆ ಬೆನ್ನಾಗಿಸಿ ಪಶ್ಚಿಮಕ್ಕೆ ಮುಖ ಮಾಡಿ ಕೂತು ಸುತ್ತಲಿನ ವಿಹಂಗಮ ನೋಟ ನೋಡುತ್ತಿದ್ದರೆ ಹೊತ್ತು ಸರಿದದ್ದೇ ತಿಳಿಯುತ್ತಿರಲಿಲ್ಲ.

ದೂರದಲ್ಲಿ ಗುರುಪುರ ನದಿ ಅಡ್ದೂರನ್ನು ಸುತ್ತಿಬಳಸಿ ಸಾಗುತ್ತಿತ್ತು. ಬೇಸಿಗೆಯಲ್ಲಿ ನೀರಿನ ಹರಿವಿಲ್ಲದೆ ನದಿಯ ಪಾತ್ರ ಕೇವಲ ಮರಳಿನ ರಾಶಿಯಾಗಿ ಕಾಣಸುತ್ತಿತ್ತು. ಕಲ್ಲ ಗುಡ್ಡದಿಂದ ನದಿಯವರೆಗೂ ಸಾಲುಸಾಲು ಗದ್ದೆಗಳು. ಗದ್ದೆಗಳಲ್ಲಿ ಕೊಯ್ಲಿಗೆ ಸಿದ್ಧವಾಗಿ ನಿಂತ ಕೊಳಕೆ ಭತ್ತದ ಪೈರು. ನಡುನಡುವೆ ಕೊಯ್ಲು ಮುಗಿದಿದ್ದ ಗದ್ದೆಗಳು ಬೋಳುಬೋಳಾಗಿ ಕಾಣಸುತ್ತಿದ್ದವು.

ಕೆಲವು ಗದ್ದೆಗಳಲ್ಲಿ ಸೌತೆಕ್ಕಾ ಬೀಳಲುಗಳು. ಅವುಗಳಲ್ಲಿ ಹಳದಿ ಬಣ್ಣಕ್ಕೆ ತಿರುಗುತ್ತ ಮಾಗುತ್ತಿದ್ದ ಸೌತೆಕ್ಕಾಗಳು. ಬಲಪಕ್ಕದಲ್ಲಿ ನೀರು ತುಂಬಿದ ಹೊಂಡಗಳು. ಅವೆಲ್ಲ ಹಂಚಿನ ಕಾರ್ಖಾನೆಗಳಿಗಾಗಿ ಆವೆ ಮಣ್ಣು ಅಗೆದು ಲಾರಿಯಲ್ಲಿ ಸಾಗಿಸಿದ್ದರಿಂದ ಉಂಟಾದ ಹೊಂಡಗಳು. ಹೊಂಡಗಳ ನೀರಿನಲ್ಲಿ ಆಟವಾಡುವ ಮಕ್ಕಳು. ನೀಲಿ ಬಾನಿನತ್ತ ಕತ್ತೆತ್ತಿದರೆ ವಿರಳವಾಗಿ ಸಾಗುವ ಬಿಳಿಮುದ್ದೆ ಮೋಡಗಳು. ನೋಡುತ್ತ ನೋಡುತ್ತಲಿದ್ದಂತೆ ಕತ್ತಲಾಗಿಬಿಡುತ್ತಿತ್ತು. ಕುರ್ಚಿಗುಡ್ಡ ಎದುರಿನಲ್ಲೇ ಕಾಣಸುತ್ತಿದ್ದರೂ ಹೋಗಿ ಬರಲು ಹೊತ್ತು ಸಾಲುತ್ತಿರಲಿಲ್ಲ.

**ಕುರ್ಚಿ ಗುಡ್ಡ ತಿರುಗಾಟ**

ಮರುದಿನ ಬಿಸಿಲಿಳಿಯುತ್ತಿದ್ದಂತೆಯೇ ಹೊರಡುತ್ತಿದ್ದೆವು. ಅಮ್ಮ ಪುನಃ ಎಚ್ಚರಿಸುತ್ತಿದ್ದರು, ''ಕತ್ತಲೆ ಆಪ್ಟಿಗೆ ಮನೆಗೆ ಬಂದಾಗ್ಲು. ನಿಮ್ಗೆ ಗುಡ್ಡೆಗೆ ಹೋದ್ರೆ ಮನೆಗೆ ಬಪ್ಪುಗೆ ಹೊತ್ತಿಲ್ಲೆ ಗೊತ್ತಿಲ್ಲೆ.''

ಕುರ್ಚಿಗುಡ್ಡೆಗೆ ಕಲ್ಲಗುಡ್ಡೆ ದಾಟಿಯೇ ಹೋಗಬೇಕು. ಹಾದಿಯಲ್ಲಿ ಕಣ್ಣುಗಳ ಹುಡುಕಾಟ - ಯಾವ ಮರದಲ್ಲಾದರೂ ಗೇರುಹಣ್ಣು ಸಿಕ್ಕೀತೇ ಅಂತ. ಇಂದೂ ನಿರಾಶೆಯೇ ಕಾದಿರುತ್ತಿತ್ತು. ಕಲ್ಲಗುಡ್ಡದ ದೊಡ್ಡ ಕಲ್ಲು ಪುನಃ ಆಹ್ವಾನಿಸುತ್ತಿತ್ತು. ಅದನ್ನೇರಿ ಒಂದು ಗಳಿಗೆ ಕೂತಾಗಲೇ ಸಮಾಧಾನ.

ಮತ್ತೆ ಕಲ್ಲಗುಡ್ಡವಿಳಿದು ಮುಂದೆ ಸಾಗಿ ಇನ್ನೂ ಎತ್ತರದ ಕುರ್ಚಿ ಗುಡ್ಡ ಏರುತ್ತಿದ್ದೆವು. ಆ ಗುಡ್ಡದಲ್ಲಿ ಎಲ್ಲಿ ಕಂಡರಲ್ಲಿ ಕೇಪಳೆ ಹೂಗಳ ಗಿಡಗಳು. ಎಂಥ ಬಿಸಿಲಿಗೂ ಬಾಡದ

ಹಸುರಾಗಿರುವ ಅದರ ಎಲೆಗಳು. ಹಸುರೆಲೆಗಳ ನಡುವಲ್ಲಿ ಗೊಂಚಲು ಗೊಂಚಲು ಕಡುಗೆಂಪು ಹೂಗಳು. ಕೆಲವು ಹೂಗಿಡಗಳಲ್ಲಿ ಕಡಲೆ ಗಾತ್ರದ ದುಂಡಗಿನ ಕೆಂಪು ಹಣ್ಣುಗಳು. ಹಣ್ಣು ಕಿತ್ತು ಬಾಯಿಗಿಟ್ಟು ಚಪ್ಪರಿಸುವಾಗಿನ ಖುಷಿ!

ಯಾರ್‍ಯಾರೋ ನಡೆದು ಮೂಡಿದ್ದ ಹಾದಿಯಲ್ಲಿ ಸುತ್ತಿ ಬಳಸಿ ಗುಡ್ಡವೇರಿ ನೆತ್ತಿಗೆ ಬಂದು, ಅಲ್ಲಿದ್ದ ಎರಡಾಳೆತ್ತರದ ಕಲ್ಲನ್ನು ನೋಡುತ್ತ ನಿಲ್ಲುತ್ತಿದ್ದೆವು. ಈ ಕಲ್ಲನ್ನು ಸುಲಭದಲ್ಲಿ ಏರಲಾಗುತ್ತಿರಲಿಲ್ಲ. ಕಷ್ಟಪಟ್ಟು ಕಲ್ಲೇರಿದಾಗ ಅದರಲ್ಲೊಂದು ಥೇಟ್ ಕುರ್ಚಿಯಂತಿರುವ ತಗ್ಗು. ಅದು ಪ್ರಕೃತಿಯೇ ಕೊಡುಗೆಯಾಗಿತ್ತ ಪೀಠ. ಯಾವ ರಾಜಕಾರಣಿಗೂ ಬೇಡವಾದ ಆ ಕಲ್ಲಿನ ಕುರ್ಚಿ, ನಮಗಂತೂ ಪುಕ್ಕಟೆ ಸಿಕ್ಕಿದ ಆಸನ. ಅದರಲ್ಲಿ ಕೂರಲು ನಮ್ಮೊಳಗೆ ಪೈಪೋಟಿ.

ಇಷ್ಟೆಲ್ಲ ಆಗುವಾಗ ದೂರದ ಅರಬ್ಬಿ ಸಮುದ್ರದಲ್ಲಿ ಸೂರ್ಯ ಮುಳುಗುತ್ತಿದ್ದ. ಮುಸ್ಸಂಜೆ ಕಳೆದು ನಿಧಾನವಾಗಿ ಕತ್ತಲಾವರಿಸುತ್ತಿತ್ತು. ಅಮ್ಮನ ಬಯ್ಗುಳ ಬೇಡವೆಂದು ಬೇಡಿಕೊಂಡೇ ಮನೆಗೆ ಹಿಂತಿರುಗುತ್ತಿದ್ದೆವು.




**ಬೊಬ್ಬರ್ಯನ ಗುಡ್ಡ ಸುತ್ತಾಟ**

ಮಾರನೆಯ ದಿನ ಮೂರನೆಯ ಗುಡ್ಡದ ಸುತ್ತಾಟಕ್ಕಾಗಿ ಬೆಳಿಗ್ಗೆಯಿಂದಲೇ ತಯಾರಿ. ಕಳೆದ ವರುಷ ಹೋಗಿದ್ದಾಗ ಅಲ್ಲಿ ನೋಡಿದ್ದರ ನೆನಪುಗಳು. ಸಂಜೆಯಾಗುತ್ತಿದ್ದಂತೆ ಹಾಲು ಕುಡಿದು, ತಿಂಡಿ ತಿಂದು ಹೊರಡುತ್ತಿದ್ದೆವು. ಅಮ್ಮ ಮರೆಯದೆ ಎಚ್ಚರಿಸುತ್ತಿದ್ದರು, ''ಕಣ್ಣಂಡು ಹೋಯ್ನಿ, ಹಾವು ಗೀವು ಇಕ್ಕು. ಗುಡ್ಡೆಲೆ ಭೂತದ ಗುಡಿಯೊಳಗೆ ಹೋಗಲೆ. ನಾ ಹೇಳಿದು ನೆಂಪಿರಡು.''

ಇದು ಕುರ್ಚಿಗುಡ್ಡೆಗಿಂತಲೂ ಎತ್ತರದ ಗುಡ್ಡ, ಗುಡ್ಡವೇರಲು ಕಡಿದಾದ ದಾರಿ. ಹಾದಿಯಲ್ಲಿ ಹಲಸು, ಮಾವು, ಗೇರು, ನೇರಳೆ, ಪೆಜಕ್ಕಾ ಇತ್ಯಾದಿ ಮರಗಳು. ಕುರುಚಲು ಗಿಡಗಳು. ಇಲ್ಲೂ ಬಹುಸಂಖ್ಯೆಯಲ್ಲಿ ಕೇಪಳೆ ಹೂಗಿಡಗಳು. ಅಲ್ಲಲ್ಲಿ ಗೆದ್ದಲು ಹುತ್ತಗಳು.

ಕಲ್ಲು ತುಂಬಿದ ಹಾದಿಯಲ್ಲಿ ಗುಡ್ಡವೇರುವಾಗ ಏದುಸಿರು ಸುಧಾರಿಸಿಕೊಳ್ಳಲು ನೆಲದಲ್ಲೇ ಕೂರಲು ಮನವೊಪ್ಪದು. ಯಾವುದಾದರೂ ಮರದ ಗೆಲ್ಲನ್ನೇರಿ ಕೂತಾಗಲೇ ಆರಾಮ. ಹಾಗೆ ಕೂತಾಗ, ಗುಡ್ಡವನ್ನು ಬಳಸಿ ಸಾಗುವ ರಸ್ತೆಯಲ್ಲಿ ಅಪರೂಪಕ್ಕೊಮ್ಮೆ ಲಾರಿಯೊಂದು ಕಾಣಿಸುತ್ತಿತ್ತು (ಆಗ ಮೂವತ್ತು ವರುಷಗಳ ಮುಂಚೆ, ಬಸ್ಸು, ಕಾರು, ರಿಕ್ಷಾ, ಟೆಂಪೋ, ಬೈಕ್, ಸ್ಕೂಟರ್ ಇವೆಲ್ಲ ಅಡ್ಡೂರಿಗೆ ಬಂದಿರಲಿಲ್ಲ.)

ಹಾದಿಯಲ್ಲಿ ಓತಿ ಕಾಣಲು ಸಿಕ್ಕೇ ಸಿಗುತ್ತಿತ್ತು. ಕೆಲವೊಮ್ಮೆ ಕೇರೆ ಹಾವು ಕಾಣಸಿಗುತ್ತಿತ್ತು. ಆಗೆಲ್ಲ ಅಮ್ಮನ ಎಚ್ಚರಿಕೆ ನೆನಪಾಗುತ್ತಿತ್ತು. ನಾಯಿ 'ಕೂರ' ಯಾವಾಗಲೂ ನಮ್ಮ ಮುಂದೆ ಸಾಗುತ್ತಿತ್ತು. ಮೂಗಿನಿಂದ ಮೂಸಿ ನೋಡಿ, ಕುರುಚಲು ಗಿಡ ಅಥವಾ ಮರದ ಬುಡಕ್ಕೆ ಉಚ್ಚೆ ಮಾಡುತ್ತ ಹಿಂದುಳಿದರೂ, ಮತ್ತೆ ಓಡೋಡಿ ಬಂದ, ನಮ್ಮನ್ನು ಹಿಂದಿಕ್ಕಿ ಸಾಗುತ್ತಿತ್ತು.

ಗುಡ್ಡದ ತುದಿಯಲ್ಲಿ ಮಟ್ಟಸ ಜಾಗ. ಅಲ್ಲೊಂದು ಹಳೆಯ ಮಾವಿನ ಮರ. ಅದರ ನೆರಳಿನಲ್ಲಿ ಭೂತದ ಗುಡಿ ಬೊಬ್ಬರ್ಯನ ಗುಡಿ. ಹಳ್ಳಿಯವರು ಆರಾಧಿಸುವ ಭೂತ ಬೊಬ್ಬರ್ಯ. ನಾವು ಗುಡಿಗೆ ಮೂರು ಸುತ್ತು ಹಾಕಿ ನಮಿಸುತ್ತಿದ್ದೆವು.

ಬೊಬ್ಬರ್ಯನ ಗುಡಿಯ ಬಾಗಿಲು ಯಾವಾಗಲೂ ಮುಚ್ಚಿಕೊಂಡಿರುತ್ತದೆ. ಗುಡಿಯೊಳಗೊಂದು ಸಣ್ಣ ಮರದ ಉಯ್ಯಾಲೆ. ವರುಷಕ್ಕೊಮ್ಮೆ ಮಾತ್ರ, ಮೇ ತಿಂಗಳಿನಲ್ಲಿ ಮುಸ್ಸಂಜೆ ಹೊತ್ತಿನಲ್ಲಿ ಗುಡಿಯ ಬಾಗಿಲು ತೆರೆದು, ಭಟ್ಟರು ಭೂತಕ್ಕೆ ಬಡಿಸುತ್ತಾರೆ. ಅಂದು ''ಭೂತಕ್ಕೆ ಬಳಸುವ'' ಆಚರಣೆ ವಿಧಿ ಪ್ರಕಾರ ಜರಗುತ್ತದೆ. ಭೂತಕ್ಕೆ ಅರ್ಪಿಸಲಿಕ್ಕಾಗಿ ಅಕ್ಕಿ ಸೇಮೆಟು ಮಾಡಲಾಗುತ್ತದೆ.

ಬೊಬ್ಬರ್ಯನ ಗುಡ್ಡದಲ್ಲಿ ಮರ ಕಡಿದರೆ ಭೂತದ ಅವಕೃಪೆಗೆ ಒಳಗಾಗುತ್ತಾರೆಂದು ಪ್ರತೀತಿ. ಹಾಗಾಗಿ ಅಲ್ಲಿನ ಗಿಡಮರಗಳು ಹಳ್ಳಿಗರ ಕೊಡಲಿಯಿಂದ ಬಚಾವಾಗಿ ಉಳಿದಿದ್ದವು. ಒಣಗಿ ಮುರಿದ ಗೆಲ್ಲುಗಳನ್ನು ಮಾತ್ರ ಹಳ್ಳಿಗರು ಸೌದೆಗಾಗಿ ಒಯ್ಯುತ್ತಿದ್ದರು.

ಆ ಗುಡ್ಡಕ್ಕೆ ಏರುವಾಗಲೂ, ಗುಡ್ಡದಿಂದ ಇಳಿಯುವಾಗಲೂ ಬೊಬ್ಬರ್ಯನ ಕತೆಗಳದ್ದೇ ನೆನಪು. ಒಮ್ಮೆ ಕತ್ತಲಿನಲ್ಲಿ ಲಾರಿಯೊಂದು ಗುಡ್ಡದ ಪಕ್ಕದಲ್ಲಿ ಸಾಗುವಾಗ ಲಾರಿ ಚಾಲಕನಿಗೆ ಲಾರಿಯ ಎದುರಿನಲ್ಲೇ ವಿಚಿತ್ರ ಆಕಾರವೊಂದು ಕಾಣಿಸಿತಂತೆ. ಅವನು ಗಕ್ಕನೆ ಬ್ರೇಕ್ ಹಾಕಿ, ಕಣ್ಮುಚ್ಚಿ ತೆರೆಯುವಾಗ ಅದು ಕಣ್ಮರೆಯಾಯಿತಂತೆ!

ಕತ್ತಲಾಗುತ್ತಿದ್ದಂತೆ ಗೂಡಿಗೆ ಮರಳುವ ಹಕ್ಕಿಗಳ ಚಿಲಿಪಿಲಿ ಸದ್ದು ಕೇಳುತ್ತ ನಾವೂ ಮನೆಗೆ ಮರಳುತ್ತಿದ್ದೆವು. ಅಮ್ಮ ದೇವರಿಗೆ ದೀಪವಿಟ್ಟು ನಮಿಸಿ, ಚಿಮಿಣಿ ಹಾಗೂ ಲ್ಯಾಂಪ್‌ಗಳನ್ನು ಹಚ್ಚುತ್ತಿದ್ದರು. ಬೊಬ್ಬರ್ಯನ ಗುಡ್ಡಕ್ಕೆ ಹೋಗಿ ಬಂದ ದಿನ ರಾತ್ರಿಯೆಲ್ಲ ದೀಪಗಳ ಮಂದ ಬೆಳಕಿನಲ್ಲಿ ನಮ್ಮ ಯೋಜನೆಗಳಲ್ಲಿ ಬೊಬ್ಬರ್ಯನ ನಿಗೂಢತೆ ಬೆಳೆಯುತ್ತಿತ್ತು. ಹಾಗಾಗಿ ಬೇಗನೇ ನಿದ್ದೆಯೂ ಬರುತ್ತಿರಲಿಲ್ಲ.

ಈಗ ಯಾವುದೇ ಗುಡ್ಡ ಕಂಡಾಗ ನನಗೆ ನಮ್ಮೂರಿನ ಗುಡ್ಡಗಳ ಚಿತ್ರ ಕಣ್ಣೆದುರು ಬರುತ್ತದೆ. ಆ ಗುಡ್ಡಗಳಲ್ಲಿ ತಿರುಗಾಡುತ್ತ ಕಳೆದ ನನ್ನ ಬಾಲ್ಯದ ದಿನಗಳು ನೆನಪಿಗೆ ಬರುತ್ತವೆ. ನಮ್ಮೂರಿನ ಆ ಮೂರು ಗುಡ್ಡಗಳಲ್ಲಿ ಹಸಿರು ಈಗಲೂ ಉಳಿದಿದೆ. ಹಾಗಾಗಿ ನನ್ನದೊಂದು ಹಾರೈಕೆ: ಆ ಗುಡ್ಡಗಳ ಹಸಿರು ಹಾಗೇ ಇರಲಿ, ಇಂದಿನ ಮಕ್ಕಳ ಬೇಸಿಗೆ ರಜದ ದಿನಗಳೂ ಆ ಗುಡ್ಡಗಳ ಸುತ್ತಾಟದಿಂದ ಹಸನಾಗಲಿ. ಬಾಲ್ಯದ ಆ ಸುತ್ತಾಟದ ನೆನಪುಗಳು ಬಾಳ ಬೇಸಿಗೆಯಲ್ಲಿ ಅವರಿಗೂ ತಂಪೆರೆಯಲಿ.

ಅಡ್ಡೂರು ಕೃಷ್ಣರಾವ್
ಮ್ಯಾನೇಜರ್, ಕಾರ್ಪೊರೇಶನ್ ಬ್ಯಾಂಕ್
ಎಂ. ಜಿ. ರಸ್ತೆ ಚಿಕ್ಕಮಗಳೂರು - ೫೭೭ ೧೦೧.

## ವಿಶ್ವ ವೀಕ್ಷಣೆ

# ಜಗತ್ತನ್ನು ಉಳಿಸಲು ನ್ಯೂಕ್ಲಿಯರ್ ಅಸ್ತ್ರ ವಿಸರ್ಜನೆ ಅಗತ್ಯ

**ಸೀಯಾರ್ಕೆ**

**ಉ**ತ್ತರ ಕೊರಿಯ ಈಗ ನ್ಯೂಕ್ಲಿಯರ್ ಅಸ್ತ್ರಗಳನ್ನು ಹೊಂದಿರುವ ರಾಷ್ಟ್ರಗಳ ಸಾಲಿಗೆ ಸೇರಿದೆ. ಮುಂದೆ ಇನ್ನಷ್ಟು ರಾಷ್ಟ್ರಗಳೂ ಸೇರಿಯಾವು. ಈ ಬೆಳವಣಿಗೆ ಮಾನವ ಕುಲದ, ಸಕಲಜೀವ ರಾಶಿಯ ಅಸ್ತಿತ್ವಕ್ಕೇ ಗಂಡಾಂತರಕಾರಿ. ಅರ್ಧ ಶತಮಾನಕ್ಕೂ ಹಿಂದೆಯೇ, ಎರಡನೇ ಮಹಾಯುದ್ಧದ ಕೊನೆಯಲ್ಲಿ ಈ ಸಾಮೂಹಿಕ ವಿನಾಶಕಾರಿ ಅಸ್ತ್ರದ ಶಕ್ತಿ ಪರಿಚಯವಾಯಿತು. ಈವರೆಗೆ ಈ ಪಾತಕವನ್ನು ಎಸಗಿದ ಒಂದೇ ರಾಷ್ಟ್ರ ಅಮೆರಿಕ. ಜಪಾನಿನ ಹಿರೋಷಿಮಾ ಮತ್ತು ನಾಗಾಸಾಕಿಗಳ ಮೇಲೆ ಹಾಕಿದ ಪರಮಾಣು ಅಸ್ತ್ರದ ದುಷ್ಪರಿಣಾಮ ಇನ್ನೂ ಜೀವಂತ. ಇಡೀ ಜಗತ್ತನ್ನು ಬೆದರಿಸಿ ಅಂಕೆಯಲ್ಲಿರಿಸಿಕೊಳ್ಳುವ ದಾಹದಿಂದ ಇದ್ದ ಅಮೆರಿಕ ಈ ಕೃತ್ಯ ಎಸಗಿದ್ದು ಪ್ರಯೋಗಾತ್ಮಕವಾಗಿ, ಯುದ್ಧ ಮುಕ್ತಾಯವಾಗುತ್ತಿದ್ದು ಶತ್ರು ಶರಣಾಗತನಾಗುತ್ತಿದ್ದಾಗ. ಪರಮಾಣು ಅಸ್ತ್ರದ ಒಡೆತನದಿಂದ ಬೀಗುತ್ತಿದ್ದ ಅಮೆರಿಕದ ಏಕಸ್ವಾಮ್ಯ ಹೆಚ್ಚು ಕಾಲ ಉಳಿಯಲಿಲ್ಲ. ಅಂದು ಅಮೆರಿಕಾಗೆ ಪ್ರತಿಸ್ಪರ್ಧಿಯಾಗಿದ್ದ ಸೋವಿಯೆತ್ ಒಕ್ಕೂಟ ನ್ಯೂಕ್ಲಿಯರ್ ಅಸ್ತ್ರದ ಪ್ರಯೋಗ ನಡೆಸಿ ಸವಾಲೊಡ್ಡಿತು. ಅಲ್ಲಿಂದ ಪ್ರಾರಂಭವಾದ್ದು ಇತಿಮಿತಿ ಇಲ್ಲದ ಶಸ್ತ್ರಾಸ್ತ್ರ ಪೈಪೋಟಿ. ಇಡೀ ಭೂಮಂಡಲವನ್ನೇ ಹಲವುಪಟ್ಟು ದೂಳೆಬ್ಬಿಸುವ ಸಾಮರ್ಥ್ಯ ಹೊಂದಿರುವ ನ್ಯೂಕ್ಲಿಯರ್ ಅಸ್ತ್ರಗಳ ದಾಸ್ತಾನು ಇಂದೂ ಅಮೆರಿಕ ಮತ್ತು ರಷ್ಯಾಗಳ ಬಳಿ ಇವೆ. ಸಾಕಷ್ಟು ಕಾಲ ಕೆಲವೇ ಶ್ರೀಮಂತ ರಾಷ್ಟ್ರಗಳ ಗುತ್ತೆದಾರಿಯಾಗಿದ್ದ ನ್ಯೂಕ್ಲಿಯರ್ ಅಸ್ತ್ರಗಳು ಈಗ ನಿಧಾನವಾಗಿ ಇತರ ರಾಷ್ಟ್ರಗಳಿಗೂ ಹರಡುತ್ತಿವೆ. ಹೀಗೆ ಕಳೆದ ಐವತ್ತೆಂಟು ವರ್ಷಗಳಿಂದ ಪ್ರಪಂಚದ ಜನ ನ್ಯೂಕ್ಲಿಯರ್ ಅಸ್ತ್ರಗಳ ಭೀತಿಯ ನೆರಳಿನಲ್ಲಿಯೇ ಬಾಳು ಸಾಗಿಸುತ್ತಿದ್ದಾರೆ.

ಪರಸ್ಪರ ಸರ್ವನಾಶದ ಭಯವೇ ಇಂದಿನವರೆಗೆ ನ್ಯೂಕ್ಲಿಯರ್ ಯುದ್ಧಕ್ಕೆ ತಡೆಯಾಗಿದೆ. ಆದರಿಂದಲೇ ಬಂದದ್ದು ಅದಕ್ಕೆ ದಾಳಿ ನಿರೋಧಕ ಪಟ್ಟ. ಆದರೆ ಇದು ಸಾರ್ವಕಾಲಿಕ ಸತ್ಯವೇನಲ್ಲ. ಯಾವುದೇ ಅಸ್ತ್ರವಾಗಲಿ ಅದು ಇರುವುದು ಉಪಯೋಗಿಸುವುದಕ್ಕೇ. ವಿಶ್ವವನ್ನು ನ್ಯೂಕ್ಲಿಯರ್ ಯುದ್ಧದ ಅಂಚಿಗೆ ಅಮೆರಿಕ ಕೊಂಡೊಯ್ದಿದ್ದ ಸಂಭವಗಳನ್ನು ನೆನಪಿಗೆ ತಂದುಕೊಳ್ಳಬಹುದು. ಇಂದು ಹೆಚ್ಚು ಹೆಚ್ಚು ದೇಶಗಳು ಈ ಶಕ್ತಿಯನ್ನು ಪಡೆದುಕೊಂಡಂತೆ ಅದರ ಪ್ರಯೋಗದ ಸಂಭವನೀಯತೆಯೂ ಹೆಚ್ಚುತ್ತ ಹೋಗುವುದರಲ್ಲಿ ಸಂಶಯವಿಲ್ಲ. ನ್ಯೂಕ್ಲಿಯರ್ ತಂತ್ರಜ್ಞಾನ ಕೆಲವೇ ದೇಶಗಳ ಸ್ವತ್ತಾಗಿದ್ದ ಕಾಲವೊಂದಿತ್ತು. ಅದು ಹರಡದಂತೆ ಮಾಡುವುದಕ್ಕಾಗಿಯೇ ವಿಶ್ವಸಂಸ್ಥೆಯ ಆಶ್ರಯದಲ್ಲಿ ರೂಪುಗೊಂಡದ್ದು ಅಣ್ವಸ್ತ್ರ ವಿಸ್ತರಣಾ ನಿರೋಧ ಒಪ್ಪಂದ. ಇದನ್ನು ಎಲ್ಲ ರಾಷ್ಟ್ರಗಳ ಮೇಲೂ ಹೇರಲು ಪ್ರಯತ್ನಿಸಿದ್ದು ಸಾಕಷ್ಟು ಯಶಸ್ವಿ ಆದದ್ದು ಅಮೆರಿಕ ಮತ್ತು ಅಂದಿನ ಸೋವಿಯತ್ ಒಕ್ಕೂಟಗಳೇ. ತಾರತಮ್ಯದಿಂದ ಕೂಡಿದ್ದ ಈ ಒಪ್ಪಂದವನ್ನು ವಿರೋಧಿಸಿದ ದೇಶಗಳು ಕೆಲವು ಮಾತ್ರ , ಅದರಲ್ಲಿ ಭಾರತವೂ ಒಂದು. ಈ ಒಪ್ಪಂದ ಎಷ್ಟು ಪರಿಣಾಮಕಾರಿಯಾಗಿದೆ ಎಂಬುದು ಈಗ ಗೊತ್ತಾಗಿದೆ. ಈ ಒಪ್ಪಂದದ ಪ್ರೇರಕ ರಾಷ್ಟ್ರಗಳೇ ನ್ಯೂಕ್ಲಿಯರ್ ತಂತ್ರಜ್ಞಾನ ಹಾಗೂ ಉಪಕರಣಗಳ ಸೋರಿಕೆಗೆ ಕಾರಣವಾಗಿವೆ. ಸಾಕಷ್ಟು ಹಣ ಚೆಲ್ಲಲು ಸಮರ್ಥವಾಗಿರುವ ದೇಶಗಳು ಇಂದು ನ್ಯೂಕ್ಲಿಯರ್ ರಾಷ್ಟ್ರಗಳ ಪಂಕ್ತಿಗೆ ಸೇರಬಹುದಾಗಿದೆ. ತಾರತಮ್ಯ ಮತ್ತು ದ್ವಿಮುಖ ಧೋರಣೆಗೆ ಕುಖ್ಯಾತವಾಗಿರುವ ಅಮೆರಿಕ ಉತ್ತರ ಕೊರಿಯಾದ ಮೇಲೆ ಕೆಂಡಕಾರುತ್ತಿದೆ, ಆದರೆ ಪಾಕಿಸ್ತಾನ, ಇಸ್ರೇಲ್‌ಗಳ ವಿಚಾರದಲ್ಲಿ ಚಕಾರವೆತ್ತುತ್ತಿಲ್ಲ. ಈ ಮಾರಕಾಸ್ತ್ರಗಳು ಭಯೋತ್ಪಾದಕರ ಕೈಗೆ ಬೀಳಬಹುದಾದ ಸಂಭವ ಪಾಕಿಸ್ತಾನ, ಇಸ್ರೇಲ್‌ಗಳಲ್ಲೇ ಹೆಚ್ಚು. ಹಳೆಯ ದ್ವೇಷ ಸಾಧನೆಯೇ ಉತ್ತರ ಕೊರಿಯಾದ ವಿಚಾರದಲ್ಲಿ ಅಮೆರಿಕ ತಳೆದಿರುವ ಧೋರಣೆ. ಇರಾಕ್-ಉತ್ತರ ಕೊರಿಯಾ-ಇರಾನ್ ಈ ಮೂರೂ ರಾಷ್ಟ್ರಗಳನ್ನು ದುಷ್ಟ ರಾಷ್ಟ್ರಗಳು ಎಂದು ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಭಯೋತ್ಪಾದನೆಯ ವಿರುದ್ಧ ಸಮರ ಸಾರಿದ ಮೇಲೆ ಹೇಳಿದ್ದುಂಟು. ಇರಾಕನ್ನು ಮುಗಿಸಿದನಂತರ ಉತ್ತರ ಕೊರಿಯಾದ ಸರದಿ. ತನ್ನ ಬಳಿ ಎಷ್ಟೇ ಪ್ರಬಲವಾದ ಮಾರಕಾಸ್ತ್ರ , ಇದ್ದರೂ ಸರಿಯೆ ಅದು ಸುರಕ್ಷಿತ ಎನ್ನುವ ಅಹಮಿಕೆ ಅಮೆರಿಕಾಗೆ. ಶೀತಯುದ್ಧ ಮುಗಿದು ದಶಕದ ಮೇಲಾಗಿದ್ದರೂ ಅಮೆರಿಕ ಹೊಸ ಮಾರಕಾಸ್ತ್ರಗಳ ಬೆಳವಣಿಗೆ, ತಯಾರಿಕೆಯನ್ನು ನಿಲ್ಲಿಸಿಲ್ಲ. ನ್ಯೂಕ್ಲಿಯರ್ ಕ್ಷಿಪಣಿ ರಕ್ಷಾಕವಚ ಯೋಜನೆ, ಮರಿತಾರಾ ಸಮರ ಸನ್ನಾಹದಲ್ಲಿ ಅಮೆರಿಕ ಹೊಸ ಶಸ್ತ್ರಾಸ್ತ್ರ ಪೈಪೋಟಿಗೆ ನಾಂದಿ ಹಾಕಿದೆ. ಆದರಿಂದಾಗಿಯೇ ಇಂದು ಜಗತ್ತು ಹೆಚ್ಚು ಹೆಚ್ಚು ಅಪಾಯಕಾರಿಯಾಗುತ್ತಿದೆ. ಇದರಿಂದ ಪಾರಾಗಲು, ಮನುಕುಲವನ್ನು ಸರ್ವನಾಶದಿಂದ ಉಳಿಸಲು ಇರುವ ಏಕೈಕ ಮಾರ್ಗವೆಂದರೆ ನ್ಯೂಕ್ಲಿಯರ್ ಅಸ್ತ್ರ ಮುಕ್ತ ಜಗತ್ತಿನ ಸ್ಥಾಪನೆ. ಬೇರೆ ರೀತಿಯಲ್ಲಿ ಹೇಳಬೇಕೆಂದರೆ ನಮಗಿರುವ ಏಕೈಕ ಭೂ ಮಂಡಲವನ್ನು ರಕ್ಷಿಸಿಕೊಳ್ಳಲು ನ್ಯೂಕ್ಲಿಯರ್ ಅಸ್ತ್ರಗಳ ನಿಷೇಧ ಹಾಗೂ ಸಂಪೂರ್ಣ ನಿರ್ನಾಮ.

ಈ ಪರಿಕಲ್ಪನೆ ಹೊಸದೇನಲ್ಲ. ಐವತ್ತು ವರ್ಷಗಳ ಹಿಂದೆಯೇ ಅದು ರೂಪುಗೊಂಡು, ಅದನ್ನು ಸಾಕಾರಗೊಳಿಸಲು ಜಗತ್ತಿನಾದ್ಯಂತ ಸತತವಾದ ಆಂದೋಲನವೂ ಜರುಗಿತು. ಪರಮಾಣು ಅಸ್ತ್ರದ ಭೀಕರ ಪರಿಣಾಮವನ್ನು ಕಂಡ ಬುದ್ಧಿಜೀವಿಗಳು, ವಿಜ್ಞಾನಿಗಳು, ರಾಜಕಾರಣಿಗಳು, ಧರ್ಮಗುರುಗಳು, ವಿಚಾರಪರರು ಈ ಆಂದೋಲನದ ಮುಂಚೂಣಿಯಲ್ಲಿದ್ದರು. ವಿಶ್ವಶಾಂತಿ ಮಂಡಳಿಯ ಆಶ್ರಯದಲ್ಲಿ ಅವ್ಯಾಹತವಾಗಿ ಜರುಗಿದ ಈ ಚಳವಳಿ ನ್ಯೂಕ್ಲಿಯರ್ ಯುದ್ಧವನ್ನು ತಡೆಯುವುದರಲ್ಲಿ ಪ್ರಮುಖ ಪಾತ್ರ ವಹಿಸಿತು. ಐವತ್ತರ ದಶಕದಲ್ಲಿಯೇ ಈ ಮಂಡಳಿಯು ನ್ಯೂಕ್ಲಿಯರ್ ಅಸ್ತ್ರಗಳ ಸಂಪೂರ್ಣ ನಿಷೇಧ ಮತ್ತು ಅವುಗಳ ನಿರ್ನಾಮಕ್ಕಾಗಿ ಪ್ರಪಂಚದ ಎಲ್ಲ ದೇಶಗಳ ಕೋಟಿಗಟ್ಟಲೆ ಸಾಮಾನ್ಯ ಜನ ಸಹಿ ಹಾಕಿದ್ದ ಮನವಿಯನ್ನು ವಿಶ್ವಸಂಸ್ಥೆಗೆ ಸಮರ್ಪಿಸಿತು. ವಿಶ್ವಶಾಂತಿ ಸ್ಥಾಪನೆಗೆ ಮೂಲ ಅವಶ್ಯಕತೆಯಾಗಿ ನಿರಾಯುಧೀಕರಣ ಮತ್ತು ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಯನ್ನು ವಿಶ್ವಸಂಸ್ಥೆಯ ಒಳಗೂ ಹೊರಗೂ ಉಗ್ರವಾಗಿ ಪ್ರತಿಪಾದಿಸಿದ ದೇಶಗಳ ಪೈಕಿ ಭಾರತ ಅಗ್ರಸ್ಥಾನದಲ್ಲಿತ್ತು. ಅಂದಿನ ಸೋವಿಯತ್ ಒಕ್ಕೂಟದ ಜೊತೆಗೂಡಿ, ಅಲಿಪ್ತ ರಾಷ್ಟ್ರಗಳ ಮಂಚೂಣಿಯಲ್ಲಿದ್ದ ಭಾರತ ಈ ದಿಶೆಯಲ್ಲಿ ಹಲವು ರಚನಾತ್ಮಕ ಉಪಕ್ರಮಗಳನ್ನು ಕೈಗೊಂಡಿತ್ತು. ಆದರೆ ಅಮೆರಿಕ ತಳೆದ ಹಠಮಾರಿ ಧೋರಣೆಯಿಂದಾಗಿ ಅವು ಫಲಕಾರಿಯಾಗಲಿಲ್ಲ. ಅದು ಇಂದೂ ಕೂಡ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಗೆ ಸಿದ್ಧವಿಲ್ಲ. ನ್ಯೂಕ್ಲಿಯರ್ ಅಸ್ತ್ರಗಳನ್ನು ಬಳಸುವುದರಲ್ಲಿ ಮೊದಲಿಗನಾಗದಿರುವ ಪರಿಕಲ್ಪನೆ ಬಂದದ್ದು ಆಗಲೆ. ನಿರಂತರ ಹೋರಾಟದ ಪರಿಣಾಮವಾಗಿ ನ್ಯೂಕ್ಲಿಯರ್ ಅಸ್ತ್ರಗಳ ಪ್ರಯೋಗ ಪರೀಕ್ಷೆಯ ಕುರಿತು ಕೆಲವು ನಿರ್ಬಂಧಗಳನ್ನು ಒಳಗೊಂಡ ಒಪ್ಪಂದ ಜಾರಿಗೆ ಬಂದಿತ್ತು. ಇದೊಂದು ಮಹತ್ತರವಾದ ಗಳಿಕೆಯಾಗಿತ್ತು ಶಾಂತಿ ಚಳವಳಿಗೆ. ಸೋವಿಯತ್ ಒಕ್ಕೂಟದ ವಿಘಟನೆ, ನಂತರ ಶೀತಯುದ್ಧದ ಅಂತ್ಯ, ಅಲಿಪ್ತ ಚಳವಳಿ ದುರ್ಬಲಗೊಂಡು ನಿಷ್ಕ್ರಿಯವಾದದ್ದು ಇವೆಲ್ಲದರ ಪರಿಣಾಮವಾಗಿ ವಿಶ್ವಶಾಂತಿ ಚಳವಳಿಯೂ ಸ್ಥಗಿತಗೊಂಡಿತು. ಶಾಂತಿ ಚಳವಳಿಯಲ್ಲಿ ಅಗ್ರ ಪಂಕ್ತಿಯಲ್ಲಿದ್ದ, ನ್ಯೂಕ್ಲಿಯರ್ ಅಸ್ತ್ರಗಳ ನಿಷೇಧದ ವಿಷಯದಲ್ಲಿ ತಾತ್ವಿಕ ನಿಲುವನ್ನು ತಳೆದಿದ್ದ ಭಾರತ ನ್ಯೂಕ್ಲಿಯರ್ ಅಸ್ತ್ರ ಪ್ರಯೋಗ ನಡೆಸಿದ ಮೇಲೆ, ಅದನ್ನು ಪ್ರತಿಪಾದಿಸಲು ನೈತಿಕ ಹಕ್ಕನ್ನು ಕಳೆದುಕೊಂಡಿತು.

ಇಂದು, ಈ ಇಪ್ಪತ್ತೊಂದನೇ ಶತಮಾನದಲ್ಲಿ ನ್ಯೂಕ್ಲಿಯರ್ ಅಸ್ತ್ರಗಳ ವಿಸ್ತರಣೆಯ ಅಪಾಯ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಶಾಂತಿ ಚಳವಳಿಯನ್ನು ಪುನರುಜ್ಜೀವಗೊಳಿಸಿ, ಮತ್ತೊಮ್ಮೆ ಎಲ್ಲ ನ್ಯೂಕ್ಲಿಯರ್ ಅಸ್ತ್ರಗಳ ನಿಷೇಧ ಹಾಗೂ ನಿರ್ನಾಮಕ್ಕಾಗಿ ಬೃಹತ್ ಆಂದೋಲನವನ್ನು ನಡೆಸಬೇಕಾದ ಕಾಲ ಸನ್ನಿಹಿತವಾಗಿದೆ. ಈ ನಿಟ್ಟಿನಲ್ಲಿ ಎಲ್ಲ ಶಾಂತಿಪ್ರಿಯರೂ, ವಿವೇಕಿಗಳೂ, ವಿಚಾರಪರರೂ, ಬುದ್ಧಿಜೀವಿಗಳೂ, ಒಂದಾಗಿ ಕಾರ್ಯಪ್ರವೃತ್ತವಾಗಬೇಕಾಗಿದೆ. ❑

# ಭೂ ಸಂಪತ್ತು ಕುರಿತ ನೀತಿ

**ಭೂ**ಮಿ ವೃದ್ಧಿಪಡಿಸಲಾಗದ, ಪುನರ್ನಿರ್ಮಿಸಲಾಗದ, ಒಂದು ನಿರ್ದಿಷ್ಟ ಪರಿಮಾಣದ ಬಹುಮುಖ್ಯವಾದ ಮೂಲಭೂತ ಉತ್ಪಾದನಾ ಮಾಧ್ಯಮ. ಇದರ ಸಮರ್ಪಕ ಬಳಕೆ ಹಾಗೂ ಗುಣಮಟ್ಟವನ್ನು ರಕ್ಷಿಸುವುದು ಇದೇ ಕಾರಣದಿಂದ ಅನಿವಾರ್ಯ, ಅಗತ್ಯ. ಈ ಕುರಿತ ಒಂದು ಮಧ್ಯಕಾಲೀನ ಆಡಳಿತ ನೀತಿ ಕೂಡ ಸಮರ್ಪಕ ಬಳಕೆಯನ್ನು ಸಾಧಿಸಿ, ಗುಣಮಟ್ಟ ಕೆಡದಂತೆ ರಕ್ಷಿಸಲು ಸಮರ್ಥವಾಗಬಲ್ಲುದು. ಅಂಥದ್ದೊಂದು ನೀತಿಯನ್ನು ನಿರ್ಧರಿಸಿ ಭೂಬಳಕೆಯ ಪ್ರಕ್ರಿಯೆಯಲ್ಲಿ ಮಧ್ಯಪ್ರವೇಶಿಸುವ ಮುಂಚೆ ಈ ಕುರಿತ ಪ್ರಸಕ್ತ ಪರಿಸ್ಥಿತಿ, ಎಲ್ಲ ಮಾಹಿತಿಗಳು, ಐತಿಹಾಸಿಕವಾದ ಹಾಗೂ ಈಗ ಚಾಲ್ತಿಯಲ್ಲಿರುವ ಮತ್ತು ಉದ್ದೇಶಿತ ನೀತಿಗಳ ಸಮಗ್ರ ಪರಿಶೀಲನೆಯನ್ನು ಮಾಡಬೇಕಾಗುತ್ತದೆ. ಅದಕ್ಕೂ ಮೇಲಾಗಿ ನೀತಿಗಳನ್ನು ಕಾರ್ಯರೂಪಕ್ಕೆ ತರಲು ನಿರ್ಮಿಸಿರುವ ಸಾಂಸ್ಥಿಕ ಸ್ವರೂಪಗಳು, ಅವುಗಳ ಪಾರಿಣಾಮಿಕ ಸಮರ್ಥತೆಯನ್ನು ಗಮನಿಸಬೇಕಾಗುತ್ತದೆ; ವಿವಿಧ ಹಂತದ, ಸ್ವರೂಪದ ಆರ್ಥಿಕ ಪ್ರಕ್ರಿಯೆಗಳಲ್ಲಿ ಹೊರಹೊಮ್ಮುವ ಭೂಮಿಯ ಹಲವಾರು ಸ್ವರೂಪದ ಬಳಕೆಗಳನ್ನು ವಿಶ್ಲೇಷಿಸ ಬೇಕಾಗುತ್ತದೆ. ಎಷ್ಟೋ ವೇಳೆ ಭೂ ಬಳಕೆಯ ಸ್ವರೂಪಗಳು ಪರಸ್ಪರ ವೈರುಧ್ಯ ಉಳ್ಳವಾಗಿದ್ದು, ಅಧ್ಯಯನದ ಸಮಸ್ಯೆ ಜಟಿಲಗೊಳ್ಳುತ್ತದೆ. ಇದರ ಜೊತೆಗೆ ಇಂದಿನ ಉದಾರೀಕರಣ ಮತ್ತು ಜಾಗತೀಕರಣದ ಸಂದರ್ಭ ತನ್ನದೇ ಆದ ಕ್ಲಿಷ್ಟತೆಯನ್ನು ಒಡ್ಡುತ್ತದೆ. ಉತ್ಪಾದನೆಯ ಎಲ್ಲ ಮೂಲ ವಸ್ತುಗಳನ್ನು ಮಾರುಕಟ್ಟೆಯ ಆಗು-ಹೋಗುಗಳಿಗೆ ಮುಕ್ತವಾಗಿ ಒಡ್ಡಬೇಕೆಂಬ ಈ ಸಿದ್ಧಾಂತದ ಮುಂದೆ ಮತ್ತೊಂದು ಮೂಲವಸ್ತುವಾದ ಭೂಮಿಯನ್ನು ಮಾತ್ರ ಕೇಂದ್ರೀಕೃತ ನೀತಿ ನಿರೂಪಣೆಯ ಬಂಧನಕ್ಕೆ ಅರ್ಪಿಸುವುದು ಸೈದ್ಧಾಂತಿಕವಾಗಿ ಸಮರ್ಥನೀಯವಾಗದಿರಬಹುದು. ಹಾಗೆ ಕೇಂದ್ರೀಕೃತ ನಿರ್ದೇಶನಕ್ಕೆ ಅಧೀನವಾಗಿಸಲು ಇರುವ ಏಕೈಕ ಸಮರ್ಥನೆಯೆಂದರೆ ಮೇಲೆ ಹೇಳಿದ ಹಾಗೂ ಅದನ್ನು ಪುನರ್‌ಸೃಷ್ಟಿಸಲಾಗದ ಅದರ ಮಿತಿಯಾದ ಸ್ವರೂಪ. ಆದ್ದರಿಂದಲೇ ಸಾಮಾಜಿಕ ಮೌಲ್ಯ, ಬೆಲೆ ಹಾಗೂ ಪಡೆಯಬಹುದಾದ ಪ್ರಯೋಜನಗಳು ಇವುಗಳನ್ನೂ ಒಳಗೊಂಡ ನೀತಿಯ ಅವಶ್ಯಕತೆಯಿದೆ. ಆಹಾರ ಪೂರೈಕೆಯನ್ನು ರಾಷ್ಟ್ರ ರಕ್ಷಣೋಪಾಯವೆಂಬಂತೆ ಮಾರುಕಟ್ಟೆಯ ಏಳು-ಬೀಳುಗಳಿಂದ ಸಂರಕ್ಷಿಸ ಬೇಕಾಗಿದೆ. ಪರಿಸರ ರಕ್ಷಣೆಗೆ ಇದು ಅತ್ಯವಶ್ಯಕ ಅಗತ್ಯವೆಂದೂ ವಾದಿಸಬಹುದು. ಇದೇ ಕಾರಣ ತಜ್ಞರೂ ಪರಿಸರವಾದಿಗಳೂ ಭೂ ಬಳಕೆಗೆ ಸಂಬಂಧಪಟ್ಟಂತೆ ಒಂದು ದೀರ್ಘಕಾಲೀನ ನೀತಿ ನಿರೂಪಣೆ ಅನುಷ್ಠಾನ ಅಗತ್ಯವೆಂದು ಬಹುವಾಗಿ ಅಂಗೀಕರಿಸಿದ್ದಾರೆ. ಭೂ ಸಂಪತ್ತು ಕೃಷಿರಂಗದಲ್ಲಿ ಅತಿ ಮುಖ್ಯವಾದ ಉತ್ಪಾದನಾ ಸಂಪನ್ಮೂಲವಾಗಿದ್ದರೂ, ಉಳಿದ ಕ್ಷೇತ್ರಗಳಲ್ಲಿಯೂ ಇದು ಮುಖ್ಯ ಭೂಮಿಕೆಯನ್ನು ಹೊಂದಿದೆ. ಅಂತರ್-ಕ್ಷೇತ್ರೀಯ ಹಾಗೂ ಆರ್ಥಿಕ ಸಂಬಂಧಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಸಂಪನ್ಮೂಲವನ್ನು ಐದು ವರ್ಗಗಳಾಗಿ ವಿಂಗಡಿಸಬಹುದು.

ಮೊದಲನೆಯದಾಗಿ, ಕೃಷಿಗಾಗಿ ಉಪಯೋಗಿಸಲ್ಪಡುತ್ತಿರುವ ಭೂಮಿ. – ಇದು ಅತಿ ಮುಖ್ಯವಾದ ಬಳಕೆಯಾಗಿದ್ದು, ಆಹಾರ ಹಾಗೂ ವಾಣಿಜ್ಯ ಉತ್ಪನ್ನಗಳು ಎಂದು ಮತ್ತೆರಡು ವರ್ಗಗಳಾಗಿ ವಿಭಜಿಸಲ್ಪಟ್ಟಿದೆ. ಬಹುತೇಕ, ಈ ಮೂಲದ ಉತ್ಪನ್ನಗಳ ಮಾರುಕಟ್ಟೆ ಬೆಲೆಯು ಆಯಾ ಬೆಳೆಗಾಗಿ ತೊಡಗಿಸಲಾದ ಭೂಮಿಯ ಪರಿಮಾಣವನ್ನು ನಿಯಂತ್ರಿಸುತ್ತದೆ.

ಎರಡನೆಯದಾಗಿ, ಕಾಡು ಅಥವಾ ಅಡವಿ. ಇದು ಕಾನೂನಿಗನುಸಾರವಾಗಿ ಅಡವಿ ಇಲಾಖೆಯ ಹೆಸರಿನಲ್ಲಿ ನಮೂದಿಸಲ್ಪಟ್ಟಿರುವ ಭೂಮಿ. ಕಾನೂನಿನ ಪ್ರಕಾರ ಅಡವಿಯೆಂದು ನಮೂದಿಸಲ್ಪಟ್ಟ ಕ್ಷೇತ್ರವೂ, ವಾಸ್ತವವಾಗಿ ಈ ರೀತಿಯಾಗಿರುವ ಭೂಮಿಯ ಅಳತೆಯೂ ಬೇರೆಯೇ ಆಗಿರಬಹುದಾದ ಸಂಭವವಿದೆ. ಇತ್ತೀಚೆಗೆ ಅಡವಿ ಇಲಾಖೆಯು ದೂರ ಸಂವೇದೀ ಉಪಗ್ರಹ ಜಾಲದ ನೆರವಿನಿಂದ ಅಡವಿಯ ವರ್ಗೀಕರಣದ ನಿಟ್ಟಿನಲ್ಲಿ ಸಾಕಷ್ಟು ಪ್ರಯತ್ನ ಮಾಡಿದೆ. ಇದಲ್ಲದೆ ತೋಟಗಳೂ, ಉಪವನಗಳೂ ತಾಂತ್ರಿಕವಾಗಿ ಅಡವಿಯ ವರ್ಗಕ್ಕೇ ಸೇರುತ್ತವೆ.



ಪ್ರೊ ಆರ್. ಎಸ್. ದೇಶಪಾಂಡೆಯುವರು ಇನ್‌ಸ್ಟಿಟ್ಯೂಟ್ ಫಾರ್ ಸೋಶಿಯಲ್ ಅಂಡ್ ಎಕನಾಮಿಕ್ ಛೇಂಜ್ ಸಂಸ್ಥೆಯಲ್ಲಿ ಕೃಷಿ ಅಭಿವೃದ್ಧಿ ಮತ್ತು ಗ್ರಾಮೀಣ ಮಾರ್ಪಾಡು ವಿಭಾಗದಲ್ಲಿ ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ . ದಿನಾಂಕ "ಹೊಸತು" ೨೦.೧೧.೨೦೦೨ ರಂದು 'ಕರ್ನಾಟಕ ಸಂಪನ್ಮೂಲಗಳ ಆರ್ಥಿಕವಿಕಾಸ'' ಎಂಬ ವಿಷಯ ಕುರಿತು "ಪ್ರಸ್ತುತ ಪರಿಸ್ಥಿತಿಯ ಅವಲೋಕನ ಮತ್ತು ಸಮಗ್ರ ಅಭಿವೃದ್ಧಿಗೆ ಪರ್ಯಾಯ ಚಿಂತನೆ"ಯನ್ನು ಪ್ರೊ|| ಅಬ್ದುಲ್ ಅಜೀಜ್‌ರವರ ನಿರ್ದೇಶನದಲ್ಲಿ ನಡೆಸಿದಾಗ ಶ್ರೀ ದೇಶಪಾಂಡೆಯವರು ಮಂಡಿಸಿದ "ಭೂ ಸಂಪತ್ತು" ಕುರಿತ ವಿಚಾರಧಾರೆ ಇಲ್ಲಿದೆ. ಇನ್ನಷ್ಟು ವಿಷಯಗಳನ್ನು ಕುರಿತು ಮುಂಬರುವ ಸಂಚಿಕೆಗಳಲ್ಲಿ ಪ್ರಕಟಿಸಲಾಗುವುದು.

**ಡಾ|| ಆರ್. ಎಸ್. ದೇಶಪಾಂಡೆ**

ಮೂರನೆಯದಾಗಿ, ವಸತಿಗಾಗಿ ಉಪಯೋಗಿಸಲ್ಪಡುತ್ತಿರುವ ಭೂಮಿ ಮತ್ತು ಔದ್ಯೋಗಿಕ, ನಾಗರಿಕ, ಮತ್ತಿತರ ಕ್ಷೇತ್ರಗಳು. ಹೆಚ್ಚುತ್ತಿರುವ ಜನಸಂಖ್ಯೆ ಹಾಗೂ ಉದ್ಯೋಗಾವಕಾಶಗಳಿಗನುಸಾರವಾಗಿ ಇದು ಬದಲಾಗುತ್ತಾ ಹೋಗುತ್ತದೆ. ಉದಾರೀಕರಣ ಹಾಗೂ ಜಾಗತೀಕರಣದ ಫಲಿತಾಂಶವಾಗಿ ಔದ್ಯೋಗಿಕ ಬಳಕೆಗಾಗಿ ಹೆಚ್ಚು ಹೆಚ್ಚು ಭೂಮಿಯನ್ನು ಅಗತ್ಯವಾಗಿ ಬಳಸಬೇಕಾಗುವ ಪರಿಸ್ಥಿತಿ ಮುಂಬರುವ ದಿನಗಳಲ್ಲಿ ಹೆಚ್ಚುತ್ತದೆ.

ನಾಲ್ಕನೆಯದಾಗಿ, ಬೀಳುಬಿಟ್ಟ ಭೂಮಿ, ಉಳುಮೆ ಮಾಡಬಹುದಾದ, ಹಲಕೆಲವು ಮರಗಳು ಬೆಳೆದಿರುವ ಪಾಳು ಭೂಮಿ, ಇತ್ಯಾದಿ. ಇವುಗಳನ್ನು ಉಪಯೋಗಕ್ಕೆ ತಂದು, ಉತ್ತಮ ಕೃಷಿ ಮಾಡಿ, ಒಳ್ಳೆಯ ಉತ್ಪನ್ನವನ್ನು ತೆಗೆಯಬಹುದಾದರೂ, ಅನೇಕ ಕಾರಣಗಳಿಂದ ಇವು ಈ ವರ್ಗದಲ್ಲಿಯೇ ಉಳಿದಿವೆ.

ಕೊನೆಯದಾಗಿ, ಮೇಲೆ ಹೇಳಿದ ನಾಲ್ಕು ವರ್ಗಗಳಲ್ಲಿ ಕಳಪೆಯಾಗಿ ಉಳಿದಿರುವ ಭೂಮಿಯ ಭಾಗಗಳು ಮತ್ತು ಪೂರ್ಣವಾಗಿ ಕಳಪೆಯಾಗಿರುವ ಪ್ರತ್ಯೇಕ ಭೂಭಾಗ ಗಳದ್ದು ಮತ್ತೊಂದು ವರ್ಗ.

ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕ ರಾಜ್ಯದ ಭೂ ಸಂಪನ್ಮೂಲದ ಸದುಪಯೋಗಕ್ಕಾಗಿ ದೀರ್ಘಕಾಲಿಕ ಸಂಹಿತೆಯೊಂದನ್ನು ತಯಾರಿಸುವ ಚಿಂತನೆ ಮಾಡಲಾಗಿದೆ. ಇದಕ್ಕಾಗಿ ಮುಖ್ಯವಾಗಿ ನಾಲ್ಕು ಅಂಶಗಳನ್ನು ಪರಿಶೀಲನೆಗೆ ತೆಗೆದುಕೊಳ್ಳಬಹುದು:

೧. ಕರ್ನಾಟಕ ರಾಜ್ಯದ ಭೂ ಸಂಪತ್ತಿನ ಉಪಯೋಗದ ಮೇಲೆ ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಸಂಹಿತೆಗಳ ಪ್ರಭಾವ.

೨. ರಾಜ್ಯದ ಕೃಷಿ ಕ್ಷೇತ್ರದ ಸಂರಚನೆಯ ಮೇಲೆ ಕೃಷಿ ಸಂಬಂಧಿತ ಸಂಘ-ಸಂಸ್ಥೆಗಳ ಪ್ರಭಾವದ ವಿಶದವಾದ ಅಧ್ಯಯನ.

೩. ಕಳೆದ ನಾಲ್ಕು ದಶಕಗಳಲ್ಲಿ, ಜಿಲ್ಲಾಮಟ್ಟದಲ್ಲಿ, ಭೂಮಿಯ ಬಳಕೆಯಲ್ಲಿ ಉಂಟಾಗಿರುವ ಬದಲಾವಣೆಗಳ ಗ್ರಹಿಕೆ.

೪. ಭೂ ಸಂಪನ್ಮೂಲದ ಉಪಯೋಗದಲ್ಲಿ ಮುಂದಿನ ದಿನಗಳಲ್ಲಿ ಅಗತ್ಯವಾಗಬಹುದಾದ ಬದಲಾವಣೆಗಳನ್ನು ಗುರುತಿಸುವುದು ಮತ್ತು ಈ ಸಂಬಂಧ ಕರ್ನಾಟಕ ಸರ್ಕಾರದ ನೀತಿ ನಿರೂಪಣೆಯಲ್ಲಿ ತಲೆದೋರಬಹುದಾದ ವಿಕಾಸ ಮಾರ್ಗ.

**೨. ಕರ್ನಾಟಕದಲ್ಲಿ ಭೂ ಸಂಪನ್ಮೂಲದ ಬಳಕೆಯ ಮೇಲೆ ಅಂತರರಾಷ್ಟ್ರೀಯ ಹಾಗೂ ರಾಷ್ಟ್ರೀಯ ಸಂಹಿತೆಗಳ ಪ್ರಭಾವ**

ಉದಾರೀಕರಣ ಮತ್ತು ಜಾಗತೀಕರಣದ ನೀತಿಗೆ ಪ್ರತಿಸ್ಪಂದಿಸುತ್ತಾ ಜಾಗತಿಕ ಹಾಗೂ ಆಂತರಿಕ ಆರ್ಥಿಕ ಪರಿಸ್ಥಿತಿ ಶರವೇಗದಲ್ಲಿ ಬದಲಾಗುತ್ತಿದೆ. ಭಾರತದಂಥ ಹಿಂದುಳಿದ ಅರ್ಥ ವ್ಯವಸ್ಥೆಯಲ್ಲಿ ಭೂಮಿ ಬಹುಮುಖ್ಯವಾದ ಉತ್ಪಾದಕ ಮೂಲ ವಸ್ತುವಾಗಿದ್ದು ಬದಲಾಗುತ್ತಿರುವ ಈ ಆರ್ಥಿಕ ಪರಿಸ್ಥಿತಿ ಭೂಮಿಯ ಬಳಕೆಯ ಮೇಲೆ ಹಲವಾರು ಪರಿಣಾಮಗಳನ್ನು ಉಂಟು ಮಾಡುವುದು ಅನಿವಾರ್ಯ. ಆದ್ದರಿಂದ ಭೂ ಬಳಕೆಯಲ್ಲಿ ಆಗಬಹುದಾದ ಬದಲಾವಣೆಗಳು ಹೇಗಿರಬೇಕೆಂಬ ಬಗ್ಗೆ ಅಧ್ಯಯನ ಅಗತ್ಯವಾಗುತ್ತದೆ. ಜಾಗತಿಕ ನೀತಿಗಳ ಬದಲಾವಣೆ ಭಾರತದ ಭೂ ಬಳಕೆಯ ನೀತಿಯ ಮೇಲೆ ಸ್ವಾತಂತ್ರ್ಯಾನಂತರ ಅಷ್ಟೇನೂ ಪರಿಣಾಮ ಬೀರಿಲ್ಲವೆನ್ನಬಹುದು. ಈ ಪರಿಸ್ಥಿತಿ ಇನ್ನು ನಾಲ್ಕೈದು ದಶಕಗಳು ಮುಂದುವರಿಯುವ ಸಾಧ್ಯತೆಯಿದೆ. ಜಾಗತೀಕರಣ ನೀತಿಯಂತೆ ದೇಶದ ಆಮದು ರಫ್ತು ವ್ಯವಹಾರದಲ್ಲಿ ಪರಿಮಾಣವನ್ನು ಮಿತಿಗೊಳಿಸುವುದನ್ನು ಕೈಬಿಡಬೇಕಾಗುತ್ತದೆ. ಸ್ವಂತ ಮಾರುಕಟ್ಟೆಯನ್ನು ರಕ್ಷಿಸಿಕೊಳ್ಳಲೋಸುಗ ಅಡಚಣೆಯ ಸ್ವರೂಪದ ಸುಂಕ ನೀತಿಯನ್ನು ಅನುಸರಿಸುವುದನ್ನೂ ಕೈಬಿಡಬೇಕಾಗುತ್ತದೆ. ಇದು ವಿಶ್ವ ವಾಣಿಜ್ಯ ಸಂಸ್ಥೆಯ ಮುಂದೆ ಒಪ್ಪಿಕೊಂಡಿರುವ ನೀತಿ. ಈಗಿರುವಂತೆ ರಾಷ್ಟ್ರೀಯ ಒಟ್ಟು ಉತ್ಪಾದನೆಯ ಶೇ. ೯ರಷ್ಟು ಉತ್ಪಾದನೆ ಮಾತ್ರ ರಫ್ತಾಗುತ್ತಿದೆ. ಇದರಲ್ಲಿ ಕೃಷಿಯ ಪಾಲು ಶೇ. ೨ರಷ್ಟು. ಮೌಲ್ಯದಲ್ಲಿ ಕೃಷಿಯ ಪಾಲು ದೇಶದ ಒಟ್ಟು ರಫ್ತಿನ ಶೇ. ೧೯ರಷ್ಟು ಇದೆ. ಅಂತರರಾಷ್ಟ್ರೀಯ ವ್ಯಾಪಾರ ತನ್ಮೂಲಕ ಅಂತರರಾಷ್ಟ್ರೀಯ ನೀತಿಗಳು ಆಂತರಿಕ ಭೂ ಬಳಕೆಯ ನೀತಿಯ ಮೇಲೆ ಅಷ್ಟೇನೂ ಪರಿಣಾಮ ಬೀರುವಂತಹುದಲ್ಲವೆಂದು ಈ ಸರಳ ಅಂಕಿಅಂಶಗಳ ಆಧಾರದ ಮೇಲೆ ತೀರ್ಮಾನಿಸ ಬಹುದಾಗಿದೆ. ಕರ್ನಾಟಕದಲ್ಲಿ ಮಾತ್ರವಲ್ಲದೆ ಇಡೀ ರಾಷ್ಟ್ರದಲ್ಲೂ ಇದೇ ಆಧಾರದ ಮೇಲೆ ಅಂತರರಾಷ್ಟ್ರೀಯ ಬೆಲೆಗಳ ಏಳುಬೀಳುಗಳ ನೀತಿ ನಿರೂಪಣೆಗಳ ಪರಿಣಾಮ ಭೂ ಬಳಕೆಯ ಸ್ವರೂಪದ ಮೇಲೆ ಯಾವ ಮಹತ್ತರ ಪರಿಣಾಮವನ್ನೂ ಬೀರದೆಂದು ಹೇಳಬಹುದು. ಪ್ರಸ್ತುತ ಭೂ ಬಳಕೆ ಬಹುವಾಗಿ ಆಹಾರದ ಉತ್ಪನ್ನಕ್ಕೆ ಸೀಮಿತವಾಗಿದೆ. ಕರ್ನಾಟಕದಲ್ಲೂ, ಇತರೆಡೆಯಲ್ಲೂ ಆಹಾರ ಉತ್ಪನ್ನವೇ ಪ್ರಮುಖ ಉದ್ದೇಶವಾಗಿರುವವರೆಗೆ ಈ ಪರಿಸ್ಥಿತಿ ಮುಂದುವರಿಯುತ್ತದೆ. ನಮ್ಮಲ್ಲಿ ಇನ್ನೂ ಶೇ. ೩೩ರಷ್ಟು ಜನ ಬಡತನದ ರೇಖೆಯಡಿ ಇದ್ದು, ಸ್ವಂತ ಉಪಯೋಗಕ್ಕೇ ಉತ್ಪಾದನೆ ಆಗುತ್ತಿರುವುದು ವಾಸ್ತವ ಪರಿಸ್ಥಿತಿ. ಹೀಗಿರುವಾಗ ಅಂತರರಾಷ್ಟ್ರೀಯ ನೀತಿಗಳ ಪರಿಣಾಮವನ್ನು ಅಭ್ಯಾಸ ಮಾಡಲು ಅನುವಾಗುವಂತೆ ಬಹುಕಾಲೀನ ಅಂಕಿಅಂಶಗಳು ದೊರೆಯಬೇಕಾದರೆ ಬಹಳ ಕಾಲವೇ ಆಗುತ್ತದೆ. ಆದ್ದರಿಂದ ಕರ್ನಾಟಕದಲ್ಲಿ ಭೂಮಿಯ ಬಳಕೆ ಆಂತರಿಕ ಬೇಡಿಕೆಯ ಒತ್ತಡವನ್ನೇ ಪ್ರಮುಖವಾಗಿ ಅವಲಂಬಿಸಿರುತ್ತದೆ ಎಂದು ತೀರ್ಮಾನಿಸಬಹುದು. ಇದರಲ್ಲಿ ಅಂತರರಾಷ್ಟ್ರೀಯ ಪರಿಣಾಮವನ್ನು ಬದಿಗಿಡಬಹುದು.

**೩. ಕರ್ನಾಟಕದಲ್ಲಿ ಭೂ ಸಂಪತ್ತಿನ ಬಳಕೆಯ ವಿಧಾನಗಳು ಹಾಗೂ ಸಾಂಸ್ಥಿಕ ವ್ಯವಸ್ಥೆ:**

ಭೂಸಂಪತ್ತಿನ ಬಳಕೆಯ ವಿಧಾನಗಳ ಮೇಲೆ ಸಾಂಸ್ಥಿಕ ವ್ಯವಸ್ಥೆಯ ಪ್ರಭಾವವು ಪ್ರೋತ್ಸಾಹಕ ವಿಧಾನಗಳನ್ನು ಹಾಗೂ ನಿಯಮಾವಳಿಗಳನ್ನು ರೂಢಿಸಿ, ಅಳವಡಿಸುವುದರ ಮೂಲಕ ಆಗುತ್ತದೆನ್ನಬಹುದು. ಈ ಪ್ರಭಾವಗಳು ತಾತ್ಕಾಲಿಕ, ದೀರ್ಘಕಾಲ, ಖಾಸಗಿ ಹಾಗೂ ಸಾರ್ವಜನಿಕವಾಗಿಯೂ ಯಾವುದಾದರೂ ಧ್ಯೇಯ ಸಾಧನೆಯ ಕಾರಣಕ್ಕಾಗಲೀ, ಅಥವಾ ಸ್ಥಳೀಯ ರಾಜ್ಯಮಟ್ಟದ, ರಾಷ್ಟ್ರೀಯ ಅಥವಾ ಅಂತರ್ರಾಷ್ಟ್ರೀಯ ಸ್ತರಗಳಲ್ಲಿ ಕಾರಣಕಾರಿಗಳಾಗಿರಬಹುದು. ಹಲವಾರು ಬಾರಿ ಯೋಜನೆಗಳ ರೂಪಣೆ, ಅಳವಡಿಕೆ ಹಾಗೂ ಅಭಿವೃದ್ಧಿಯಲ್ಲಿನ ವೈಫಲ್ಯಕ್ಕೆ ಸಂಘ-ಸಂಸ್ಥೆಗಳ ರಚನಾತ್ಮಕ ಕುಂದು ಕೊರತೆಗಳೇ ಕಾರಣವಾಗಿರುವುದೂ ಉಂಟು. ಈ ಕೊರತೆಗಳನ್ನು ನಿವಾರಿಸುವ ನಿಟ್ಟಿನಲ್ಲಿ ಪ್ರಯತ್ನ ನಡೆದಾಗ, ಸಂಘ-ಸಂಸ್ಥೆಗಳ ಖರ್ಚನ್ನು ಕಡಿಮೆ ಮಾಡಿ, ಈ ವಿಭಾಗದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಗೊಳಿಸಲೋಸುಗ ಇವುಗಳನ್ನು ಖಾಸಗೀಕರಣ ಮಾಡಿರುವುದೂ ಇದೆ. ಇದು ಸಂಘ-ಸಂಸ್ಥೆಗಳ ಉತ್ತರದಾಯಿತ್ವ, ರಚನಾ ವ್ಯವಸ್ಥೆ, ಪುನರ್‌ರಚನೆ, ಸರ್ಕಾರದ ಸಂಸ್ಥೆಗಳ ವ್ಯವಸ್ಥೆಯ ಪರಿಷ್ಕರಣೆ, ಸೂಕ್ತ ಪ್ರಮಾಣದಲ್ಲಿರುವುದು, ವಿಕೇಂದ್ರೀಕರಣ ಹಾಗೂ ಖಾಸಗೀಕರಣ – ಹೀಗೆಲ್ಲಾ ಹಲವು ದಿಕ್ಕಿನಲ್ಲಿ ನಡೆಯುತ್ತದೆ.

**ಕರ್ನಾಟಕ ರಾಜ್ಯದ ಭೂ ಸಂಪತ್ತಿನ ಬಳಕೆಯ ವಿಧಾನಗಳ ಸರ್ವೇಕ್ಷಣವು ಈ ಕೆಳಕಂಡ ನ್ಯಾಯಾಂಗ ಸಂಸ್ಥೆಗಳ ಅಡಿಯಲ್ಲಿದೆ:–**

೧. ಕರ್ನಾಟಕ ರಾಜ್ಯ ಭೂ ಆದಾಯ ಸಂಹಿತೆ;

೨. ಕರ್ನಾಟಕ ರಾಜ್ಯ ಭೂಮಿ ವಶಪಡಿಸಿಕೊಳ್ಳುವ ಕಾಯಿದೆ ;

೩. ಭೂ ಸುಧಾರಣಾ ಕಾಯಿದೆ;

೪. ಕರ್ನಾಟಕ ರಾಜ್ಯ ಭೂ ಬಳಕೆ ಸಂಸ್ಥೆ.

ಈ ಸಂಸ್ಥೆಗಳು ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ, ರಾಜ್ಯದ ಭೂ ಸಂಪತ್ತಿನ ಬಳಕೆಯ ವಿಧಾನವನ್ನು ನಿರ್ವಹಿಸುತ್ತವೆ. ಈ ಸಾಂಸ್ಥಿಕ ಪರಿನಿರ್ವಹಣೆಯನ್ನು ಮತ್ತೂ ನಾಲ್ಕು ಸಂಸ್ಥೆಗಳ ಸಮೂಹವಾಗಿ ವಿಂಗಡಿಸಬಹುದು.

೧. ಭೂ ಸ್ವಾಮ್ಯದ ಸರ್ವೇಕ್ಷಣೆ ಮಾಡುವ ಸಂಸ್ಥೆಗಳು;

೨. ತಾಂತ್ರಿಕ ಅಭಿವೃದ್ಧಿ, ತಂತ್ರ ವರ್ಗಾವಣೆ ಮತ್ತು ಅವುಗಳ ಉಪಯೋಗವನ್ನು ನಿರ್ದೇಶಿಸುವ ಸಂಸ್ಥೆಗಳು;

೩. ಕೃಷಿಕ ಸಮಾಜಕ್ಕೆ ಆರ್ಥಿಕ ಹಾಗೂ ಸಾಲ ವ್ಯವಸ್ಥೆಯನ್ನು ಒದಗಿಸುವ ಸಂಸ್ಥೆಗಳು;

೪. ಕೃಷಿಕ ಸಮುದಾಯಕ್ಕೆ ಅವಶ್ಯಕ ಪೂರೈಕೆಗಳನ್ನು ಒದಗಿಸುವ ಸಂಸ್ಥೆಗಳು.

ಇವುಗಳೆಲ್ಲಾ ಅಂತಿಮವಾಗಿ ಭೂಬಳಕೆಯ ಹಲವು ಆಯಾಮಗಳನ್ನು ಪ್ರಭಾವಿಸುತ್ತವೆ. ಕೃಷಿಕ ಕ್ಷೇತ್ರದ ರಚನೆಯ ಪರಿಧಿಯಲ್ಲಿ ಭೂ ಸ್ವಾಮ್ಯ, ಕೃಷಿಯ ವಿಧಾನ, ಕೃಷಿಕರ ಹಕ್ಕು ಬಾಧ್ಯತೆಗಳು ಮುಂತಾದುವು ಸೇರಿವೆ. ಸ್ವ-ಸಹಾಯ, ಸ್ವಯಂ ಕೃಷಿ , ಮಿತವ್ಯಯ, ಸ್ವಾಯತ್ತ ಸ್ವಾವಲಂಬನೆ, ಪರಸ್ಪರ ಸಹಿಷ್ಣುತೆ, ಸಹಕಾರ, ಇತ್ಯಾದಿ ಗುಣ-ಸ್ವಭಾವಗಳನ್ನು ಬೆಳೆಸಿಕೊಳ್ಳಲು ಅನುಕೂಲಕರವಾದಂತಹ ಯೋಜನೆಯೊಂದು ಭೂ ಮಾಲಿಕ ಹಾಗೂ ಕೃಷಿಕನ ನಡುವೆ ಇರುವುದು ಹಿತಕರ. ಕೃಷಿಕ ಸಮುದಾಯದಲ್ಲಿರಬಹುದಾದಂತಹ ಸಾಮಾಜಿಕ ಹಾಗೂ ಆರ್ಥಿಕ ತೊಡಕುಗಳನ್ನು ನಿವಾರಿಸುವ ನಿಟ್ಟಿನಲ್ಲಿ ರೂಪಿಸಿದ ಭೂ-ಸುಧಾರಣಾ ಯೋಜನೆಯು ಗ್ರಾಮೀಣ ಋಣಾಲಭ್ಯತೆ, ಭೂ ವಿಭಜನೆ, ಕಂದಾಯ ನಿಗದಿ, ಮಾರುಕಟ್ಟೆಯ ಸೌಲಭ್ಯ, ಸಹಕಾರಿ ಸಂಸ್ಥೆಗಳು, ಕೃಷಿಕ್ಷೇತ್ರದಲ್ಲಿ ತರಬೇತಿ, ಸಲಹಾ ಸೌಲಭ್ಯ – ಇತ್ಯಾದಿಗಳನ್ನು ಒದಗಿಸಿ, ಅಭಿವೃದ್ಧಿಗೊಳಿಸುವುದರಲ್ಲಿ ಪರಿಣಾಮಕಾರಿಯಾಗುತ್ತದೆ.

**ಭೂ-ಸುಧಾರಣಾ ಕಾಯಿದೆಯು ಈ ಕೆಳಕಂಡ ಅಂಶಗಳನ್ನೊಳಗೊಂಡಿದೆ:**

೧. ಭೂಮಿಯ ಮರು ಹಂಚಿಕೆ ;

೨. ಗುತ್ತಿಗೆಯ ವ್ಯವಸ್ಥೆಯ ಸುಧಾರಣೆ;

೩. ಕೃಷಿಕ ಆದಾಯ ಹಾಗೂ ಆರ್ಥಿಕ ಪರಿಸ್ಥಿತಿಯ ಸುಧಾರಣೆ;

೪. ಸರ್ಕಾರದ ಲಾಂಛನದಡಿಯಲ್ಲಿ ತರಲ್ಪಟ್ಟ ಕಾನೂನು ನಿಬಂಧನೆಗಳ ಸಹಾಯದಿಂದ ಕೃಷಿ ಉತ್ಪತ್ತಿಯ ಅಭಿವೃದ್ಧಿ;

೫. ನ್ಯಾಯಾಂಗ ಸಂಬಂಧಿತ ಸಾರ್ವಜನಿಕ ಚಟುವಟಿಕೆಗಳು.

**ಪಟ್ಟಿ-೧ :** ಕರ್ನಾಟಕ ರಾಜ್ಯದಲ್ಲಿ ಭೂ-ಸ್ವಾಮ್ಯದ ರೀತಿ ಬೆಳೆದು ಬಂದ ಮಾರ್ಗ (ಹಿಡುವಳಿಗಳಲ್ಲಿರುವ ವಿಸ್ತಾರ ಸಾವಿರ ಎಕರೆಗಳಲ್ಲಿ)

| ಸಂ. | ಅಳತೆಯವರ್ಗ | ೧೯೭೦-೭೧ | ೧೯೭೬-೭೭ | ೧೯೮೦-೮೧ | ೧೯೮೫-೮೬ | ೧೯೯೦-೯೧ | ೧೯೯೫-೯೬ |
|---|---|---|---|---|---|---|---|
| ೧ | ತೀರ ಸಣ್ಣದು | ೫೪೯ | ೬೩೮<br>(೧೬.೨) | ೭೩೩<br>(೧೪.೯) | ೮೬೬<br>(೧೮.೨) | ೧೦೭೨<br>(೨೩.೭) | ೧೨೪೮<br>೧೬.೪) |
| ೨ | ಚಿಕ್ಕದು | ೧೨೨೧ | ೧೩೧೯<br>(೮.೦) | ೧೫೪೩<br>(೧೭.೦) | ೧೮೮೮<br>(೨೨.೪) | ೨೩೦೮<br>(೨೨.೨) | ೨೪೮೦<br>(೨೨.೩) |
| ೩ | ಅರೆಮಧ್ಯಮ | ೨೨೦೫ | ೨೨೮೮<br>(೩.೭) | ೨೫೭೨<br>(೧೨.೫) | ೨೮೮೦<br>(೧೧.೯) | ೩೨೦೦<br>(೧೧.೨) | ೩೨೯೮<br>(೧೧.೧) |
| ೪ | ಮಧ್ಯಮ | ೩೭೯೨ | ೩೮೫೮<br>(೧.೭) | ೪೦೧೮<br>(೪.೧) | ೩೮೮೧<br>(-೩.೪) | ೩೭೭೦<br>(-೨.೯) | ೩೪೮೯<br>(-೭.೪೫) |
| [illegible] | ದೊಡ್ಡದು | ೩೬೦೧ | ೩೨೫೪<br>(-೯.೬) | ೨೮೮೦<br>(-೧೧.೫) | ೨೩೬೪<br>(-೧೭.೯) | ೧೯೭೧<br>(-೧೬.೬) | ೧೫೯೩<br>(-೧೬.೬) |
| | ಮೊತ್ತ | ೧೧೩೬೮ | ೧೧೩೫೭<br>(-೦.೦೧) | ೧೧೭೪೬<br>(೩.೪) | ೧೧೮೭೯<br>(೧.೧) | ೧೨೩೨೧<br>(೩.೭) | ೧೨೨೧೯<br>(-೧.೭) |

ಸೂಚನೆ : ಪರ್ಯಾಯದಲ್ಲಿರುವ ಸಂಖ್ಯೆಗಳು ಹಿಂದಿನ ಗಣತಿಯ ಮೇಲಿನ ಹೆಚ್ಚುವರಿ/ಇಳಿತ ಶೇಕಡಾ ಮೌಲ್ಯವನ್ನು ಪ್ರತಿಪಾದಿಸುತ್ತವೆ.

(ಮೂಲ : ಆಯಾ ಸಂವತ್ಸರದ ಕೃಷಿ ಗಣತಿ - ಕರ್ನಾಟಕ ಸರ್ಕಾರ)

**ಭೂ ಸುಧಾರಣಾ ಕಾಯಿದೆಯಿಂದ ಆಗಬಹುದಾದ ಧನಾತ್ಮಕ ಅಂಶಗಳು**

೧. ಮಧ್ಯವರ್ತಿಗಳ ನಿರ್ಗಮನ;
೨. ಗುತ್ತಿಗೆಯ ಸುಧಾರಣೆಯ ಮೂಲಕ ನ್ಯಾಯಬದ್ಧ, ಗೇಣಿಯ ನಿರ್ಣಯ, ಗುತ್ತಿಗೆಯ ಕಾಲ ಪರಿಮಿತಿಯ ರಕ್ಷಣೆ, ಭೂ-ಸ್ವಾಮ್ಯದ ಹಕ್ಕಿನ ಕೊಡುಗೆ;
೩. ಭೂ-ಸ್ವಾಮ್ಯದ ಮಿತಿಯ ನಿಗದಿ;
೪. ಕೃಷಿಕ ವ್ಯವಸ್ಥೆಯ ಪುನರ್‌ರಚನೆಯಿಂದ ಸಣ್ಣ ಹಿಡುವಳಿಗಳನ್ನು ಒಂದಾಗಿಸುವುದು ಮತ್ತು ಹಿಡುವಳಿಗಳು ಛಿದ್ರವಾಗುವುದನ್ನು ತಡೆಯುವಿಕೆ ;
೫. ಸಹಕಾರಿ ಕೃಷಿಯ ಪ್ರೋತ್ಸಾಹ.

ಭೂ ಸುಧಾರಣೆಯ ಮೂಲ ಉದ್ದೇಶ – ಸುಧಾರಿತ ಕೃಷಿ , ಹಿಡುವಳಿಗಳ ಮಿತಿ, ಮಾಲಿಕತ್ವ ಕೇಂದ್ರೀಕರಣವನ್ನು ಸಮರ್ಥ ತಡೆಯುವುದು, ಭೂ-ಸಂಪತ್ತಿನ ಸಮರ್ಥ ಉಪಯೋಗ, ಆರ್ಥಿಕ ಅಭಿವೃದ್ಧಿ , ಯಾವುದೇ ಸಂಪತ್ತಿನ ಅಪವ್ಯಯದ ತಡೆ.

ಕರ್ನಾಟಕದಲ್ಲಿ ನಡೆದಿರುವ ಭೂ-ಸುಧಾರಣೆಯು ದೇಶದ ಉಳಿದ ರಾಜ್ಯಗಳಿಗಿಂತ ಹೆಚ್ಚು ಪರಿಣಾಮಕಾರಿಯಾಗಿದೆ. ಸುಧಾರಣೆಯ ವಿವಿಧ ಸೂತ್ರಗಳು ತುಂಬ ವ್ಯಾವಹಾರಿಕ ಹಾಗೂ ಪ್ರಶಸ್ತವಾಗಿವೆ. ಆದರೂ ಅವುಗಳ ಅನುಸಂಧಾನ ಮಾತ್ರ ಅಷ್ಟೊಂದು ಆಶಾದಾಯಕವಾಗಿಲ್ಲವೆಂಬುದು ಒಂದು ಅಭಿಮತ. ಹೆಚ್ಚುವರಿ ಭೂಮಿಯ ಪ್ರಾಪ್ತಿ, ಮಧ್ಯವರ್ತಿಗಳ ನಿರ್ಮೂಲನ, ಅತಿ ಹಳೆಯ ಹಾಗೂ ನೋಂದಾಯಿಸಿದ ಕೆಲವು ಗುತ್ತಿಗೆಗಳ ನಿರ್ಮೂಲನ – ಇವು ಈ ಯೋಜನೆಯ ಮುಖ್ಯ ಸಾಧನೆಗಳಾಗಿವೆ. ತಜ್ಞರ ಅಭಿಪ್ರಾಯದ ಪ್ರಕಾರ ಕೆಲವು ಲೋಪಗಳೆಂದರೆ – ಹೆಚ್ಚುವರಿ ಭೂಮಿಯ ಅಸಮರ್ಪಕ ಮರು-ವಿತರಣೆ, ಭೂಮಿಯ ಕಳಪೆ ಗುಣಮಟ್ಟ, ಸಣ್ಣ ಪ್ರಮಾಣದ ತುಂಡು ಭೂಮಿಯ ಆರ್ಥಿಕ ನಿರುಪಯೋಗತೆ, ಹಾಗೂ ನೋಂದಣಿಯಾಗದ ಗುತ್ತಿಗೆಗಳನ್ನು ತಡೆಯುವುದರಲ್ಲಿ ವೈಫಲ್ಯ.

ಮೇಲಿನ ಪಟ್ಟಿಯಲ್ಲಿ ಕಾಣಿಸಿರುವ ಮಾಹಿತಿಯ ಪ್ರಕಾರ ಅನೇಕರು ಕೃಷಿಯನ್ನು ತ್ಯಜಿಸುವುದರಿಂದ, ನಗರಗಳಲ್ಲಿ ನೆಲೆಸುವ (ಬಡತನದ ರೇಖೆಯಿಂದ ಕೆಳಗಿರುವವರ) ಜನಸಂಖ್ಯೆಯು ಹೆಚ್ಚಾಗುವ ಭೀತಿಯಿದೆ. ದೊಡ್ಡ ಮತ್ತು ಮಧ್ಯಮ ಗಾತ್ರದ ಹಿಡುವಳಿಗಳು ಶೀಘ್ರ ಗತಿಯಲ್ಲಿ ಕಡಿಮೆಯಾಗುತ್ತಿರುವುದು ಗೋಚರವಾಗುತ್ತಿದೆ. ಇದು ಕೃಷಿ ಉತ್ಪನ್ನದಲ್ಲಿ ಗುರುತರವಾದ ಬದಲಾವಣೆಯನ್ನು ಸದ್ಯದಲ್ಲಿ ತರದೆ ಇದ್ದರೂ, ಮುಂಬರುವ ಕಾಲದಲ್ಲಿ ಹಲವಾರು ಸಮಸ್ಯೆಗಳನ್ನು ತಂದೊಡ್ಡುವ ಸಾಧ್ಯತೆಗಳಿವೆ. ಹಿಡುವಳಿಗಳ ಸಂಖ್ಯೆಯ ವಿಂಗಡಣೆ ಹೀಗಿದೆ: ತೀರಾ ಸಣ್ಣದು ೨೨,೬೨,೦೦೦. ಸಣ್ಣದು ೧೫,೮೬,೦೦೦. ಅರೆ ಮಧ್ಯಮ ೧೧,೬೩,೦೦೦. ಮಧ್ಯಮ ಗಾತ್ರ ೬,೩೬,೦೦೦. ಮತ್ತು ದೊಡ್ಡ ಪ್ರಮಾಣದವು ೧,೨೯,೦೦೦. ಭೂಮಿಯ ಮಾಲಿಕತ್ವದಲ್ಲಿ ಹಿಡುವಳಿಯ ಮಿತಿಯನ್ನು ಹೀಗೆ ವಿಧಿಸಲಾಗಿದೆ: ನೀರಾವರಿಯಲ್ಲಿ ಎರಡು ಬೆಳೆ ಬೆಳೆದರೆ ೪.೦೫ರಿಂದ ೮.೧೦ ಎಕರೆ, ನೀರಾವರಿ ಮತ್ತು ಒಂದು ಬೆಳೆ:೧೦.೧೨ – ೧೨.೧೪ ಎಕರೆ ಮತ್ತು ಮಳೆಯಾಧಾರಿತವಾದರೆ ೨೧.೮೫ ಎಕರೆ. ಭೂಸ್ವಾಮ್ಯ ಕೇಂದ್ರೀಕರಣದ ಸೂಚ್ಯಂಕ ಅಖಿಲ ಭಾರತ ಮಟ್ಟದಲ್ಲಿ ೦.೭೧೩ ಇದ್ದು, ಇದು ಕರ್ನಾಟಕದಲ್ಲಿ ೦.೬೮೫ ರಷ್ಟಿದ್ದು ಉತ್ತಮವಾಗಿದೆ.

**ಕರ್ನಾಟಕ ರಾಜ್ಯದ ಭೂಸುಧಾರಣಾ ಕಾಯಿದೆಯಲ್ಲಿನ ತಿದ್ದುಪಾಟು, ೧೯೯೫ ಈ ಕೆಳಕಂಡ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ತಂದಿದೆ :**

೧. ಸುಮಾರು ೨೨೦ (೪೦ ಯುನಿಟ್‌ಗಳು) ಎಕರೆಗಳಷ್ಟು ಕೃಷಿ ಭೂಮಿಯನ್ನು ದಕ್ಷಿಣ ಕನ್ನಡ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮೀನುಗಾರಿಕೆಗಾಗಿ ೨೦ ವರ್ಷಗಳ ಕಾಲಾವಧಿಗಾಗಿ ಭೋಗ್ಯಕ್ಕೆ ತೆಗೆದುಕೊಳ್ಳಲು ಅವಕಾಶವಿದೆ.
೨. ರೂ. ೨ ಲಕ್ಷಕ್ಕೆ ಮೀರದ ಕೃಷಿಯೇತರ ಆದಾಯ ಉಳ್ಳವರು ಕೃಷಿ ಭೂಮಿಯನ್ನು ಕೊಳ್ಳಬಹುದು ಅಥವಾ ಪಾರಂಪರಿಕವಾಗಿ ಪಡೆಯಬಹುದು.
೩. ೧೦೮ ಎಕರೆಯವರೆಗಿನ ಕೃಷಿ ಭೂಮಿಯನ್ನು ಕೈಗಾರಿಕಾಭಿವೃದ್ಧಿಯ ಉದ್ದೇಶಗಳಿಗಾಗಿ ಕೊಳ್ಳಬಹುದು.
೪. ೨೮ ಎಕರೆಯವರೆಗಿನ ಭೂಮಿಯನ್ನು ಶೈಕ್ಷಣಿಕ ಸಂಸ್ಥೆಗಳು ಕೊಳ್ಳಬಹುದು.
೫. ೫೪ ಎಕರೆಯವರೆಗಿನ ಭೂಮಿಯನ್ನು ಪೂಜಾ ಸ್ಥಳ, ದೇವಾಲಯಗಳನ್ನು ನಿರ್ಮಿಸಲು ಕೊಳ್ಳಬಹುದು.
೬. ೫೪ ಎಕರೆಯವರೆಗಿನ ಭೂಮಿಯನ್ನು ವಸತಿ ಉದ್ದೇಶಕ್ಕಾಗಿ ಕೊಳ್ಳಬಹುದು.
೭. ೧೦೮ ಎಕರೆಯವರೆಗಿನ ಭೂಮಿಯನ್ನು ತೋಟಗಳಿಗಾಗಿಯೂ (ಪುಷ್ಪ ಕೃಷಿಯನ್ನೊಳಗೊಂಡು) ಕೃಷಿಪ್ರಧಾನ ಉದ್ಯೋಗಗಳಿಗೂ ಉಪಯೋಗಿಸಬಹುದು.

**ಕರ್ನಾಟಕ ಭೂ ಸುಧಾರಣಾ ಕಾಯಿದೆಯನ್ನು ಈ ಎರಡು ಉದ್ದೇಶಗಳನ್ನು ಗಮನದಲ್ಲಿರಿಸಿಕೊಂಡು ರೂಪಿಸಲಾಗಿದೆ:**

೧. ಈಗಾಗಲೇ ಇರುವ ಗುತ್ತಿಗೆದಾರರಿಗೆ ಭೂಸ್ವಾಮ್ಯದ ಹಕ್ಕಿನ ಕೊಡುಗೆ ;
೨. ಭೂಮಿತಿ ಕಾಯಿದೆಯ ಅಳವಡಿಕೆಯನಂತರ ಉಳಿದ ಹೆಚ್ಚುವರಿ ಭೂಮಿಯನ್ನು ಅರ್ಹರಾದ ಗುತ್ತಿಗೆದಾರರಿಗೆ ಮರು ವಿತರಣೆ.

ಈ ಕಾಯಿದೆಯು ಭೂ-ಮಿತಿಯನ್ನು ನಿಗದಿ ಮಾಡಿ, ಗುತ್ತಿಗೆದಾರರಿಗೆ ಭೂ ಸ್ವಾಮ್ಯದ ಕೊಡುಗೆ ನೀಡುವ ನಿಟ್ಟಿನಲ್ಲಿ ಸಾಕಷ್ಟು ಯಶಸ್ವಿಯಾಗಿದೆ. ೧೯೯೫ರಲ್ಲಿ ತಂದ ಇತ್ತೀಚಿನ ತಿದ್ದುಪಡಿಯವರೆಗೆ ಭೋಗ್ಯದ ಮೇಲೆ ಜಮೀನನ್ನು ಕೊಡುವ ಪದ್ಧತಿಗೆ ಹೆಚ್ಚು ಉತ್ತೇಜನ ಕೊಟ್ಟಿಲ್ಲ.

**ಆದರೆ ಈ ತಿದ್ದುಪಡಿಯ ನಂತರ ಸರ್ಕಾರವು ಈ ಕೆಳಕಂಡಷ್ಟು ಭೂ ಕ್ಷೇತ್ರವನ್ನು ಆಯಾ ಕೃಷಿಗಳಿಗೆ ಭೋಗ್ಯಕ್ಕೆ ಕೊಡಲು ಅನುಮತಿಯಿತ್ತಿದೆ :**

೧. ೪೦ ಎಕರೆಯಷ್ಟು - ಜಲಚರ ಕೃಷಿ
೨. ೨೦ ಎಕರೆಯಷ್ಟು - ಔದ್ಯೋಗಿಕಾಭಿವೃದ್ಧಿ
೩. ೪ ಎಕರೆಯಷ್ಟು - ರಾಜ್ಯ ಸರ್ಕಾರದ ಮಾನ್ಯತೆ ಪಡೆದ ಶೈಕ್ಷಣಿಕ ಸಂಸ್ಥೆಗಳು
೪. ೨೦ ಎಕರೆಯಷ್ಟು - ವಸತಿಯ ಉದ್ದೇಶಕ್ಕಾಗಿ
೫. ೨೦ ಎಕರೆಯಷ್ಟು - ತೋಟಗಾರಿಕೆ (ಪುಷ್ಪ ಕೃಷಿಯನ್ನೊಳಗೊಂಡು) ಹಾಗೂ ಕೃಷಿ ಪ್ರಧಾನ ಉದ್ಯೋಗಗಳಿಗೆ.

ಇದರಿಂದ ನಗರವಲಯ ಹಾಗೂ ಅರೆ-ಪಟ್ಟಣ ಪ್ರದೇಶಗಳಲ್ಲಿ, ಅನಿವಾಸಿ ಭೂಮಾಲಿಕರು ತೋಟಗಾರಿಕೆ - ಪುಷ್ಪ ಕೃಷಿಗಳಲ್ಲಿ ತೊಡಗಿಸಿರುವ ಭೂಮಿಯು ಹೆಚ್ಚಾಗುತ್ತಿದೆ. ವಾಸ್ತವದಲ್ಲಿ ಜಮೀನನ್ನು ಭೋಗ್ಯಕ್ಕೆ ಕೊಡದೆ, ವಿಕ್ರಯಿಸಿದ ಅನೇಕ ಕೃಷಿಕರು ತಮ್ಮ ಜಮೀನಿಗೆ ತಾವೇ ಗುತ್ತಿಗೆದಾರರಾಗಿ ಮಾರ್ಪಾಟಾಗಿರುವ ನಿದರ್ಶನಗಳಿವೆ.

ಕೇಂದ್ರ ಸರ್ಕಾರವು ಹಮ್ಮಿಕೊಂಡಿರುವ ಉದಾರೀಕರಣ ಮತ್ತು ಜಾಗತೀಕರಣಕ್ಕೆ ಪುಷ್ಟಿ ಕೊಡುವುದು ಮತ್ತು ಕರ್ನಾಟಕ ಸರ್ಕಾರದ ನೂತನ ಕೃಷಿ ನೀತಿ ಸಂಹಿತೆಯನ್ನು ಬಲಪಡಿಸುವುದೇ ಈ ತಿದ್ದುಪಡಿಯ ಮುಖ್ಯ ಉದ್ದೇಶವಾಗಿದೆ.

## ೪. ಭೂಮಿಯ ಬಳಕೆಯಲ್ಲಿ ಬರಬಹುದಾದ ಬದಲಾವಣೆಗಳ ಕ್ರಮ

ಕಳೆದ ೪೦ ವರುಷಗಳ (೧೯೫೫-೫೬ ರಿಂದ ೯೫-೯೬) ರಾಜ್ಯ ಹಾಗೂ ಜಿಲ್ಲಾಮಟ್ಟದ ವಿವಿಧ ಭೂ-ಉಪಯೋಗದ ಮಾಹಿತಿಗಳ ವಿಶ್ಲೇಷಣೆ ಆಗಬೇಕಾಗಿದೆ. ಆರ್ಥಿಕ ಅಂಕಿ-ಸಂಖ್ಯೆಗಳು ಸರ್ಕಾರದ ನಿರ್ದೇಶನಾಲಯದಿಂದ ಉಪಲಬ್ಧವಿರುವ ಅಧಿಕ ಮಾಹಿತಿಯ ಪ್ರಕಾರ ರಾಜ್ಯದ ಒಟ್ಟಾರೆ ಭೂ ಸಂಪತ್ತನ್ನು ೯ ವರ್ಗಗಳನ್ನಾಗಿ ವಿಂಗಡಿಸಲಾಗಿದೆ. ಇನ್ನೂ ಹೆಚ್ಚಿನ ವಿವರಗಳಿಗೆ ವ್ಯಾಪಕ ಅಧ್ಯಯನದ ಅವಶ್ಯಕತೆಯಿದೆ.

ಮೇಲ್ಕಂಡ ವರದಿಯ ಪ್ರಕಾರ ಶಿವಮೊಗ್ಗ, ಹಾಸನ, ಬಿದರೆ, ಗುಲ್ಬರ್ಗ, ರಾಯಚೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ 'ಅಡವಿ'ಯ ವರ್ಗದಲ್ಲಿ ಶೇಕಡಾ ೧ಕ್ಕಿಂತ ಹೆಚ್ಚು ವಾರ್ಷಿಕ ಅಭಿವೃದ್ಧಿಯು ಕಂಡುಬಂದಿದೆ. ಚಿತ್ರದುರ್ಗ,ಚಿಕ್ಕಮಗಳೂರು ಮೈಸೂರು ಮತ್ತು ಧಾರವಾಡ ಜಿಲ್ಲೆಗಳಲ್ಲಿ ಇದು ಶೇಕಡಾ ೧ಕ್ಕಿಂತ ಸ್ವಲ್ಪ ಕಡಿಮೆ. ಬೆಂಗಳೂರು, ಕೋಲಾರ, ತುಮಕೂರು, ದಕ್ಷಿಣ ಕನ್ನಡ, ಕೊಡಗು ಮತ್ತು ಬೆಳಗಾಂ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಶೂನ್ಯ ಅಭಿವೃದ್ಧಿಯನ್ನು ಗುರುತಿಸಲಾಗಿದೆ. ಶೇಕಡಾ ೮೦ರಷ್ಟು ಅಡವಿಯನ್ನೊಳಗೊಂಡಿರುವ ಉತ್ತರ ಕನ್ನಡ ಜಿಲ್ಲೆಯಲ್ಲಿಯೂ, ಶೇಕಡಾ ೧೩ರಷ್ಟು ಅಡವಿಯನ್ನೊಳಗೊಂಡಿರುವ ಬಳ್ಳಾರಿ ಜಿಲ್ಲೆಯಲ್ಲಿಯೂ ನಕಾರಾತ್ಮಕ ಬೆಳವಣಿಗೆ ಗಮನಕ್ಕೆ ಬಂದಿದೆ.

ಬೆಂಗಳೂರು, ಹಾಸನ ಮತ್ತು ಕೋಲಾರ ಜಿಲ್ಲೆಗಳಲ್ಲಿ ಬಂಜರು ಹಾಗೂ ಕೃಷಿಗೆ ಒಳಪಡದ ಭೂಮಿಯ ಪ್ರಮಾಣವು ವಾರ್ಷಿಕ ಶೇಕಡಾ ೧ಕ್ಕಿಂತ ಹೆಚ್ಚು ಅಭಿವೃದ್ಧಿಯಾಗುತ್ತಿದೆ. ಈ ಕ್ಷೇತ್ರವು ಮಂಡ್ಯ, ಬಿಜಾಪುರ, ಉತ್ತರ ಕನ್ನಡ, ಬಳ್ಳಾರಿ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ವಾರ್ಷಿಕ ಶೇಕಡಾ ೧ಕ್ಕಿಂತ ಕಮ್ಮಿ ಅಭಿವೃದ್ಧಿಯಾಗುತ್ತಲೂ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಬೆಳಗಾಂ, ಧಾರವಾಡ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಕಮ್ಮಿಯಾಗುತ್ತಲೂ ಇದೆ. ಚಿತ್ರದುರ್ಗ, ತುಮಕೂರು, ದಕ್ಷಿಣ ಕನ್ನಡ, ಕೊಡಗು ಮತ್ತು ಬಿದರೆ ಜಿಲ್ಲೆಗಳಲ್ಲಿ ಯಾವ ರೀತಿಯ ಬೆಳವಣಿಗೆಯನ್ನೂ ಈ ಕ್ಷೇತ್ರದಲ್ಲಿ ಗುರುತಿಸಲಾಗಿಲ್ಲ.

ಒಟ್ಟು ಬಿತ್ತಿದ್ದ ಭೂಮಿ, ಕಾಡಿನ ಪ್ರದೇಶ ಹಾಗೂ ಕೃಷಿಯೇತರ ಭೂಮಿಯ ವರ್ಗಗಳಲ್ಲಿ ಕ್ರಮವಾಗಿ ವಾರ್ಷಿಕವಾಗಿ ೦.೧೨, ೦.೪೨ ಮತ್ತು ೧.೨೮ರಷ್ಟು ಬೆಳವಣಿಗೆ ಗಮನಾರ್ಹವಾಗಿದ್ದರೂ ಅದೇ ಕಾಲದಲ್ಲಿ ಪಾಳುಬಿದ್ದ ಭೂಮಿಯ ಲೆಕ್ಕದಲ್ಲಿ ವಾರ್ಷಿಕವಾಗಿ ಶೇಕಡ ೧.೦೪ರಷ್ಟು ವೃದ್ಧಿ ಗುರುತಿಸಿರುವುದು ಆತಂಕಕಾರಿಯೂ ಆಗಿದೆ.

ಒಂಭತ್ತು ಜಿಲ್ಲೆಗಳಲ್ಲಿ ಕೃಷಿಯೇತರ ಬಳಕೆಯಲ್ಲಿ ಶೇ. ೧ಕ್ಕಿಂತ ಹೆಚ್ಚುವರಿ ಕಂಡುಬಂದರೆ ಐದು ಜಿಲ್ಲೆಗಳಲ್ಲಿ ಶೇ. ೧ಕ್ಕಿಂತ ಕಡಿಮೆ ಹೆಚ್ಚುವರಿ ಗಮನಕ್ಕೆ ಬಂದಿದೆ. ಶಿವಮೊಗ್ಗ, ಬಿದರೆ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮಾತ್ರ ಯಾವ ರೀತಿಯ ಬೆಳವಣಿಗೆಯೂ ಈ ವರ್ಗದಲ್ಲಿ ಕಂಡುಬಂದಿಲ್ಲ. ಕೃಷಿ ಮಾಡಬಹುದಾದಂತಹ, ಆದರೆ ಪಾಳುಬಿಟ್ಟ ಭೂಮಿಯ ವರ್ಗದಲ್ಲಿ ಬೀದರ್ ಜಿಲ್ಲೆಯಲ್ಲಿ ಹೆಚ್ಚಾಗುತ್ತಲೂ, ಉಳಿದ ೧೮ ಜಿಲ್ಲೆಗಳಲ್ಲಿ ಅದು ಕಮ್ಮಿಯಾಗುತ್ತಲೂ ಇವೆ.

**ಪಟ್ಟಿ -೨ : ಭೂ ಸುಧಾರಣಾ ಕಾಯಿದೆಯ ಪರಿಣಾಮಗಳು ಹಾಗೂ ಮುಂಬರಬಹುದಾದ ಬದಲಾವಣೆಗಳು :**

| ಸಂ. | ಭೂಸುಧಾರಣಾ ಅಂಶ | ಪರಿಣಾಮ ಹಾಗೂ ಮುಂಬರಬಹುದಾದ ಬದಲಾವಣೆಗಳು |
|---|---|---|
| ೧. | ಮಧ್ಯವರ್ತಿಗಳ ನಿರ್ಮೂಲ | ಯಶಸ್ವಿ - ಆದರೆ ಇದು ಬೇರೆ ಬೇರೆ ರೂಪಗಳಲ್ಲಿ ಮತ್ತೆ ನುಸುಳಿ ಬರುವ ಸಂಭವವಿದೆ. |
| ೨. | ಗೇಣಿಯ ನಿಗದಿ, ಗುತ್ತಿಗೆದಾರರಿಗೆ ಗುತ್ತಿಗೆಯ ಭದ್ರತೆ, ಭೂಸ್ವಾಮ್ಯದ ಕೊಡುಗೆ - ಇವುಗಳ ನ್ನೊಳಗೊಂಡ ಭೂ ಸುಧಾರಣಾ ತಿದ್ದುಪಡಿ | ಭಾಗಶಃ ಯಶಸ್ವಿ - ಪರಿಣಾಮ: ನೋಂದಣಿರಹಿತ ಮರೆಮಾಚಿದ ಗುತ್ತಿಗೆ ಮತ್ತು ಗುತ್ತಿಗೆಯ ವಿಲೋಮ ಪ್ರತಿಕ್ರಿಯೆ; ಗುತ್ತಿಗೆಯನ್ನು ಮಾರುಕಟ್ಟೆಯಲ್ಲಿ ವಾಣಿಜ್ಯ ಪ್ರಕ್ರಿಯೆಯಾಗಿ ಹೊಂದಿಸುವ ಕಾಲ ಬರಬಹುದು. |
| ೩. | ಭೂ-ಸ್ವಾಮ್ಯದ ಮಿತಿ ನಿಗದಿ | ಭಾಗಶಃ ಯಶಸ್ವಿ - ಮುಂಬರುವ ಕಾಲದಲ್ಲಿ ಇದು ನಿಲ್ಲಲಾರದು. |
| ೪. | ಕೃಷಿ ವಿಧಾನಗಳ ಪುನರ‍್ರಚನೆ, ಹಿಡುವಳಿಗಳನ್ನು ಒಟ್ಟುಗೂಡಿಸುವಿಕೆ, ಭೂಮಿಯು ಛಿದ್ರವಾಗುವುದನ್ನು ತಡೆಯುವಿಕೆ. | ಹಿಡುವಳಿಗಳ ಒಟ್ಟುಗೂಡಿಸುವಿಕೆ ರಾಜ್ಯ ಸರ್ಕಾರದ ಪ್ರಯತ್ನಗಳಿಂದ ಅಥವಾ ಸಹಕಾರಿ ಸಂಸ್ಥೆಗಳಿಂದ ಯಶಸ್ವಿಯಾಗುವ ಸಾಧ್ಯತೆ ಹೆಚ್ಚಿದೆ. |
| | **ಸೂಚಿಸಲ್ಪಟ್ಟ ಬದಲಾವಣೆಗಳಿಂದ ಆಗಬಹುದಾದ ಪರಿಣಾಮಗಳು** | |
| ೧. | ಸಹಕಾರಿ ಕೃಷಿ ಆಯೋಜನೆ | ಸಣ್ಣ/ಪುಟ್ಟ ಕೃಷಿಕಾರರು ಸಹಕಾರಿ ಸಂಸ್ಥೆಗಳಲ್ಲದೆ ಬೇರೆ ರೀತಿಯ ಗುಂಪು ಚಟುವಟಿಕೆಗಳಲ್ಲಿ ತೊಡಗಬಹುದು. |
| ೨. | ಹೆಚ್ಚಿಸಲಾದ ಭೂ ಸ್ವಾಮ್ಯದ ನಿಗದಿ (ಶೈಕ್ಷಣಿಕ ಸಂಸ್ಥೆ, ಔದ್ಯೋಗಿಕ, ವಸತಿ ಹಾಗೂ ತೋಟಗಾರಿಕೆ ಚಟುವಟಿಕೆಗಳಿಗಾಗಿ) | ಸಮರ್ಥ ವ್ಯಕ್ತಿಗಳ ಕೈಯಲ್ಲಿ ಹೆಚ್ಚು ಹೆಚ್ಚು ಭೂಮಿಯ ಕೇಂದ್ರೀಕರಣ. |
| ೩. | ಕೃಷಿ ಪದದ ಅರ್ಥದ ಪರಿಧಿಯ ವಿಸ್ತರೀಕರಣ | ಹಾಗಾದರೆ ಲಭ್ಯ ಅವಕಾಶಗಳ ದುರುಪಯೋಗದ ಸಾಧ್ಯತೆ ಹೆಚ್ಚು. |
| ೪. | ಕೃಷಿ ಉದ್ದೇಶಗಳಲ್ಲದ ಹಿಡುವಳಿಗಳ ಉದಾರೀಕರಣ | ಇದು ಮುಂಚೆಯೂ ನಡೆಯುತ್ತಿದ್ದುದೇ. ಇದರಿಂದ ಭೂಮಾಲೀಕತ್ವ ಕೇಂದ್ರೀಕರಣ ಹೆಚ್ಚಬಹುದು. |

ಇತರೆ ಮರಗಿಡಗಳು ಬೆಳೆದಿರುವ ಭೂಮಿಯ ವರ್ಗದಲ್ಲಿ (ಉಳುಮೆ ಮಾಡದೆ ಇರುವ ಭೂಮಿಯಲ್ಲಿ ಸೇರಿರುವ ಭಾಗ) ಹೆಚ್ಚುವರಿಯನ್ನು ಬೆಂಗಳೂರು, ಚಿಕ್ಕಮಗಳೂರು, ಮಂಡ್ಯ, ಮೈಸೂರು, ಬೆಳಗಾಂ, ಉತ್ತರ ಕನ್ನಡ, ಬೀದರ್, ರಾಯಚೂರು, ಚಿತ್ರದುರ್ಗ, ಕೋಲಾರ ಮತ್ತು ಬಳ್ಳಾರಿಯಲ್ಲಿ ಕಾಣಲಾಗಿದೆ. ಈ ವರ್ಗದಲ್ಲಿ ಶಿವಮೊಗ್ಗ ತುಮಕೂರು, ದಕ್ಷಿಣ ಕನ್ನಡ, ಕೊಡಗು, ಬಿಜಾಪುರ, ಧಾರವಾಡ ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ನಕಾರಾತ್ಮಕ ಬೆಳವಣಿಗೆಯನ್ನು ಗುರುತಿಸಲಾಗಿದೆ.

ಕೃಷಿಯಲ್ಲಿ ತರಲಾದ ಭೂಮಿಯ ವರ್ಗದಲ್ಲಿ ಬೆಂಗಳೂರು, ಚಿಕ್ಕಮಗಳೂರು, ಕೊಡಗು, ಚಿತ್ರದುರ್ಗ, ಕೋಲಾರ, ಶಿವಮೊಗ್ಗ, ತುಮಕೂರು, ದಕ್ಷಿಣ ಕನ್ನಡ, ಹಾಸನ, ಮಂಡ್ಯ, ಮೈಸೂರು ಮತ್ತು ಬಿದರೆ ಜಿಲ್ಲೆಗಳಲ್ಲಿ ವಾರ್ಷಿಕ ಶೇ. ೧ಕ್ಕಿಂತ ಹೆಚ್ಚು ಬೆಳವಣಿಗೆಯೂ, ಬೆಳಗಾಂ, ಬಿಜಾಪುರ, ಧಾರವಾಡ, ಉತ್ತರ ಕನ್ನಡ, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳಲ್ಲಿ ನಕಾರಾತ್ಮಕ ಅಭಿವೃದ್ಧಿಯೂ, ಬಳ್ಳಾರಿ ಜಿಲ್ಲೆಯಲ್ಲಿ ಯಾವ ರೀತಿಯ ಅರ್ಥಪೂರ್ಣ ಬೆಳವಣಿಗೆಯ ಅಭಾವವೂ ಕಂಡುಬರುತ್ತವೆ.

ಪಾಳುಬಿದ್ದ ಭೂಮಿಯನ್ನು ಕೃಷಿಗೆ ಯೋಗ್ಯವಾಗಿ ಪರಿವರ್ತಿಸುವ ಕಾರ್ಯದಲ್ಲಿ ಯಾವ ರೀತಿಯ ಪ್ರಗತಿಯೂ ನಡೆದಿಲ್ಲ. ಬೆಂಗಳೂರು, ಕೊಡಗು, ಮೈಸೂರು, ಬೆಳಗಾಂ, ಬಿಜಾಪುರ, ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಈ ಪಾಳುಭೂಮಿಯ ವರ್ಗದಲ್ಲಿ ವಾರ್ಷಿಕ ಶೇ. ೧ಕ್ಕಿಂತ ಹೆಚ್ಚು ಬೆಳವಣಿಗೆಯೂ, ಮತ್ತು ಮಂಡ್ಯ ಜಿಲ್ಲೆಯಲ್ಲಿ ಶೇ. ೧ಕ್ಕಿಂತ ಕಡಿಮೆ ಹೆಚ್ಚುವರಿಯೂ ಆಗಿದೆ. ಚಿಕ್ಕಮಗಳೂರು, ದಕ್ಷಿಣ ಕನ್ನಡ, ಹಾಸನ ಮತ್ತು ಬಿದರೆ ಜಿಲ್ಲೆಗಳಲ್ಲಿ ಯಾವ ಹೆಚ್ಚುವರಿಯೂ ಕಂಡುಬಂದಿಲ್ಲ.

**೫. ಭೂ-ಬಳಕೆಯ ನೀತಿಯ ರಚನಾ ವಿಧಾನ:**

ಭೂ ಸಂಪನ್ಮೂಲವು ಹಣದ ಬಂಡವಾಳದಂತೆ ಅಮಿತ ಸಮೃದ್ಧಿಯಿಂದ ಕೂಡಿಯೂ ಸುಲಭವಾಗಿ ಪುನರುಜ್ಜೀವನಗೊಳಿಸಬಹುದಾದ ಸಂಪನ್ಮೂಲವೂ ಆಗಿರದೆ ಇರುವುದರಿಂದ ಅದರ ಬಳಕೆಯಲ್ಲಿ ಅದರ ಕ್ಷಮತೆಯನ್ನೂ, ಅವನತಿಯನ್ನೂ ಸುಲಭವಾಗಿ ಗುರುತಿಸಬಹುದು. ಇದಲ್ಲದೆ ಭೂಮಿಯು ಅತಿ ಶೀಘ್ರಗತಿಯಲ್ಲಿ ಆರ್ಥಿಕ ಅವನತಿ ಹಾಗೂ ಪರಿಸರ ಅವನತಿಗೆ ಒಳಗಾಗುವುದರಿಂದ ಅದನ್ನು ಮರಳಿ ಸತ್ವಭರಿತವಾಗಿ ಮಾಡಿ, ಆರ್ಥಿಕವಾಗಿ ಉತ್ಕರ್ಷವನ್ನು ತರುವುದು ತುಂಬ ಸಮಯ ಹಿಡಿಯುವ ಕೆಲಸವಾಗಿದೆ. ಈ ಕಾರಣದಿಂದ ಭೂ ಬಳಕೆಯನ್ನು ನಿರ್ಧರಿಸುವಾಗ ಅತ್ಯಂತ ಜಾಗರೂಕತೆಯ ಅವಶ್ಯಕತೆಯಿದೆ.

**ಯಾವ ಭೂ-ಬಳಕೆಯ ನೀತಿಯಾದರೂ ಈ ಕೆಳಕಂಡ ಅಂಶಗಳನ್ನು ಧ್ಯೇಯವಾಗಿಟ್ಟುಕೊಳ್ಳುವುದು ಅಪೇಕ್ಷಣೀಯ:**

೧. ಪ್ರತಿಬಂಧಕ ವಿಧಾನಗಳ ಉಪಯೋಗದಿಂದ ಭೂಮಿಯ ಅವನತಿಯನ್ನು ತಡೆಯುವುದು.

೨. ಈಗಾಗಲೇ ಬಂಜರಾಗಿರುವ ಭೂಮಿಯ ಉತ್ಪನ್ನತೆಯನ್ನು ಅಭಿವೃದ್ಧಿಗೊಳಿಸಲು ಉಪಾಯಗಳನ್ನು ಮಾಡುವುದು.

೩. ಬೆಳೆಯುತ್ತಿರುವ ಜನಸಂಖ್ಯೆಗೆ ಆಹಾರವನ್ನು ಒದಗಿಸುವುದು.

೪. ಭೂಸತ್ವ, ಆರ್ಥಿಕ ಹಾಗೂ ಪರಿಸರ ಕ್ಷಮತೆಗಳ ಆಧಾರದ ಮೇಲೆ ಭೂ ಸಂಪತ್ತನ್ನು ವಿವಿಧ ಬಳಕೆಗಳಿಗಾಗಿ ವಿಂಗಡಿಸುವುದು.

೫. ಭೂಮಿಯ ಸೂಕ್ತ ಬಳಕೆಗಾಗಿ ಹಾಗೂ ವಿಧಿಸಿದ ನಿಯಮಗಳ ಸಮರ್ಪಕ ಪರಿಪಾಲನೆಗಾಗಿ ಸಮರ್ಥ ಆಡಳಿತ ವರ್ಗದ ನೇಮಕ/ನಿರ್ಮಾಣ.

ಭಾರತದಲ್ಲಿ ಭೂ ಬಳಕೆಯನ್ನು ಕುರಿತಂತೆ ಎಲ್ಲ ಕ್ಷೇತ್ರಗಳನ್ನೂ ಒಳಗೊಂಡ ಸಮಗ್ರ ನೀತಿ ಇಲ್ಲವಾಗಿದೆ. ಹೀಗಾಗಿ ಭೂಮಿಯ ಅಸಮರ್ಪಕ ಬಳಕೆ ಹಾಗೂ ದುರ್ಬಳಕೆ ಹೆಚ್ಚುತ್ತಿದೆ. ಈ ಸಂದರ್ಭದಲ್ಲಿ ಮಧ್ಯಕಾಲೀನ ಹಾಗೂ ಬಹುಕಾಲೀನವಾದ, ತಾಂತ್ರಿಕವಾಗಿ ಸಮರ್ಪಕವಾದ, ಮಾಹಿತಿಗಳಿಂದ ತುಂಬಿದ ನೀತಿ ಪ್ರತಿಪಾದನೆ ತುರ್ತು ಅಗತ್ಯ. ಅಂಥದೊಂದು ದೂರದರ್ಶಿ ನೀತಿಯು ಈ ವಿಷಯಗಳನ್ನು ಒಳಗೊಂಡಿರಬೇಕಾಗಿದೆ.

೧. ಅದು ರಾಜ್ಯದ ಒಟ್ಟಾರೆ ಅದೇ ಸಮಯ ಜಿಲ್ಲೆಯ ಮಟ್ಟದ್ದು ಆಗಿರಬೇಕು.

೨. ಅದು ಕೃಷಿಯನ್ನು ಆರ್ಥಿಕ ವ್ಯವಸ್ಥೆಯ ಇತರ ಕ್ಷೇತ್ರಗಳೊಡನೆ ಸಂಬಂಧಿಸುವಂತಿರಬೇಕು. ಅರಣ್ಯ ನೀತಿ ಮತ್ತು ಕೃಷಿ ಆಧಾರಿತ ಕೈಗಾರಿಕೆಗಳ ಸಂಬಂಧವನ್ನು ಸಮನ್ವಯಿಸಬೇಕು. ಅವುಗಳ ಸಾಮಾಜಿಕ ಅರ್ಥವತ್ತತೆಯನ್ನು, ಆರ್ಥಿಕ ಉದ್ದೇಶಗಳನ್ನು, ಪರಿಸರದ ಗುರಿಗಳನ್ನು ಗಮನದಲ್ಲಿಟ್ಟುಕೊಂಡಿರಬೇಕು.

೩. ಭೂ ನೀತಿಯನ್ನು ಸಾಮಾಜಿಕ ಉದ್ದೇಶವಾಗಿ ವಿವರಿಸಬೇಕು. ಅದರಲ್ಲಿ ಕಂದಾಯ ತಪ್ಪಿಸಿಕೊಳ್ಳುವುದಕ್ಕಾಗಿ ಕೃಷಿಕಾರ್ಯದಲ್ಲಿ ತೊಡಗುವುದನ್ನು ತಡೆಗಟ್ಟಬೇಕು. ಹಾಗೂ ಅದನ್ನು ಅತಿ ನಿಕೃಷ್ಟ ಹಂತದ ಜೀವನವನ್ನು ಸಾಗಿಸುವ ಬಡವರ ಉದ್ಯೋಗವಾಗಿಯೂ ನೋಡಲಾಗದು. ಕೃಷಿ ವರಮಾನದ ಮೇಲೆ ತೆರಿಗೆ, ಸಮರ್ಥ ಉತ್ಪಾದಕ ಸದ್ಬಳಕೆಯನ್ನು ಪ್ರೋತ್ಸಾಹಿಸುವ ರೀತಿಯ ನೆಲಗಂದಾಯ, ಅರಣ್ಯ ಭೂಮಿಯ ಒಡೆತನವನ್ನು ಗುರುತಿಸುವುದು – ಇವುಗಳಿಂದ ಆರ್ಥಿಕ ಹಾಗೂ ಪರಿಸರ ಸಂರಕ್ಷಣೆಯ ಗುರಿಯನ್ನು ಸಾಧಿಸುವುದು. ಭೂ ಬಳಕೆಯನ್ನು ನಿರಂತರ ಗಮನಿಸುವ ವ್ಯವಸ್ಥೆ ಮತ್ತು ಭೂ ಕಂದಾಯವನ್ನು ವಿಧಿಸುವ ಜವಾಬ್ದಾರಿಯನ್ನು ಸ್ಥಳೀಯ ಸಂಸ್ಥೆಗಳಿಗೆ ವಹಿಸಬೇಕು. ಜಿಲ್ಲಾಮಟ್ಟದ ಬೋರ್ಡ್‌ಗಳು ಇವಕ್ಕೆ ಬೇಕಾದ ಮಾರ್ಗದರ್ಶನ ನೀಡುವುದು, ತಾಂತ್ರಿಕ ಸಾಂಸ್ಥಿಕ ಬೆಂಬಲ ನೀಡುವುದು, ಸುಗ್ಗಿಯ ನಂತರದ ಅಗತ್ಯ ಸಹಾಯಗಳನ್ನು ನೀಡುವುದು, ಮುಂತಾದ ಕೆಲಸಗಳನ್ನು ವಹಿಸಿಕೊಳ್ಳಬೇಕು.

ಲಭ್ಯವಿರುವ ಮಾಹಿತಿಗಳ ಆಧಾರದ ಮೇಲೆ ತಾಂತ್ರಿಕ ರೀತಿಯನ್ನು ಅಳವಡಿಸಿ ಅಭ್ಯಾಸ ಮಾಡಿದಾಗ ವರ್ಷ ೨೦೨೦ರಲ್ಲಿ ಬಿತ್ತಿದ ಭೂಮಿಯ ಪ್ರಮಾಣ ಶೇ. ೫೭ರಷ್ಟಾಗಿ ನೆಲೆಯೂರುವುದೆಂದು ಕಂಡುಬರುತ್ತದೆ. ಶೇ. ೧೮ರಷ್ಟು ಅರಣ್ಯ ಪ್ರದೇಶವಿರುವುದೆಂದೂ ಸೂಚಿಸುತ್ತದೆ. ಭೂಮಿಯನ್ನು ಬದುಕಿಗಾಗಿ ಆಧಾರವಾಗಿಸಿಕೊಂಡ ಜನಸಂಖ್ಯೆಯ ಶೇ. ೬೭ ರಷ್ಟು ವಯಸ್ಕರೆಂದು ೧೯೯೧ರ ಮಾಹಿತಿಯ ಆಧಾರದ ಮೇಲೆ ಹೇಳಬಹುದು. ಬರುವ ೨೦೨೦ರಲ್ಲಿ ಶೇ. ೬೭ರಷ್ಟು ಅಂದಿನ ವಯಸ್ಕ ಜನಸಂಖ್ಯೆ ಕೃಷಿಯನ್ನೇ ಆಧರಿಸಿ ಬದುಕಬೇಕಾದರೆ ಇನ್ನೂ ೧೪೭ ಲಕ್ಷ ಎಕರೆಗಳಷ್ಟು ಅಧಿಕ ಬಿತ್ತನೆ ಭೂಮಿಯನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಆದರೆ ಲಭ್ಯವಿರುವ ಮಾಹಿತಿಯಂತೆ ಸುಮಾರು ೧೯ ಲಕ್ಷ ಹೆಕ್ಟೇರುಗಳಷ್ಟು ಹೊಸ ಭೂಮಿ ಈ ವರ್ಗದಲ್ಲಿ ಸಿಗಬಹುದು. ಅಂದರೆ ಅಪೇಕ್ಷಿತ ಮಟ್ಟವನ್ನು ಉಳಿಸಿಕೊಳ್ಳಲು ಸುಮಾರು ೪೦ ಲಕ್ಷ ಹೆಕ್ಟೇರುಗಳಲ್ಲಿ ಎರಡು ಬೆಳೆಯನ್ನು ಹೊಸದಾಗಿ ರೂಢಿಸಿಕೊಳ್ಳಬೇಕಾಗುತ್ತದೆ.

ನೀತಿ ನಿರೂಪಣೆ ಮತ್ತು ಅದರ ನಿರ್ವಹಣೆಯ ಮೇಲೆ ಸತತ ನಿಗಾ ಇಡುವ ವ್ಯವಸ್ಥೆಯನ್ನು

# ಹೆಣಗಳು, ಹುಟ್ಟಿಸುವ ಆಟ ಆಡುತ್ತಿವೆ

ಕಾಲ ನನ್ನನ್ನು ಕೊಲ್ಲುತ್ತಿದೆ.
ನಾನೂ ಕಾಲವನ್ನು ಕೊಲ್ಲುತ್ತಿದ್ದೇನೆ
ನಾನು ಕಾಲನ ಕೂಸು
ನಾವೀಗ ಕೊಲೆಗಡುಕರು.

ಕೊಲ್ಲದೇ ಇರಲು ಹೇಗೆ ಸಾಧ್ಯ, ಹೇಳಿ
ಕನಿಷ್ಠ ಪಕ್ಷ ಕೊಲೆಗಡುಕತನವನ್ನಾದರೂ -
ಕೊಲ್ಲದೇ ಹೋದರೆ
ಜೀವದ ಬಗ್ಗೆ, ಪ್ರೀತಿಯ ಬಗ್ಗೆ
ಮಾತಾಡಲು ಯಾವ ಹಕ್ಕಿದೆ ನಮಗೆ.

ಈ ಹೊತ್ತು ಮಾತಾಡುವುದಲ್ಲ
ಮಾಡುವುದು... ಏನನ್ನಾದರೂ
ಕನಿಷ್ಠ ಪಕ್ಷ ಒಂದೇ ಒಂದು ಕೊಲೆಯನ್ನಾದರೂ
ಮಾಡಬೇಕು.
ಕನಿಷ್ಠ ಪಕ್ಷ ಹತ್ತು ಜೀವಗಳಾದರೂ
ಉಳಿಯಬೇಕು.
ಹುಟ್ಟಿಸುವ ತಾಕತ್ತಿಲ್ಲದಿದ್ದರೆ
ಕನಿಷ್ಠ ಪಕ್ಷ, ತಾನಾಗೇ ಹುಟ್ಟಿದ
ಒಂದು ಹುಲ್ಲಿನ ದಳವನ್ನಾದರೂ
ಒಂದೇ ಒಂದು ಹೂಬಳ್ಳಿಯನ್ನಾದರೂ
ಕನಿಷ್ಠ ಪಕ್ಷ...ಹೂಬಳ್ಳಿಯಲಿ ಹುಟ್ಟಿದ
ಒಂದೇ ಒಂದು ಮೊಗ್ಗನ್ನಾದರೂ
ಉಳಿಸಿಕೊಳ್ಳಬೇಕು




ನರಸತ್ತ, ನಿಸ್ಸತ್ವ, ನಿರ್ಲಜ್ಜತನದಿಂದ
'ಜೀವಂತ ಹೆಣ'ದಂತೆ ಜೀವಿಸುತ್ತಿರುವ ಈ ಹೊತ್ತು
ನಾಳೆಗಳನ್ನು ಹುಟ್ಟಿಸುವ ತಾಕತ್ತಿಲ್ಲದಿದ್ದರೆ
ಕನಿಷ್ಠ ಪಕ್ಷ, ತಾನಾಗೇ ಹುಟ್ಟಿದ ಇವತ್ತನ್ನಾದರೂ
ಕನಿಷ್ಠ ಪಕ್ಷ, ನಿನ್ನೆಯ ಬಸಿರನ್ನಾದರೂ
ಬಚಾವು ಮಾಡಬೇಕು ತ್ರಿಶೂಲಗಳಿಂದ.
ಏಕೆಂದರೆ... ಇದು ಕನಿಷ್ಠ ಕಾಲ.

* * *

ಹೆಣಗಳೇ ಈಗ ದೇಶವಾಳುತ್ತಿವೆ
ಶಿಖಂಡಿಗೆ ಸೇನಾಪತಿ ಎನ್ನಲಾಗುತ್ತಿದೆ
''ಸತ್ತ ನಾಯಿಯೊಂದು ಹೂದೋಟ ಕಾಯುತ್ತಿದೆ''
ನಮ್ಮ ತೆಂಗುತೋಟಗಳಿಗೀಗ ನುಸಿ ಹತ್ತಿದೆ
ಒಂದು ನುಸಿ ಸಂತಾನ... ಸಾಮ್ರಾಜ್ಯವಾಗಿ
ಶತಕೋಟಿ ಕಲ್ಪವೃಕ್ಷಗಳನ್ನು ಕೊರಡಾಗಿಸುತ್ತಿದೆ.
ಒಂದೇ ಒಂದು ನುಸಿ ಸಂತಾನ
ಜೀವದ್ರವ್ಯವನ್ನೇ ಬತ್ತಿಸಿ ಕರಟವಾಗಿಸುತ್ತಿದೆ
ತೋಟಗಳ ಸೃಷ್ಟಿಕರ್ತನನ್ನು ಸಾವಿನಿಂದ ಸಿಂಗರಿಸುತ್ತಿದೆ.

ಒಂದೇ ಒಂದು ಸೊಳ್ಳೆ
ರಾಮ ಬೇನೆ ತಂದು ಊರನ್ನೇ ಸ್ಮಶಾನ ಮಾಡುತ್ತಿದೆ.
ಒಂದೇ ಒಂದು ವೈರಸ್
ದೇಶ ದೇಶಗಳನ್ನೂ ನಾಶಮಾಡುತ್ತಿದೆ

ಅದಕ್ಕೆ ಯಾವ ಹೆಸರು...
ಹೆಸರಿಗಾಗಿ, ಹೆಸರುಗಳ ಆಧಾರದಲ್ಲಿ
ಬದುಕುಗಳನ್ನೇ ಹೆಸರಿಲ್ಲದಂತೆ ಮಾಡುವ
ಅದಕೆ... ಹೆಸರಿಲ್ಲದ ಹೆಸರು.

ಹೆಸರಿಲ್ಲದ, ಮುಖವಿಲ್ಲದ, ಆಕಾರವಿಲ್ಲದ
ವೈರಸ್‌ನ ಅಸ್ತಿತ್ವ ಮತ್ತು
ಅಸ್ತಿತ್ವಕ್ಕೆ ಸಾಕ್ಷಿ... ಹೆಣ.
ಈ ಹೊತ್ತು ಹೆಣಗಳೇ ದೇಶವಾಳುತ್ತಿವೆ
ಹೆಣಗಳೇ 'ಹುಟ್ಟಿಸುವ ಆಟ' ಆಡುತ್ತಿವೆ.

* * *

ಕಾಣಿಸದ ವೈರಸ್ಸನ್ನು ನಾವು
ಹೆಣಗಳಲ್ಲಿ ಹುಡುಕಬೇಕು. ಹುಡುಕದೇ
ನಾವೂ ಹೆಣವಾಗುತ್ತಿದ್ದೇವೆ. ಆಗಬಾರದು.
ಅಳಿದುಳಿದ ತ್ರಾಣದ ಅವಶೇಷಗಳ ಬಳಸಿ
ಹಾಳು ಗಂಟಲಿನಿಂದ ಜೋರು ಕೂಗಲೆತ್ನಿಸಬೇಕು
ಆಗ ಸಣ್ಣ ದನಿಯಾದರೂ ಸಾಧ್ಯ.
ಕಸುಕಿತ್ತಿ ಕೊಸರಾಡಲು ಹೆಣಗಬೇಕು
ಪೂರ್ತಿ ಹೆಣವಾಗಿಲ್ಲದಿದ್ದರೆ
ಸಣ್ಣ ಅಲುಗಾಟ ಸಾಧ್ಯ.

ಅಷ್ಟೇ... ಸಣ್ಣ ಅಲುಗಾಟ
ಒಂದು ಹೂಬಳ್ಳಿಯ ಬುಡದ
ಕುಡಗೋಲಿಗೆ ಅಡ್ಡವಾಗುತ್ತದೆ.
ಅಂತಹ ಅಲುಗಾಟ... ತೋಟವನ್ನು ಉಳಿಸುತ್ತದೆ.
ಅಂತಹ ಅಲುಗಾಟ... ನಮ್ಮನ್ನು
ಹೆಣವಾಗಿಸದಂತೆ ಚೈತನ್ಯ ತುಂಬುತ್ತದೆ
ಅಂತಹ ಅಲುಗಾಟ... ಗದ್ದುಗೆಗಳ ಮೇಲಿನ
ಹೆಣಗಳನ್ನು ಕೆಡವುತ್ತದೆ.
ಅಂತಹ ಅಲುಗಾಟವೇ
ಗದ್ದುಗೆಗಳಿಗೆ ಜೀವಂತಿಕೆಯನ್ನೇರಿಸುತ್ತದೆ.

* * *

ಇದು ಅಂತಹ ಅನಿಷ್ಟ ಕಾಲ
ಇದು ಇಂತಹ ಕನಿಷ್ಠ ಕಾಲ
ಕಾಲನ ಜೊತೆ ಕಾದಾಟಕ್ಕೆ ನಿಂತು
ನಾವು ಹೆಣತ್ವವನ್ನು ಗೆಲ್ಲಬೇಕು.

**ಬಿ. ಪೀರ್ ಬಾಷಾ**
ಜರ್ನಲಿಸ್ಟ್, ಪಿಂಜಾರ ಓಣಿ, ಹೂವಿನ ಹಡಗಲಿ-೫೮೩ ೨೧೯

ನಿರ್ಮಿಸಿಕೊಳ್ಳುವುದು ಅಗತ್ಯ. ಉಳುಮೆಗೆ ಒಳಗೊಳ್ಳುವ ಭೂಮಿಗೆ ಸಂಬಂಧಪಟ್ಟಂತೆ ಜಲ ನಿಕ್ಷೇಪದ ಪ್ರದೇಶಗಳನ್ನು ಉಳಿಸಿ ಬೆಳೆಸಿಕೊಳ್ಳುವ, ಅದನ್ನು ಉಪಯೋಗಿಸಿಕೊಳ್ಳುವಾಗ ಉದ್ಭವಿಸುವ ಮಾನವೀಯ ಸಮಸ್ಯೆಗಳನ್ನು ಪರಿಹರಿಸಿ ಕೊಳ್ಳುವಂಥ ನೀತಿ ಇರಬೇಕು. ಕೃಷಿ ಇಲಾಖೆಯ ನಿರ್ದೇಶನದಲ್ಲಿ ಬೀಳು ಭೂಮಿಯ ಬೆಳವಣಿಗೆಯ ಜವಾಬ್ದಾರಿಯನ್ನು ರೈತರೇ ಹೊರುವಂತೆ ಆಗಬೇಕು, ಸರ್ಕಾರವಲ್ಲ. ಸರ್ಕಾರ ಇದಕ್ಕಾಗಿ ಕಡಿಮೆ ಬಡ್ಡಿಯಲ್ಲಿ ಸಾಲ ನೀಡಬೇಕು. ಪ್ರೋತ್ಸಾಹ ಮತ್ತು ನಿಯಂತ್ರಣಗಳ ಆಧಾರದ ಮೇಲೆ ಪರಿಸರ ಸಂರಕ್ಷಣೆಯ ಕಾನೂನು ಕ್ರಮಗಳನ್ನು ನಿರ್ದಾಕ್ಷಿಣ್ಯವಾಗಿ ಕಾರ್ಯರೂಪಗೊಳಿಸಬೇಕು.

ಈಗಿರುವಂತೆ ರಾಜ್ಯ ಭೂಮಿ ಬಳಕೆಯ ಬೋರ್ಡ್ ಸಂಬಂಧಪಟ್ಟ ಎಲ್ಲ ಚಟುವಟಿಕೆಗಳನ್ನೂ ಪರಸ್ಪರ ಒಂದುಗೂಡಿಸುವ ಸಂಸ್ಥೆಯಾಗಿ ಪುನರ್ರಚಿತವಾಗಬೇಕು. ಅದಕ್ಕೆ ತಜ್ಞರ, ಸಲಹೆಗಾರರ ಸಹಾಯ ಬೇಕು. ಎಲ್ಲಾ ವಿಧದ ಮಾಹಿತಿಗಳನ್ನು ಅದು ಒದಗಿಸುವ ಸ್ಥಿತಿಯಲ್ಲಿರಬೇಕು. ಪಂಚಾಯತ್ ರಾಜ್ಯ ವ್ಯವಸ್ಥೆ ನೆಲಮಟ್ಟದ ಯೋಜನಾ ಘಟಕವಾಗಬೇಕು. ಭೂ ದಾಖಲೆ ಮತ್ತು ಮಾಹಿತಿಗಳನ್ನು ತಾಂತ್ರಿಕವಾಗಿ ಸಂಗ್ರಹಿಸಿ ಒದಗಿಸಬೇಕು.

ಈ ನಿಟ್ಟಿನಲ್ಲಿ ರೆವಿನ್ಯೂ ಇಲಾಖೆ ಮತ್ತು ಸಮಾಜ ಅಭಿವೃದ್ಧಿ ಕಾರ್ಯಕ್ರಮ, ಕುಡಿಯುವ ನೀರು, ಪ್ರಾಥಮಿಕ ಶಿಕ್ಷಣ, ಪ್ರಾಥಮಿಕ ಆರೋಗ್ಯ ಮುಂತಾದುವನ್ನೆಲ್ಲಾ ವಿಕೇಂದ್ರೀಕರಣಗೊಳಿಸುವುದು ಅತ್ಯಗತ್ಯ. ಈ ಸಂಸ್ಥೆಗಳಿಗೆ ಆರ್ಥಿಕ ಸ್ವಾಯತ್ತತೆ ದೊರಕುವಂತಾಗಬೇಕು. ಹೊಸ ಆರ್ಥಿಕ ನೀತಿಯನ್ವಯ ಭೂ ಸುಧಾರಣೆಯ ಪರಿಕಲ್ಪನೆಯಲ್ಲಿ ಬದಲಾವಣೆಗಳು ಅಗತ್ಯವಾಗಬಹುದು. ಉದಾಹರಣೆಗೆ, ಗುತ್ತಿಗೆ ಎಂಬ ಪರಿಕಲ್ಪನೆಯನ್ನು ಸಂಪೂರ್ಣ ಕೈ ಬಿಡಲಾಗದೇ ಇರಬಹುದು. ಅತಿ ಉತ್ತಮವಾದ ಉತ್ಪಾದಕತೆಗೆ ಯಾವ ರೀತಿಯಲ್ಲಿ ಸಾಧ್ಯವೋ ಅಂಥ ವ್ಯವಸ್ಥೆಯನ್ನು ಯಾವ ಸೈದ್ಧಾಂತಿಕ ಪೂರ್ವಾಗ್ರಹವೂ ಇಲ್ಲದೆ ಅಂಗೀಕರಿಸಬೇಕಾಗಬಹುದು.

(ಈ ಲೇಖನವನ್ನು ಕನ್ನಡದಲ್ಲಿಸಿದ ಪಡಿಸಿದವರು ಶ್ರೀ ಡಿ. ಟಿ. ಲೋಹಿತ್ ಮತ್ತು ಶ್ರೀ ಕೆ. ಎಸ್. ಪಾರ್ಥಸಾರಥಿ)

**ಆರ್. ಎಸ್. ದೇಶಪಾಂಡೆ**
ಮೃಣ್ಮಯಿ, ೪೦೫, ೫ನೇ ಮೇಯ್ನ್, ಟೀಚರ್ಸ್ ಲೇ ಔಟ್, ನಾಗರಬಾವಿ. ಬೆಂಗಳೂರು - [illegible]

# ಇರುವುದನು ಬಿಟ್ಟು ಇರದುದೆಡೆ ಸಾಗುತಲಿ...

ಜಮದಗ್ನಿ ಕೋಪಿಷ್ಠ ಋಷಿ ನೀರು ತರುವಾಗ ತನ್ನ ಹೆಂಡತಿ ಪರಪುರುಷನನ್ನು ನೋಡಿದಳೆಂದು ಆಕೆಯ ಶಿರಚ್ಛೇದನ ಮಾಡಲು ಮಕ್ಕಳಿಗೆ ಆಜ್ಞಾಪಿಸುತ್ತಾನೆ. ಗೌತಮನಿಲ್ಲದಾಗ ಛದ್ಮ ವೇಷದಲ್ಲಿ ಬಂದ ಇಂದ್ರನೊಡನೆ ಭೋಗಿಸಿದ ಅಹಲ್ಯೆಯನ್ನು ಗೌತಮ ಕಲ್ಲಾಗಿಸುತ್ತಾನೆ. ಪತ್ನಿಯ ಶೀಲವನ್ನು ಖಚಿತಪಡಿಸಿಕೊಳ್ಳಲು ಶ್ರೀರಾಮಚಂದ್ರ ಹೆಂಡತಿಯನ್ನು ಅಗ್ನಿಪರೀಕ್ಷೆಗೊಳಪಡಿಸುತ್ತಾನೆ. ಶವವನ್ನು ಸುಡಲು ಏನಾದರೂ ತೆರ ಕೊಡು, ಕೊನೆಗೆ ನಿನ್ನ ಕುತ್ತಿಗೆಯಲ್ಲಿನ ತಾಳಿಯನ್ನಾದರೂ ಕೊಡು ಎಂದು ಹರಿಶ್ಚಂದ್ರ ಚಂದ್ರಮತಿಯನ್ನು ಕೇಳುತ್ತಾನೆ. ಕತ್ತಿನಲ್ಲಿ ಪತಿಗೆ ಮಾತ್ರ ಕಾಣುವುದು ಪತಿವ್ರತೆಯ ತಾಳಿಯಂತೆ. ಹೀಗೆ ಹೇಳುತ್ತ ಹೋದರೆ ಪಾತಿವ್ರತ್ಯದ ಬಗೆಗೆ ಎಷ್ಟೋ ಕತೆಗಳಿವೆ. ಈ ಕತೆಗಳು ಪಾತಿವ್ರತ್ಯ ಒಂದು ಮೌಲ್ಯ ಎಂದು ಸಿದ್ಧಗೊಂಡ ನಂತರ ಹುಟ್ಟಿರಬಹುದು. ಇತ್ತೀಚೆಗೆ ಮಹಿಳೆಯರು ಬರೆಯುವ ಕಾದಂಬರಿಗಳಲ್ಲಿ 'ಶೀಲ ಕಳೆದುಕೊಂಡವಳು' ಎಂಬ ಮಾತು ಮೇಲಿಂದ ಮೇಲೆ ಬರುವಾಗ, ಯೌವ್ವನದ ಆರಂಭಾವಸ್ಥೆ ಅಥವಾ ಬಾಲ್ಯದ ತೂರ್ಮಾವಸ್ಥೆಯಲ್ಲಿರುವವನಿಗೆ 'ಶೀಲ' ಎಂಬುದು ಕಣ್ಣಿಗೆ ಕಾಣುವ ಶ್ರೇಷ್ಠ ವಸ್ತುವೊಂದಿರಬೇಕು ಎನ್ನಿಸುವುದು ಸಹಜ.

ಇಸವಿ ೧೯೨೦. ಮರಾಠಿ ವಿದ್ವಾಂಸ ವಿ.ಕಾ.ರಾಜವಾಡೆ ಶಬ್ದಗಳ ಮೂಲದಿಂದ ಇತಿಹಾಸವನ್ನು ಕಂಡುಕೊಳ್ಳುವ ನೂತನ ಪ್ರಯೋಗವನ್ನು ಕೈಗೊಂಡರು. ಪುಣೆಯ ಅವರು ಆ ಕೆಲಸಕ್ಕಾಗಿ ಊರೂರು ಅಲೆದರು, ಗ್ರಂಥಗಳನ್ನು ಶೋಧಿಸಿ ಅಧ್ಯಯನ ಮಾಡಿದರು. ಆ ಕಾಲಕ್ಕೆ ಅವರು ಬರೆದ 'ಭಾರತೀಯ ವಿವಾಹ ಪದ್ಧತಿ' ಲೇಖನಮಾಲೆ ಪತ್ರಿಕೆಯೊಂದರಲ್ಲಿ ಪ್ರಕಟವಾಗುತ್ತಿದ್ದು, ಸಂಪ್ರದಾಯನಿಷ್ಠರ ಆಕ್ರೋಶಕ್ಕೆ ಆ ಪತ್ರಿಕೆ ಬಲಿಯಾಯಿತು. ಹೆಣ್ಣಿನ ಶೀಲದ ಬಗೆಗೆ ಪಾರಂಪರಿಕವಾಗಿ ಹರಿದುಬಂದ ತಿಳಿವಳಿಕೆಯಲ್ಲಿ ಬೆಳೆದು ಅದನ್ನೇ ನೆಚ್ಚಿದವನಿಗೆ ಈ ಪುಸ್ತಕದಲ್ಲಿನ ವಿವರಗಳು ಬೆಚ್ಚಿಬೀಳಿಸುತ್ತವೆ.

ಪುರಾತನ ಕಾಲದಲ್ಲಿ ವಿವಾಹ ಪದ್ಧತಿ ಇರಲಿಲ್ಲವಾದುದರಿಂದ ಲೈಂಗಿಕ ನಿರ್ಬಂಧಗಳೂ ಇರಲಿಲ್ಲ. ಒಬ್ಬ ಗಂಡು ಅಥವಾ ಹೆಣ್ಣು ಇನ್ನೊಬ್ಬ ಹೆಣ್ಣು ಅಥವಾ ಗಂಡಿನೊಂದಿಗೆ ನಿಸ್ಸಂಕೋಚವಾಗಿ ಬೆರೆಯಬಹುದಿತ್ತು, ಬೇಕಾದವರೊಂದಿಗೆ ಕೂಡಬಹುದಾಗಿತ್ತು. ಆಗ ಹೆಣ್ಣೇ ಪ್ರಧಾನವಾದುದರಿಂದ ಮತ್ತು ಪ್ರಜೋತ್ಪತ್ತಿಯು ತ್ವರಿತವಾಗಿ ನಡೆಯಬೇಕಾಗಿದ್ದು ದರಿಂದ ಹೆಣ್ಣು ಹಲವು ಪುರುಷರೊಡನೆ ಕೂಡುತ್ತಿದ್ದಳು. ಭ್ರಾತೃ ಎಂಬ ಪದದ ಮೂಲಾರ್ಥ ಅಣ್ಣನಾಗಿರದೆ ರಕ್ಷಿಸುವವನು ಎಂಬುದಾಗಿತ್ತು ಎನ್ನುತ್ತಾರೆ ವಿ. ಕಾ. ರಾಜವಾಡೆ. ಹಾಗೆಯೇ ಜನನಿ ಎಂದರೆ ಜನರನ್ನು ಹುಟ್ಟಿಸುವವಳು, ಭಾಡ್ಯಾ ಎಂದರೆ ಹೆಂಡತಿಯನ್ನು ಬಾಡಿಗೆಗೆ ಕೊಡುವವನು ಎಂದರ್ಥ. ಹೆಣ್ಣು ಮುಖ್ಯವಾದುದರಿಂದ ಮಗು ಹುಟ್ಟಿದುದು ಯಾವ ಹೆಣ್ಣಿಗೆ ಎಂಬುದನ್ನು ಗುರುತಿಸಲು ಗೋತ್ರ ಹುಟ್ಟಿಕೊಂಡಿತು. ಅದಿತಿಯಿಂದ ಆದಿತ್ಯ, ದಿತಿಯಿಂದ ದೈತ್ಯ, ದನುವಿಂದ ದಾನವ, ಕೃತ್ತಿಕಾಳಿಂದ ಕಾರ್ತಿಕೇಯ, ಕದ್ರೂವಿನಿಂದ ಕಾದ್ರಲೇಯ, ವಿನತಾ ಳಿಂದ ವೈನತೇಯ, ಕಾಲಾಳಿಂದ ಕಾಲೇಯ, ನಿರುತಿಯಿಂದ ನೈಋತ್ತೀಯಾ, ಸಿಂಹಿಕಾಳಿಂದ ಸೈಹಿಕೇಯ, ಪುಲೋಮಾನಳಿಂದ ಪೌಲೇಯ, ಕಾಲಾಳಿಂದ ಕಾಲಕೇಯ, ವಸುವಿನಿಂದ ವಾಸವ, ಸಾಧ್ಯಳಿಂದ ಸಾಧ್ಯ, ವಿಶ್ವಳಿಂದ ವಿಶ್ವ, ಮರುತ್ವತಳಿಂದ ಮರುತ್ವಾಂತ, ಭಾನುವಿನಿಂದ ಭಾನವ, ಮುಹೂರ್ತಾಳಿಂದ ಮೂಹೂರ್ತ – ಹೀಗೆ ವೇದಾಗಮಗಳಿಂದಲೇ ರಾಜವಾಡೆ ಸಾಕಷ್ಟು ಉದಾಹರಣೆಗಳನ್ನು ಕೊಡುತ್ತಾರೆ.

ಕಾಲ ಕಳೆದಂತೆ ಪುರುಷಪ್ರಜ್ಞೆ ಜಾಗೃತವಾಗತೊಡಗಿತು. ಒಂದು ಕಾಲದಲ್ಲಿ ಮನೆಗೆ ಬಂದ ಅತಿಥಿಗೆ – ಸ್ನೇಹಿತನಿಗೆ ಹೆಂಡತಿಯನ್ನು ಸಂಭೋಗಿಸಲು ಅದು ಧರ್ಮವೆಂದು ತಿಳಿದು ಸಂತೋಷದಿಂದ ಕೊಡುತ್ತಿದ್ದ ಪುರುಷ, ಹೆಣ್ಣನ್ನು ಆಸ್ತಿಯಾಗಿ ಪರಿಗಣಿಸತೊಡಗಿದ ಮೇಲೆ ಹಿಂದೇಟು ಹೊಡೆಯತೊಡಗಿದ. ಋಗ್ವೇದದಲ್ಲಿ ಅಣ್ಣನಾದ ಯಮನನ್ನು ತಂಗಿ ಯಮಿ ಸಂಭೋಗಕ್ಕಾಗಿ ಕರೆಯುವುದನ್ನು, ಆತ ನೀತಿಯ ಪಾಠ ಹೇಳುವುದನ್ನು ಕಾಣುತ್ತೇವೆ. ಶ್ರೀರಾಮಚಂದ್ರನ ಪೂರ್ವಜನ್ಮದ ಪುರುಕುತ್ಸ ರಾಜ ತಂಗಿ ಪುರುಕುತ್ಸಾನಿಯನ್ನು ಮದುವೆ ಯಾಗಿ ಅವಳಲ್ಲಿ ದೈಹಿಕ ಆಕರ್ಷಣೆ ಕಾಣದಿರುವ ಪ್ರಸಂಗ ಬರುತ್ತದೆ. ಕಾಲ ಕಳೆದಂತೆ ಗಂಡನಿಂದಲ್ಲದೆ ಬೇರೆಯವನಿಂದ ಹುಟ್ಟಿದವ ಅಯೋನಿಜನಾದ!

ವಿವಾಹದಲ್ಲಿ ಲಾಜಾಹೋಮ ಎಂದು ಮಾಡುತ್ತಾರೆ. ಲಾಜಾ ಎಂದರೆ ಅರಳು. ಅರಳನ್ನು ದೇವತೆಗಳಿಗೆ ಕಾಣಿಕೆಯಾಗಿ ಕೊಟ್ಟು ಹೆಂಡತಿಯಾಗುವವಳನ್ನು ಬಿಡಿಸಿಕೊಳ್ಳುವುದೇ ಲಾಜಾ ಹೋಮ! ಹಿಂದೆ ಗಂಡು ಹೆಣ್ಣನ್ನು ಆಶಿಸಿದಾಗ ಅವಳ ಕೈಹಿಡಿದುಕೊಳ್ಳುತ್ತಿದ್ದ. ಆ ಪದ್ಧತಿಯೇ ವಿವಾಹದಲ್ಲಿನ ಪಾಣಿಗ್ರಹಣ! ಅಗ್ನಿಯೆದುರು ಸಂಭೋಗ ಮಾಡುತ್ತಿದ್ದುದರಿಂದ ಅಗ್ನಿಸಾಕ್ಷಿ!

ಅತಂತ್ರ ಸ್ಥಿತಿಯಿಂದ ಪಾರಾಗಲು ಮನುಷ್ಯ ಸಂಬಂಧಗಳನ್ನು ಸೃಷ್ಟಿಸಿಕೊಂಡದ್ದರಿಂದ ಒಂದು ರೀತಿಯಲ್ಲಿ ನೆಲೆಗೊಂಡ. ಸಂಬಂಧಗಳು ಪ್ರೀತಿ-ಪ್ರೇಮ-ತನ್ನತನ. ತನ್ನಂತೆಯೇ ಇರುವ ಮನುಷ್ಯನ ಮೇಲೆ, ನೆಲ-ಜಲದ ಮೇಲೆ ಅಮೆರಿಕನ್ನರು ಅದು ಹೇಗೆ ಬಾಂಬ್ ಹಾಕಿದ ರೆಂದು ರವೀಂದ್ರನಾಥ ಟ್ಯಾಗೋರ್ ಚಿಂತಿಸುತ್ತಿದ್ದರಂತೆ. ಒಂದು ಸಲ ಅವರು ವಿಮಾನ ಪ್ರಯಾಣ ಮಾಡುತ್ತಿದ್ದಾಗ ಮನುಷ್ಯ ನೆಲದಿಂದ ದೂರ ಹೋದಾಗ ಕಳೆಗೊಂಡು ನೆಲವಿದೆ, ಮನುಷ್ಯರಿದ್ದಾರೆ ಎಂಬ ಭಾವನೆಯನ್ನೇ ಕಳೆದುಕೊಳ್ಳುತ್ತಾನೆಂದು ಹೊಳೆಯಿತಂತೆ. ನನ್ನ ಬಂಧು-ಬಳಗ ಎಂದು ಬದುಕನ್ನು ಬಾಳುತ್ತಿದ್ದ ಅರ್ಜುನನನ್ನು ಕೃಷ್ಣ ಆತ್ಮ-ಪರಮಾತ್ಮಗಳ ವಿಮಾನವನ್ನು ಹತ್ತಿಸಿದ ಅನ್ನಿಸುವುದಿಲ್ಲವೆ? ಪ್ರಸಿದ್ಧ ತತ್ವಜ್ಞಾನಿ ಜಿಡ್ಡು ಕೃಷ್ಣಮೂರ್ತಿಯವರು 'ನಾನು' ಎಂಬುದು ಅನುಭವ ಅಥವಾ ಸತ್ತದ್ದು ಎನ್ನುತ್ತಾರೆ. 'ನಾನು' ಎಂಬುದರಿಂದ ಬಿಡಿಸಿಕೊಳ್ಳಲು 'ಅವಲೋಕನ'ದ ಅಗತ್ಯವನ್ನು ಒತ್ತಿಹೇಳುವ ಅವರು ಆಗ ಸಿಗುವ 'ಅನುಭಾವ'ವನ್ನು ಹೇಳಲಾಗದೆ ಮತ್ತೆ ಗಿಡಗಳ ಅಲುಗಾಟ, ನದಿಗಳ ಕಲರವ ಎಂಬ ಸವೆದ ಹೆಜ್ಜೆಗಳನ್ನೇ ಸವೆಸುತ್ತಾರೆ. ಯಾವುದೂ ಇಲ್ಲದ ಮನುಷ್ಯ ಗಂಡ-ಹೆಂಡತಿ-ಮಕ್ಕಳನ್ನು ಮಾಡಿಕೊಂಡು ಬದುಕಲೊಂದು ಉದ್ದೇಶವನ್ನು ಕಂಡುಕೊಂಡ. ಈ ಮಮಕಾರವನ್ನು ಬಿಡುವುದೇ ಆಧ್ಯಾತ್ಮವಾದರೆ, ಮತ್ತೆ ಅವನು ರಾಜವಾಡೆಯವರು ವಿವರಿಸಿದ ಮೊದಲಿನ ಸ್ಥಿತಿಗೆ ಹಿಂದಿರುಗಿದಂತಾಗುವುದಿಲ್ಲವೆ?

ರೂತ್ ಬೆನೆಡಿಕ್ಟ್ ಎಂಬ ಸಮಾಜ ವಿಜ್ಞಾನಿ ಮನುಷ್ಯ ಮೂಲಭೂತವಾಗಿ ಇರುವಂತೆ ಇದ್ದರೆ ಚೆನ್ನಾಗಿರುತ್ತದೆ; ಬೇರೇನಾದರೂ ಆಗಲು ಹೋದರೆ ಕೆಡುತ್ತಾನೆ ಎನ್ನುತ್ತಾರೆ. ಪೇಶ್ವೆ ಬಾಜೀರಾಯನ ಕಾಲದಲ್ಲಿ 'ಘಟಕಂಚುಕಿ' ಎಂಬ ಸಮಾರಂಭ ನಡೆಯುತ್ತಿತ್ತಂತೆ. ಸಮಾರಂಭ ನಡೆಯುವ ಸ್ಥಳದಲ್ಲಿ ಇಟ್ಟಿರುವ ಗಡಿಗೆಗಳಲ್ಲಿ ಹೆಂಗಳೆಯರು ತಮ್ಮ ತಮ್ಮ ಮೊಲೆಕಟ್ಟುಗಳನ್ನು ಬಿಚ್ಚಿ ಹಾಕುತ್ತಿದ್ದರಂತೆ. ಯಾವ ಗಂಡಸಿಗೆ ಯಾವ ಹೆಂಗಸಿನ ಮೊಲೆಕಟ್ಟು ಸಿಗುತ್ತಿತ್ತೋ ಆತ ಆಕೆಯೊಡನೆ ಸಂಭೋಗ ಮಾಡುತ್ತಿದ್ದನಂತೆ. ಇದೊಂದು ಅತಿರೇಕವಾದರೆ, ಬ್ರಹ್ಮಚರ್ಯ ತಪಸ್ಸು ಎಂದು ಗ್ರಹಿಸಿದ ಗಾಂಧೀಜಿ ತಮ್ಮ ೩೬ನೆಯ ವಯಸ್ಸಿನಲ್ಲಿ ಅದರ ಅನುಷ್ಠಾನಕ್ಕೆ ತೊಡಗಿದರು ಮುವ್ವತ್ತೊಂದು ವರ್ಷಗಳ ನಂತರ ಅವರಿಗೆ ವೀರ್ಯ ಸ್ಖಲನವಾಯಿತು. ವಿಚಿತ್ರವೆನ್ನುವಂತೆ ಗಾಂಧೀಜಿಯ ಹಂತಕ ಗೋಡ್ಸೆ ಅವರನ್ನು ಕೊಲೆಗೈದ ತಕ್ಷಣದಿಂದಲೇ ಬ್ರಹ್ಮಚರ್ಯವನ್ನು ವ್ರತ ವಾಗಿಸಿಕೊಂಡ. ಗಲ್ಲಿಗೇರುವವರೆಗೂ ಅವನಲ್ಲಿ ಹೆಣ್ಣಿನ ಬಗೆಗೆ ಯಾವ ಭಾವನೆಗಳೂ ಬರಲಿಲ್ಲ. ವಿನೋಬಾ ಭಾವೆಯವರು ಒಮ್ಮೆಯೂ ಸಂಭೋಗ ಮಾಡದೆ ಅವರದನ್ನು ಹೇಗೆ ದಾಟಿದರು ಎಂಬ ಪ್ರಶ್ನೆಗೆ ರಜನೀಶ್ ಕೊಡುವ "ಅವರ ಕಾಮವಾಸನೆಗಳೆಲ್ಲ ಪೂರ್ವಜನ್ಮದಲ್ಲಿಯೇ ತೀರಿದ್ದವು" ಎಂಬ ಉತ್ತರ ಎಷ್ಟರ ಮಟ್ಟಿಗೆ ಸಮಂಜಸ? ಇಂದಿನ ಪಶ್ಚಿಮ ಅಂದಿನ ಪೂರ್ವ. ವಿವಾಹವೆಂಬುದು ಬಂಧನವಲ್ಲವಾದುದ ರಿಂದ ಅಲ್ಲಿ ವಿಚ್ಛೇದನಗಳು ಮಾಮೂಲು. ಖಾಲಿಯಾದ ಅಲ್ಲಿಯ ಮನುಷ್ಯ ಇರಬಾರದ್ದೇನನ್ನೋ ಹುಡುಕುತ್ತ ಭಾರತದ ಆಧ್ಯಾತ್ಮಕ್ಕೆ ಬರುತ್ತಾನೆ!

ಯಶೋಧರನ ಹೆಂಡತಿ ಅಮೃತಮತಿ, ಆಕೆ ಪರಮ ಧಾರ್ಮಿಕನಾದ ಗಂಡನಿದ್ದೂ (ಅಥವಾ ಇದ್ದುದರಿಂದಲೇ) ಅಷ್ಟಾವಕ್ರನಾದ ಬಡಗನಲ್ಲಿ ಅನುರಕ್ತಳಾಗುತ್ತಾಳೆ. ಅದು ತಿಳಿದ ಜೈನಧರ್ಮೀಯ ಗಂಡನಲ್ಲಿ ಅವರಿಬ್ಬರನ್ನು ಕೊಲ್ಲುವಷ್ಟು ಕ್ರೌರ್ಯ (?) ಹುಟ್ಟುತ್ತದೆ. ಆ ಭಾವ ಹುಟ್ಟಿದ ಪಾಪವನ್ನು ಪರಿಹರಿಸಿಕೊಳ್ಳಲು ಹುಂಜವನ್ನು ಬಲಿ ಕೊಡುವ ವ್ರತದ ಬದಲಾಗಿ ಹಿಟ್ಟಿನ ಹುಂಜವನ್ನು ಬಲಿಕೊಡುವ ಕ್ರಿಯೆ ನಡೆಯುತ್ತದೆ. ಸಾಂಕೇತಿಕವಾಗಿಯಾದರೂ ಹಿಂಸೆ ಹಿಂಸೆಯೇ ಅಲ್ಲವೆ ಎಂಬ ಪ್ರಶ್ನೆಯನ್ನು ಅದು ಮುಂದಿಡುತ್ತದೆ. ಅಲ್ಲಿ ಅಮೃತಮತಿಯ ದೇಹದ ಅಗತ್ಯವನ್ನು ಆಕೆಯ ಗಂಡ ಪೂರೈಸಿದ್ದನೇ ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. 'ಅಹಿಂಸಾ ಪರಮೋ ಧರ್ಮಃ' ಎನ್ನುವ ಜೈನಮತದ ಅನುಯಾಯಿ ಗಂಡನಿಗೆ ತನ್ನ ಹೆಂಡತಿ ಇನ್ನೊಬ್ಬನೊಡನೆ ಸುಖಿಸುವುದನ್ನು ಕಂಡಾಗ ಅವಳನ್ನು ಕೊಲ್ಲುವ ಕ್ರೌರ್ಯ ಹುಟ್ಟುತ್ತದೆ. ಕಾಮ ಧರ್ಮಕ್ಕಿಂತ ಪ್ರಬಲ ಭಾವನೆ ಎಂಬುದನ್ನು ಇದು ಪ್ರತಿಬಿಂಬಿಸುವುದಿಲ್ಲವೇ?

ಇವೆಲ್ಲಕ್ಕೂ ಪರಿಹಾರ ಮಾನವೀಯತೆ ಎಂಬ ಸಾಮಾನ್ಯ ಉತ್ತರಕ್ಕೆ ಬಂದಾಗ ಇನ್ನೊಂದು ಪ್ರಶ್ನೆ ಎದುರಾಗುತ್ತದೆ. ಭಾವನೆಗಳಿಗೆ ಬಲಿಯಾಗುವುದು ಮಧ್ಯಮ ವರ್ಗದವನ ಬವಣೆ ಮಾತ್ರ ವಾಗಬೇಕೆ? ಆಗುವುದಾದರೆ ಏಕಾಗಬಾರದು? ಆರ್ಥಿಕವಾಗಿ ಸುಭದ್ರವಿದ್ದವನಿಗೆ – ಅಭದ್ರ ವಿದ್ದವನಿಗೆ ಸಾಮಾನ್ಯವಾಗಿ ಇಂಥ ಸೂಕ್ಷ್ಮಗಳ ಸಮಸ್ಯೆಯಿರುವುದಿಲ್ಲ. ತ್ರಿಶಂಕು ಮಾತ್ರ ಬದುಕಿಗೆ, ಪ್ರೀತಿಗೆ, ತುಮುಲಾಟಗಳಿಗೆ, ಮುಲುಕಾಟಗಳಿಗೆ, ಎಡಬಿಡಂಗಿತನಕ್ಕೆ ಬದ್ಧನೆ? ಮಾನವೀಯತೆ ಅಥವಾ ಹ್ಯುಮ್ಯಾನಿಟಿಯನ್ನು ವಿ. ಕಾ. ರಾಜವಾಡೆಯವರಂತೆ ಕಂಡುಹಿಡಿಯಲು ಹೋದರೆ ಪುರುಷನೇ ಪ್ರಧಾನವಾಗುತ್ತಾನೆ. ಯಾಕೆಂದರೆ 'ಹ್ಯುಮ್ಯಾನಿಟಿ' ಶಬ್ದದ ಮೂಲ 'ಮ್ಯಾನ್!'

**ಪಾಂಡುರಂಗ ಗುಡಿ**

ಮಂಗಳ ಕಾಟೇಜ್, ೮-೧೧-೧೮೦/೩,ಲಕ್ಷ್ಮೀಪುರಂ ಬಡಾವಣೆ, ರಾಯಚೂರು - ೫೮೪ ೧೦೩

## ಶಬ್ದದ ಬೆಡಗು (ವಿಮರ್ಶೆ)

ಸಂ. : ಡಾ|| ಕಾಶೀನಾಥ ಅಂಬಲಗೆ

**ಪುಟ : ೧೯೯** **ಬೆಲೆ : ರೂ. ೧೦೦**

**ಜಯನಗರ ಅಭಿವೃದ್ಧಿ ಸಂಘ**, ಸೇಡಂ ರೋಡ್, ಕಲಬುರ್ಗಿ- ೫೮೫ ೧೦೫

ಕ್ರಾಂತಿಯ ಕಹಳೆ ಮೊಳಗಿಸುತ್ತ ಬಂದ ವಚನ ಸಾಹಿತ್ಯವು ಸಮಾಜದಲ್ಲಿ ಜಡ್ಡುಕಟ್ಟಿ ಕುಳಿತಿದ್ದ ಕೊಳೆ-ಕಳೆಗಳನ್ನು ಗುಡಿಸಿ ತೆಗೆಯುವಲ್ಲಿ ಇನ್ನಿತರ ವೇದ ಪುರಾಣೇತಿಹಾಸಗಳ ಸಾಹಿತ್ಯಕ್ಕಿಂತ ಯಶಸ್ವಿಯಾಗಿ - ಕ್ಷಿಪ್ರವಾಗಿ ಕೆಲಸ ಮಾಡಿದೆ. ಜನಜಾಗೃತಿ ಮೂಡಿಸಿದ ಜನಪರ ಸಾಹಿತ್ಯವಾಗಿ ರೂಪುಗೊಂಡ ವಚನ ಸಾಹಿತ್ಯದ ಬಗ್ಗೆ ಅನೇಕ ವಿಮರ್ಶಕರಿಂದ ಇಲ್ಲಿ ಲೇಖನಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಬಸವ ಪೂರ್ವ ಹಾಗೂ ಬಸವೋತ್ತರ ಕಾಲದ ಎಲ್ಲ ವಚನ ಸಾಹಿತ್ಯವನ್ನೂ ಒಂದು ಕ್ರಾಂತಿಕಾರಿ ಚಳುವಳಿಯೆಂದು ಪರಿಗಣಿಸಿ ಚರ್ಚಿಸಲಾಗಿದೆ.

## ಕವಿ ವಾಲ್ಮೀಕಿಗಾದ ಅನ್ಯಾಯ

ಗ. ಸು. ಭಟ್ಟ ಬೆತ್ತಗೇರಿ

**ಪುಟ : ೬೪** **ಬೆಲೆ : ರೂ. ೪೦**

**ಸುಮುಖ ಪ್ರಕಾಶನ**, 'ಕಾವ್ಯಶ್ರೀ', ಮೂರು ಕಾವೇರಿ, ಕಿನ್ನಿಗೋಳಿ - ೫೭೪ ೧೫೦

ಕವಿ ವಾಲ್ಮೀಕಿ ತನ್ನ ಅಖಂಡ ಕಾವ್ಯ ರಾಮಾಯಣದಲ್ಲಿ ಜೀವನದ ಸಮಗ್ರ ದರ್ಶನದ ಜೊತೆ ಏನೋ ಹೆಚ್ಚಿನದನ್ನು ಪ್ರಚ್ಛನ್ನವಾಗಿ ಇರಿಸಿದುದು ಶೋಧನಾತ್ಮಕ ಮನಸ್ಸಿಗೆ ಮಾತ್ರ ಗೋಚರಿಸಲು ಸಾಧ್ಯ. ಕಾವ್ಯವನ್ನು ಪ್ರಬಲ ಪ್ರತಿ ಸಂಶ್ಲೇಷಣಾತ್ಮಕ ವಿಧಾನದಿಂದ ಸರಿಯಾಗಿ ಅರ್ಥೈಸದಿದ್ದಲ್ಲಿ ಕಾವ್ಯಕ್ಕೂ ತನ್ಮೂಲಕ ಕವಿಗೂ ಅನ್ಯಾಯವಾಗುವುದು ಸಹಜವೆಂಬುದು ಇಲ್ಲಿನ ಧ್ವನಿ. ರಾಮ-ರಾವಣರ ಸುಪ್ತ-ಸ್ವಪ್ನ-ಜಾಗೃತ ಮನಸ್ಸುಗಳ ಸಂಕೇತವಾಗಿ ಛಾಯಾಪಾತ್ರಗಳಂತೆ ಲಕ್ಷ್ಮಣ-ಕುಂಭಕರ್ಣರನ್ನು ಕವಿ ಚಿತ್ರಸಿದ್ದಾನೆಯೆ ? ಇತರ ಪಾತ್ರಗಳ ಬಗ್ಗೆಯೂ ಓದಿನೋಡಿ.

## ಕನ್ನಡ ದೇಶ ಭಕ್ತಿ ಗೀತೆಗಳು

ಹಂಸಾ ಆರ್.

**ಪುಟ : ೮೦** **ಬೆಲೆ : ರೂ. ೭೦**

**ಉತ್ತಮ ಪ್ರಕಾಶನ**, ಸಂ. ೫೦೦, 'ಸತ್ಯನಾಮ ಭವನ', ೧೭ನೇ ಕ್ರಾಸ್, ಜೆ. ಪಿ. ನಗರ ೪ನೇ ಹಂತ, ಬೆಂಗಳೂರು - ೭೮

ನಾಡು-ನುಡಿ-ದೇಶಕ್ಕೆ ಸಂಬಂಧಿಸಿದಂತೆ ಗೌರವಭಾವನೆಯನ್ನು ಮೂಡಿಸುವಲ್ಲಿ ಯಶಸ್ವಿಯಾದ ಈ ಗೀತೆಗಳು ಎಳೆಯರಿಗೆ ದೇಶ ಪ್ರೇಮದ ಪಾಠ ಕಲಿಸಬಲ್ಲವು. ಸಂಗೀತ ಸಂಯೋಜಿಸಿ ಹಾಡಿದಾಗ ಉಲ್ಲಾಸ-ಉತ್ಸಾಹದ ಜೊತೆಗೆ ಮನಸ್ಸಿಗೆ ಆನಂದವನ್ನೂ ನೀಡಬಲ್ಲವು. ಸಮೂಹಗಾನಕ್ಕಂತೂ ಹೇಳಿ ಬರೆಸಿರುವಂತಿವೆ. ಸಾಹಿತ್ಯ ರಚನೆಯು ಸರಳ ಶಬ್ದಗಳಲ್ಲಿದ್ದೂ ಗಂಭೀರವಾದ ಕರ್ತವ್ಯವನ್ನು ನೆನಪಿಸಿಕೊಡುವಲ್ಲಿ ಮುಂದಾಗಿವೆ. ಸಮಗ್ರ ಕರ್ನಾಟಕದಿಂದ - ಭವ್ಯ ಭಾರತದವರೆಗೆ ಪದ್ಯಗಳಿವೆ.

## ವಾಗ್ದೇವಿಯ ಭಂಡಾರದ ಮುದ್ರೆ (ಲೇಖನ ಸಂಗ್ರಹ)

ಡಾ|| ಶಾಂತಿನಾಥ ದಿಬ್ಬದ

**ಪುಟ : ೧೫೯** **ಬೆಲೆ : ರೂ. ೧೦೦**

**ರತ್ನತ್ರಯ ಪ್ರಕಾಶನ**, ನಂದಿಹಳ್ಳಿ, ಸಂಡೂರು - ೫೮೩ ೧೧೯

ಆದಿ ಕವಿ ಪಂಪ ಹಾಗೂ ಕನ್ನಡದ ರತ್ನ ರನ್ನ ಇಬ್ಬರನ್ನೂ ಅವರವರ ಕಾವ್ಯಶ್ರೀ ಮೂಲಕ ಅರ್ಥೈಸುತ್ತ ಏಕಕಾಲಕ್ಕೆ ಪರಿಚಯಿಸಿದ ಕೃತಿಯಿದು. ಇಬ್ಬರೂ ಕನ್ನಡ ಸಾಹಿತ್ಯದಲ್ಲಿ ಸೂರ್ಯ-ಚಂದ್ರರಂತೆ ಪ್ರಕಾಶಿಸಿದರು ಹಾಗೂ ವಾಗ್ದೇವಿಯ ಸಾಹಿತ್ಯ ಭಂಡಾರದ ಮುದ್ರೆಯನ್ನೊಡೆದು ಅನರ್ಘ್ಯ ಜ್ಞಾನ ಸಂಪದವನ್ನು ಸೂರೆಗೈದವರು. ಮುಖ್ಯವಾಗಿ ಪಂಪ ಭಾರತ ಹಾಗೂ ಆದಿಪುರಾಣಗಳನ್ನು ಪ್ರಸ್ತಾಪಿಸಿ, ಪಂಪನ ನೆರಳು ರನ್ನನ ಮೇಲೆ ಬಿದ್ದ ಪ್ರಮಾಣವನ್ನೂ ಅಳೆದು ಇಬ್ಬರನ್ನೂ ಉತ್ತಮ ಕವಿಗಳೆಂದು ಚರ್ಚಿಸಲಾಗಿದೆ.

## ಎರಡು ನಾಟಕಗಳು

ಜಾನ್ ಎಮ್. ಸಿಂಗ್ ಅನು : ಶ್ರೀನಿವಾಸ ಸುತ್ರಾವೆ

**ಪುಟ : ೫೪** **ಬೆಲೆ : ರೂ. ೩೫**

**ವಿನಯ್ ಪ್ರಕಾಶನ**, ೧೬೪೬/೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

ಇದು ಎರಡು ಐರಿಶ್ ನಾಟಕಗಳ ಅನುವಾದ. ಮೊದಲ ನಾಟಕದಲ್ಲಿ ಬದುಕನ್ನು ನೀಡುವ ಕಡಲು ಮುನಿದಾಗ ಅನಿರೀಕ್ಷಿತ ಸಾವನ್ನು ಅಷ್ಟೇ ಸಹಜವಾಗಿ ನೀಡುವ ಕಥಾವಸ್ತು ಇದೆ. ದುಡಿಯುವ ಎಲ್ಲ ಮಕ್ಕಳನ್ನೂ ಪತಿಯನ್ನೂ ಕಳೆದುಕೊಂಡ ಅನಾಥ ಮಹಿಳೆಯೊಬ್ಬಳ ದಾರುಣ ಚಿತ್ರಣ ಕಡಲ ತಡಿಯ ಬದುಕನ್ನು ತೆರೆದಿಡುತ್ತದೆ. ಇನ್ನೊಂದು ನಾಟಕದಲ್ಲಿ ಸಮಾನ ಮನಸ್ಕ ವ್ಯಕ್ತಿಗಳ ನಡುವೆ ಮಿಡಿಯುವ ಅತ್ಯಂತ ನಾಜೂಕಾದ ಭಾವನೆಯನ್ನು ಪತ್ತೆ ಮಾಡಿದ್ದು ಪ್ರೀತಿಯಿಲ್ಲದ ಬರಡು ಬಾಳನ್ನು ಬೆಲೆರಹಿತ ವಸ್ತುವನ್ನಾಗಿಸಿದೆ.

## ಜೀವನವೆಂದರೇನು ?

ವೀರೇಂದ್ರ ಸಿಂಪಿ

**ಪುಟ : ೧೬೮** **ಬೆಲೆ : ರೂ. ೬೦**

**ಸಾಹಿತ್ಯ ಪ್ರಕಾಶನ**, ಸಿಟಿ ಕ್ಲಿನಿಕ್ ಸಂಕೀರ್ಣ, ದಾಜೀಬಾನ ಪೇಟೆ, ಹುಬ್ಬಳ್ಳಿ - ೫೮೦ ೦೨೮

ಉತ್ತಮ ನಡವಳಿಕೆಗಳತ್ತ ಮಾರ್ಗದರ್ಶನ ಮಾಡುತ್ತ ಉತ್ತಮ ವಿಚಾರಗಳನ್ನು ತಿಳಿ ಹೇಳುವ ಪ್ರಬುದ್ಧ ಪಕ್ವ ಮನಸ್ಸಿನ ಹಿರಿಯರಾದ ಶ್ರೀ ವೀರೇಂದ್ರ ಸಿಂಪಿ ಅವರು ಈ ಲೇಖನಗಳನ್ನು ಬರೆದಿದ್ದಾರೆ. ನಮ್ಮನ್ನು ಅತ್ಯುತ್ತಮ ನಾಗರಿಕರನ್ನಾಗಿ ರೂಪಿಸುವ ಧ್ಯೇಯವುಳ್ಳ ಅವರು ಮುಖ್ಯವಾಗಿ ಯುವಜನರನ್ನು ದೃಷ್ಟಿಯಲ್ಲಿಟ್ಟುಕೊಂಡು ಜೀವಿತದ ಅವಧಿಯಲ್ಲಿ ನೈತಿಕ ಜವಾಬ್ದಾರಿಗಳನ್ನು ನಿರ್ವಹಿಸಲು ಕರೆಕೊಟ್ಟಿದ್ದಾರೆ. ಎಲ್ಲ ವಯೋಮಾನದವರಿಗೂ ಈ ಲೇಖನಗಳು ರುಚಿಸುತ್ತವೆ.

## ಹತ್ತು ಲಕ್ಷ ರೂಪಾಯಿ ಜ್ಯೋತಿಷಕ್ಕೆ ಸವಾಲು (ವೈಚಾರಿಕ)

ಎ. ಎಸ್. ನಟರಾಜ್

**ಪುಟ : ೪೦೮** **ಬೆಲೆ : ರೂ. ೨೫೦**

**ರಾಜ್ ವೈಚಾರಿಕ ವೇದಿಕೆ**, ನಂ. ೪೩, 'ರೋಹಿಣಿ', ೫ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೭೦

ಅಂಧಶ್ರದ್ಧೆಯ ಕೂಪವಾಗಿರುವ ಹಾಗೂ ಮುಗ್ಧ ಮನಸ್ಸುಗಳನ್ನು ವಂಚಿಸುತ್ತ ಹೊಟ್ಟೆಪಾಡು ನೋಡಿಕೊಳ್ಳುವ ದುರ್ವಿದ್ಯೆಯಾಗಿ ಶೂನ್ಯ ಫಲಿತಾಂಶ ಕೊಡುವ ಫಲಜ್ಯೋತಿಷವು ಅವೈಜ್ಞಾನಿಕವೆಂದು ವಾದಿಸಿರುವ ವಿಚಾರಪೂರಿತ ಗ್ರಂಥ. ಅಷ್ಟೇ ಅಲ್ಲ; ಜ್ಯೋತಿಷ - ಜಾತಕದ ಮೇಲೆ ಹತ್ತು ಪ್ರಶ್ನೆಗಳನ್ನು ನೀಡಿ ನಿಖರ ಆಧಾರ ಸಹಿತ ಸಾಬೀತುಪಡಿಸಿದವರಿಗೆ. ಹತ್ತು ಲಕ್ಷ ರೂಪಾಯಿಗಳ ಸವಾಲನ್ನೂ ಎಸೆದ ಹಿರಿಮೆ ಈ ಪುಸ್ತಕಕ್ಕಿದೆ. ಜ್ಯೋತಿಷಿಗಳ ಹೇಳಿಕೆಗಳನ್ನು ಸಾರಾಸಗಟಾಗಿ ಅಲ್ಲಗಳೆಯುತ್ತ ವೈಚಾರಿಕ ನಿಲುವನ್ನು ಪ್ರತಿಪಾದಿಸಿದೆ.

## ತಥಾಸ್ತು (ಕಥಾ ಸಂಕಲನ)

ಬಿ. ರಮೇಶ್

**ಪುಟ : ೧೨೮** **ಬೆಲೆ : ರೂ. ೬೦**

**ಬಿ. ಆರ್. ನಾಗಲತ**, ನಂ. ೪೩, 'ಸ್ಕಂದ', ೧೦ನೇ ಮುಖ್ಯರಸ್ತೆ, ಬನಶಂಕರಿ ೩ನೇ ಹಂತ, ಬೆಂಗಳೂರು - ೮೫

ಲೇಖಕರು ತಮ್ಮ ಏಳನೆಯ ಈ ಕೃತಿಗಾಗಿ ಏಳು ಕಥೆಗಳನ್ನು ನವಿರಾಗಿ ಹೆಣೆದಿದ್ದಾರೆ. ಇಲ್ಲಿನ ಪಾತ್ರ ಸೃಷ್ಟಿಯಲ್ಲಿ ಅತ್ಯಾಧುನಿಕ ಜೀವನಶೈಲಿಯಲ್ಲಿ ಬದುಕುವ ಮನಸ್ಸುಗಳ ಪ್ರತಿಬಿಂಬವೇ ಇಣುಕಿದಂತೆ ಭಾಸವಾಗುತ್ತದೆ. ಅಲ್ಲಲ್ಲಿ ನಡೆದ-ನೋಡಿದ ಘಟನೆಗಳನ್ನು ಹೇಳುತ್ತಿರುವರೇನೋ ಎನ್ನುವಂತೆ ಮುಗ್ಧತೆ-ನೈಜತೆ-ಪ್ರಾಮಾಣಿಕತೆ ಬೆರೆತುಹೋಗಿದೆ. ಸುಂದರ ಸನ್ನಿವೇಶಗಳನ್ನು ಹೃದ್ಯವಾಗಿಯೂ, ಕೆಲವು ದಾರುಣ ಪ್ರಸಂಗಗಳನ್ನು ಮನ ಕರಗುವಂತೆಯೂ ಹೇಳುತ್ತ ಓದುಗರನ್ನು ಬಹುಜಾಣ್ಮೆಯಿಂದ ಓದಿನತ್ತ ಸೆಳೆಯಲಾಗಿದೆ.

**– ಇಂದಿರಾ ಕುಮಾರಿ**

# ರಾಷ್ಟ್ರೀಯ ಶಿಕ್ಷಣ ಮತ್ತು ನಿರ್ವಹಣೆಯ ವೆಚ್ಚ

ತನ್ನ ಪ್ರಜೆಗಳಿಗೆ ಉತ್ತಮ ಶಿಕ್ಷಣವನ್ನು ಒದಗಿಸುವುದು ಯಾವುದೇ ದೇಶದ ಪ್ರಪ್ರಥಮ ಪ್ರಮುಖ ಹೊಣೆಗಾರಿಕೆ. ತತ್ರಾಪಿ ಪ್ರಜಾಸತ್ತಾತ್ಮಕ ರಾಜಕೀಯ ಪದ್ಧತಿಯನ್ನು ಅನುಸರಿಸುವ ದೇಶ ಯಶಸ್ವಿ ಆಗಲು ತನ್ನ ಜನ ಹಾಗೂ ಅಧಿಕಾರ ಸೂತ್ರಗಳನ್ನು ಹಿಡಿಯುವವರಿಗೆ, ನಿಜವಾದ ಅರ್ಥದಲ್ಲಿ ಪ್ರಜಾಸತ್ತೆಯಲ್ಲಿ ಬದುಕುವುದು ಹಾಗೂ ಅದರ ಆದರ್ಶಗಳನ್ನು ಪರಿಪಾಲಿಸುವುದು ಹೇಗೆಂಬುದನ್ನು ಕಲಿಸಲೇಬೇಕಾಗುತ್ತದೆ. ಒಂದು ಪ್ರಜಾಸತ್ತೆ ಶತ-ಶತಾಂಶ ಯಶಸ್ಸು ಪಡೆಯುವುದು ಅಪರೂಪ ಯಾ ಅಸಾಧ್ಯವೇ ಆದರೂ ಜನ ಅದರ ರೀತಿ ನೀತಿಗಳನ್ನು ಮನದಟ್ಟು ಮಾಡಿಕೊಂಡಾಗ ಅದು ಪರಿಣಾಮಕಾರಿಯೇ.

ದೇಶ ಆಗಾಗ ಎದುರಿಸಬೇಕಾಗಿ ಬರುವ ಸಮಸ್ಯೆಗಳು ಕಷ್ಟಕೋಟಲೆಗಳಿಗೂ ಏಕೈಕ ಪರಿಹಾರವೆಂದರೆ ಉತ್ತಮ ಶಿಕ್ಷಣವೇ ಎಂದು ನಮ್ಮ ಹಾಗೂ ಅನ್ಯ ಹೆಸರಾಂತ ಚಿಂತಕರ ಉದ್ಗಾರಗಳಿವೆ – ರಾಜಾಜಿ, ಲಜಪತ್ ರಾಯ್, ರವೀಂದ್ರ ಠಾಕೂರ್, ಲೆನಿನ್, ರಸ್ಕಿನ್, ನನ್ ಮುಂತಾದವರು. ಉತ್ತಮ ಶಿಕ್ಷಣವೆಂಬುದರ ಗುರಿ ಮಕ್ಕಳನ್ನು ವಿದ್ಯಾವಂತ, ನೀತಿವಂತ, ಹೃದಯವಂತ, ವಿವೇಕವಂತ, ಧೈರ್ಯಶಾಲಿ, ಪ್ರಾಮಾಣಿಕ ಹಾಗೂ ದಕ್ಷ ಪ್ರಜೆಗಳಾಗಿ ರೂಪಿಸುವುದು ಎಂದು ಅವರೆಲ್ಲರ ಅಭಿಪ್ರಾಯ. ದೇಶ ಈ ಗುರಿ ಸಾಧಿಸಲು ಮೊಟ್ಟ ಮೊದಲು ಶಿಕ್ಷಣದ ಪ್ರಪ್ರಾಮುಖ್ಯವನ್ನರಿತು, ಅದರ ಸಲುವಾಗಿ ಕೈ-ಬಿಚ್ಚಿ ಬಂಡವಾಳವನ್ನು ಒದಗಿಸಬೇಕಾಗುತ್ತದೆ. ರವೀಂದ್ರರು ಈ ವಿಷಯದಲ್ಲಿ ''ಚೌಕಶಿ ಬುದ್ಧಿ ಎಂದಿಗೂ ಇರದಿರಲಿ, ಅದು ದೇಶದ ಪ್ರಗತಿಗೆ ಅಡ್ಡಿಯೇ'' ಎಂದಿದ್ದಾರೆ. ಲೆನಿನ್ ಒಂದು ಹೆಜ್ಜೆ ಮುಂದೆ ಹೋಗಿ, ''ಶಿಕ್ಷಣಕ್ಕಾಗಿ ಹೆಚ್ಚು ಹೆಚ್ಚು ವೆಚ್ಚ ವಾರ್ಷಿಕ ಯೋಜನೆಯಲ್ಲಿ ಮೀಸಲಿಡುವುದು ದೇಶದ ಗೌರವ-ಘನತೆಗಳ ದ್ಯೋತಕ'' ಎಂದೇ ಘೋಷಿಸಿರುತ್ತಾರೆ. ಅವರಿಬ್ಬರೂ ಪ್ರಾಥಮಿಕ ಶಿಕ್ಷಣಕ್ಕೆ ಒತ್ತು ಕೊಟ್ಟು, ಆ ಹಂತದಲ್ಲಿ ಕರ್ತವ್ಯ ಪಾಲಿಸುವ ಶಿಕ್ಷಕರ ಯೋಗಕ್ಷೇಮದ ಬಗ್ಗೆ ವಿಶೇಷ ಕಾಳಜಿ ತೋರಿದ್ದಾರೆ. ಅವರ ಬದುಕು ಚಿಂತಾರಹಿತವಾಗಿರುವಷ್ಟು ವೇತನಾದಿಗಳು ಅವರಿಗೆ ಸಲ್ಲಲೇಬೇಕು ಎಂದೇ ಅವರ ಹೇಳಿಕೆ. ಲೆನಿನ್ ತನ್ನ ದೇಶದ ಪ್ರಜೆಗಳಿಗೆ ಪ್ರಾಥಮಿಕ ಶಿಕ್ಷಣ ಮಾತ್ರವೇ ಸಾಲದು, ಆದಷ್ಟೂ ಅಧಿಕಾಧಿಕ ಜನಕ್ಕೆ ಉನ್ನತ ಶಿಕ್ಷಣವೂ ದೊರೆಯುವಂತಾಗಬೇಕು ಎಂದು ವಾದಿಸಿರುತ್ತಾರೆ. ಆದ್ದರಿಂದ ಯಾವುದೇ ದೇಶ ಪ್ರಗತಿ ಹೊಂದಲು ಇಂಥ ಚಿಂತಕರ ಅಭಿಪ್ರಾಯಗಳಿಗೆ ಗಮನ, ಮನ್ನಣೆ ನೀಡಬೇಕಲ್ಲವೇ ?

ನಮ್ಮ ದೇಶವನ್ನು ೧೯೪೭ ರಲ್ಲಿ ಬಿಟ್ಟು ತೊಲಗಿದ ಬ್ರಿಟಿಷ್ ಆಳರಸರು ತಮ್ಮ ಸುದೀರ್ಘ ಆಳ್ವಿಕೆಯುದ್ದಕ್ಕೂ ಈ ದೇಶವನ್ನು ಕೊಳ್ಳೆ ಹೊಡೆದರೇ ವಿನಾ ಎಲ್ಲ ಜನರಿಗೆ ಸೂಕ್ತ ಪ್ರಾಥಮಿಕ ಶಿಕ್ಷಣ ಸಹ ಒದಗಿಸದಾದರು. ತಮ್ಮ ವೈಫಲ್ಯವನ್ನು ತಾವೇ ೧೯೪೩ರಲ್ಲಿ ಪ್ರಕಟಿಸಿದ ''ಆಕ್ಸ್‌ಫರ್ಡ್ ಪಾಂಫ್ಲೆಟ್ ಆನ್ ದಿ ಸ್ಟೇಟಸ್ ಆಫ್ ಎಜುಕೇಷನ್ ಇನ್ ಇಂಡಿಯಾ''ದಲ್ಲಿ ಮುಕ್ತವಾಗಿ ಒಪ್ಪಿಕೊಂಡಿರುತ್ತಾರೆ: ''ಫಾರ್ ವೇರಿಯಸ್ ರೀಸನ್ಸ್ ಅವರ್ ಪ್ರೈಮರಿ ಎಜುಕೇಷನ್ ಹ್ಯಾಸ್ ಬೀನ್ ಮೀಗರ್, ಇನ್ಎಫೆಕ್ಟಿವ್ ಅಂಡ್ ಅನ್‌ಇಂಟೆರೆಸ್ಟಿಂಗ್... ನಾನ್ ರೆಸ್‌ಪಾನ್‌ಸಿವ್ ಟು ದ ನೀಡ್ಸ್ ಆಫ್ ನ್ಯಾಷನಲ್ ಲೈಫ್.''

ಅದು ಅವರ ಕಾಲದ ಕತೆಯಾಯಿತು. ೧೯೪೭ರ ತರುವಾಯ ಸ್ವತಂತ್ರ ರಾಷ್ಟ್ರದ ಪ್ರಥಮದಲ್ಲಿಯೇ ಇಂಥ ದುರವಸ್ಥೆಯನ್ನು ಸರಿಪಡಿಸಲು ನಮ್ಮವರು ನಿಜವಾಗಿ ಪ್ರಯತ್ನಿಸಿದರೇ ? ಇಲ್ಲವೆನ್ನಲೇಬೇಕಾಗಿದೆ. ಪ್ರಾಥಮಿಕ ಶಿಕ್ಷಣದ ಬಗ್ಗೆ ಪ್ರಥಮದಲ್ಲಿಯೇ ಚಿಂತಿಸಬೇಕೆಂಬುದನ್ನು ಮರೆತರು; ಅಲ್ಲ, ನಿರ್ಲಕ್ಷಿಸಿದರು. ಈ ತಾತ್ಸಾರದ ಅನಿಷ್ಟ ಪರಿಣಾಮ ? ಐವತ್ತು ವರ್ಷಗಳಾದರೂ ಅನಕ್ಷರರ ಸಂಖ್ಯೆ ಶೇಕಡ ೫೦ಕ್ಕೂ ಮೀರಿದೆ. ೧೯೪೭ರಲ್ಲಿ ಹುಟ್ಟಿದ ಬಹಳ ಜನ ಇಂದೂ ಸಹ ಅಕ್ಷರ ವಿದ್ಯೆಯಿಂದ ವಂಚಿತರೇ. ಶಿಕ್ಷಣದ ಬಗ್ಗೆ ನಿರ್ಲಕ್ಷ್ಯ ಮಾತ್ರ ಅಲ್ಲ, ಅದಕ್ಕೆ ಸಾಕಷ್ಟು ವೆಚ್ಚ ಒದಗಿಸಬೇಕಾದುದು ಅನ್‌ಪ್ರೊಡಕ್ಟಿವ್ ಇನ್‌ವೆಸ್ಟ್‌ಮೆಂಟ್ ಎಂಬ ದೃಷ್ಟಿ! ಅದು ದೃಷ್ಟಿಯಲ್ಲ, ಕುರುಡುತನ! ಶಿಕ್ಷಣದ ವೆಚ್ಚದ ಬಗ್ಗೆ ಚೌಕಶಿ, ಚೌಕಶಿ, ಚೌಕಶಿ! ೧೯೪೭ ರಿಂದ ೧೯೯೭ರ ವರೆಗೆ ವಾರ್ಷಿಕ ಆದಾಯದಲ್ಲಿ ಕೇವಲ ಶೇ. ೩ ಶಿಕ್ಷಣಕ್ಕೆಂದು. ಅದರಲ್ಲಿ ಸಿಂಹಪಾಲು ಉನ್ನತ ಶಿಕ್ಷಣಕ್ಕೆ. ಪ್ರಾಥಮಿಕ ಶಿಕ್ಷಣಕ್ಕೆ ? ಶಾಲಾ ಕೊಠಡಿಗಳಿಲ್ಲ. ಇದ್ದವೂ

ದೇಶ ಆಗಾಗ ಎದುರಿಸಬೇಕಾಗಿ ಬರುವ ಸಮಸ್ಯೆಗಳು ಕಷ್ಟಕೋಟಲೆಗಳಿಗೂ ಏಕೈಕ ಪರಿಹಾರವೆಂದರೆ ಉತ್ತಮ ಶಿಕ್ಷಣವೇ ಎಂದು ನಮ್ಮ ಹಾಗೂ ಅನ್ಯ ಹೆಸರಾಂತ ಚಿಂತಕರ ಉದ್ಗಾರಗಳಿವೆ – ರಾಜಾಜಿ, ಲಜಪತ್ ರಾಯ್, ರವೀಂದ್ರ ಠಾಕೂರ್, ಲೆನಿನ್, ರಸ್ಕಿನ್, ನನ್ ಮುಂತಾದವರು. ಉತ್ತಮ ಶಿಕ್ಷಣವೆಂಬುದರ ಗುರಿ ಮಕ್ಕಳನ್ನು ವಿದ್ಯಾವಂತ, ನೀತಿವಂತ, ಹೃದಯವಂತ, ವಿವೇಕವಂತ, ಧೈರ್ಯಶಾಲಿ, ಪ್ರಾಮಾಣಿಕ ಹಾಗೂ ದಕ್ಷ ಪ್ರಜೆಗಳಾಗಿ ರೂಪಿಸುವುದು ಎಂದು ಅವರೆಲ್ಲರ ಅಭಿಪ್ರಾಯ.

ಬ. ನಾ. ರಘುರಾಮ

ಸೂರು ಸೋರುವ, ಬೀಳುವ ಗೋಡೆಯ ಮುರುಕು ಮಂಟಪಗಳು. ಕಪ್ಪುಹಲಗೆ-ಸೀಮೆಸುಣ್ಣವಿಲ್ಲ. ಒಂದು ಕೊಠಡಿಯಲ್ಲಿ ನಾಲ್ಕು ತರಗತಿಗಳ ಮಕ್ಕಳಿಗೆ ಒಬ್ಬನೇ ಶಿಕ್ಷಕ. ಅವನೇ ಜವಾನ ಸಹ. ಕಸ ಗುಡಿಸಿ ಗಂಟೆ ಬಾರಿಸುವವನೂ ಅವನೇ. ಎಂದ ಬಳಿಕ ಎಷ್ಟು ಹಣ ಮೀಸಲು ಎಂದು ಅಂದಾಜು ಮಾಡಬಹುದೇನೋ. ಕುಡಿವ ನೀರು ಸೊನ್ನೆ. ಹೆಣ್ಣುಮಕ್ಕಳಿಗೆ ಅವಶ್ಯಕ ಅನುಕೂಲಗಳಿಗೆ ಸೊನ್ನೆ. ಹೀಗೆ ಬೇಕಾಬಿಟ್ಟ ಶಿಕ್ಷಣದ ನಿರ್ವಹಣೆ. ಶಿಕ್ಷಕ ಯಾವ ಉತ್ಸಾಹದಿಂದ ಕಾರ್ಯ ಮಾಡಬೇಕು ? ಹಿಂದಿನ ದಿನಗಳ ''ಅಯ್ಯನೋರ ಕೂಲಿಮಠ''ವೇ ಎಷ್ಟೋ ವಾಸಿ ಎನ್ನಬಹುದು. ನಿಗದಿತ ಶೇ. ೩ ಸಹ ದಕ್ಕಲಿಲ್ಲ, ಕೇವಲ ಶೇ. ೧.೫ ರಿಂದ ಶೇ. ೨ ಮಾತ್ರ. ಇತರೆಲ್ಲ ವಿಷಯಗಳಿಗೆ ಕೈ ಬಿಚ್ಚಿ ವೆಚ್ಚ, ಶಿಕ್ಷಣಕ್ಕೆ ಮಾತ್ರ ಕೈ ಬಿಗಿ. ೧೯೪೦ರ ವರೆಗೆ ಕರ್ನಾಟಕದಲ್ಲಿ ಕಾಲೇಜ್ ಕನ್ನಡ ಅಧ್ಯಾಪಕನ ವೇತನವೇ ಅರವತ್ತು ರೂಪಾಯಿಗಳೆಂದ ಬಳಿಕ ಪ್ರೌಢ, ಪ್ರಾಥಮಿಕ ಶಾಲೆಗಳ ಶಿಕ್ಷಕರ ಪಾಡೇನು! ಕೆಲವೇ ವರ್ಷಗಳ ಹಿಂದಷ್ಟೆ ರಾಷ್ಟ್ರೀಯ ಆದಾಯದಲ್ಲಿ ಶಿಕ್ಷಣಕ್ಕೆ ಶೇ. ೬ ಎಂದು ನಿರ್ಣಯವೇನೋ ಆಯಿತು. ಇನ್ನೂ ಪೂರ್ಣ ರೂಪದಲ್ಲಿ ಕಾಣಸಿಲ್ಲ. ಈಚೆಗಷ್ಟೆ ಪ್ರಾಥಮಿಕ ಶಿಕ್ಷಣದ ಬಗ್ಗೆ ಒತ್ತು ಸಿಗುತ್ತಿದೆ. ಶಿಕ್ಷಣದಲ್ಲಿ ಕೇವಲ ಪಾಂಡಿತ್ಯ-ಪ್ರೌಢಿಮೆ-ಪರಿಣತಿಗಳೇ ನಮಗೆ ಸಾಲದು, ಆದಿಯಿಂದ ಅಂತ್ಯದವರೆಗೂ ಸಾಮಾಜಿಕ ಋಣ ಪ್ರಜ್ಞೆ, ಮಾನವೀಯ ರಾಷ್ಟ್ರೀಯ ಮೌಲ್ಯಗಳು, ನೀತಿನಿಯಮಗಳೂ ಸೇರಿರಲೇಬೇಕೆಂಬ ಒತ್ತು ಕಂಡಿದೆ.

ಶಿಕ್ಷಣಕ್ಕಾಗಿ ಮೀಸಲಾಗಬೇಕಾದ ವೆಚ್ಚದ ವಿಷಯ ಲೆನಿನ್ ರವೀಂದ್ರರ ಮಾತುಗಳನ್ನು ನೆನೆಯೋಣ. ಆದರೆ ಅಭಿವೃದ್ಧಿಶೀಲವಾಗಿಯೇ ಇರುವ ದೇಶ ನಮ್ಮದು. ಹೆರವರ ಆಡಳಿತ ಮುಗಿದು ದೇಶ ವಿಭಜನೆಯಾದಾಗ ಏರು-ಪೇರು ಆರ್ಥಿಕ ಮುಗ್ಗಟ್ಟನ್ನು ಸಹಜವಾಗಿ ಉಂಟುಮಾಡಿತು. ಯೋಜನೆಗಳ ಬಗ್ಗೆ ಸೂಕ್ತ ಯೋಚನೆಗಳು ಇರದೆ ಪ್ರಾಥಮಿಕ ಶಿಕ್ಷಣವನ್ನು ನಿರ್ಲಕ್ಷಿಸಲಾಯಿತು. ಶಿಕ್ಷಣಕ್ಕೆ ಹೆಚ್ಚು ಹಣ ನಿಗದಿಪಡಿಸುವುದೂ ಕಷ್ಟವಾಯಿತು. ಈಗಲೂ ಪರಿಸ್ಥಿತಿ ಹೆಚ್ಚುಕಡಿಮೆ ಹಾಗೆಯೇ ಇದೆ ಎನ್ನಬೇಕು. ಜನಸಂಖ್ಯೆಯ ಹೆಚ್ಚಳ ತೀವ್ರವಾಗಿಯೇ ಇದೆ. ಶಿಕ್ಷಣಕ್ಕೆ ಆದಾಯದ ಶೇ. ೧೦ ಆದರೂ (ಅದೂ ಕಡಿಮೆಯೇ) ಅವಶ್ಯಕ, ಅಗತ್ಯದ ಇನ್‌ಫ್ರಾಸ್ಟ್ರಕ್ಚರ್ ಅನುಕೂಲಗಳನ್ನು ಸಮರ್ಪಕವೆನ್ನಿಸಲು. ಇಂಥ ಪರಿಸ್ಥಿತಿಯಲ್ಲಿ ಹೆಚ್ಚಿನ ಅಗತ್ಯದ ವೆಚ್ಚ ತೂಗಿಸಲು ಏನು ಮಾಡಬಹುದು, ಮಾಡಬೇಕು ಎಂಬ ವಿಷಯ ಚಿಂತಿಸುವುದು ಮುಖ್ಯವೆನ್ನಿಸುತ್ತದೆ.

ನಮ್ಮ ಸಮಾಜ ತನ್ನ ಮಕ್ಕಳಿಗೆ ಸೂಕ್ತ ಶಿಕ್ಷಣ ವಿಷಯವಾಗಿ ಹೇಗೆ ಸ್ಪಂದಿಸಬೇಕೆಂಬುದನ್ನು ತಿಳಿಯಲು ನಮ್ಮ ಇತಿಹಾಸವನ್ನು ಗಮನಿಸುವುದು ಲಾಭಕರ.

# ನೈಸರ್ಗಿಕ 'ವಿಟಮಿನ್ ಸಿ' ನೆಲ್ಲಿಕಾಯಿ

ಆಯುರ್ವೇದ ಶಾಸ್ತ್ರವೆಂದರೆ ಒಂದು ನೈಸರ್ಗಿಕ ಶಾಸ್ತ್ರ. ನಿಸರ್ಗದಲ್ಲಿ ದೊರೆಯುವ ಮುತ್ತು, ರತ್ನ, ಹವಳ, ಪಾದರಸ, ಶಂಖ ಇನ್ನು ಅನೇಕ ವಸ್ತುಗಳು ಮತ್ತು ಗಿಡಮೂಲಿಕೆಗಳು ಔಷಧಿಗಳಿಗಾಗಿ ಉಪಯೋಗಿಸಲ್ಪಡುತ್ತವೆ. ಇವುಗಳಲ್ಲಿ ವನಸ್ಪತಿಗಳ ಪಾತ್ರ ಅತ್ಯಂತ ಹಿರಿದಾದದು. ನಿಸರ್ಗದಲ್ಲಿ ದೊರೆಯುವ ಹೆಚ್ಚಿನವುಗಳು ಔಷಧಿ ಗುಣದಿಂದ ಹೊರತಾಗಿಲ್ಲ ಎಂದು ಹೇಳಲಾಗಿದೆ. ಹಿಂದಿನಿಂದಲೂ ವನಸ್ಪತಿಗಳು ವಿವಿಧ ರೋಗಗಳಿಗಾಗಿ ಉಪಯೋಗಿಸಲ್ಪಡುತ್ತಾ ಬಂದಿವೆ. ಈ ಎಲ್ಲ ಸಸ್ಯಗಳಲ್ಲಿ ಪ್ರಮುಖವಾಗಿ ಗುರುತಿಸಲ್ಪಡುವುದು ನೆಲ್ಲಿ. ಭಾರತದಲ್ಲಿ ಎಲ್ಲ ಉಷ್ಣ ಪ್ರದೇಶಗಳಲ್ಲಿಯೂ ಕಂಡುಬರುವ ಇದು ಉತ್ತರ ಭಾರತ, ಬಿಹಾರಗಳಲ್ಲಿ ಅಧಿಕವಾಗಿದೆ.

ನೆಲ್ಲಿ, ಮಧ್ಯಮಾಕಾರದ ವೃಕ್ಷ. ಇದರ ಪತ್ರಗಳು ಹುಣಸೇಮರದ ಪತ್ರಗಳಂತೆಯೇ ಇದ್ದರೂ ಸ್ವಲ್ಪ ಚಿಕ್ಕವು. ಹೂಗಳು ಹಳದಿ ಮಿಶ್ರಿತ ಹಸಿರು ವರ್ಣದ್ದಾಗಿರುತ್ತವೆ. ಕಾಯಿಗಳು ಗುಚ್ಛದಲ್ಲಿ ಇರುತ್ತವೆ ಹಾಗೂ ಆರು ರೇಖೆಗಳಿಂದ ಯುಕ್ತವಾಗಿರುತ್ತವೆ. ಇವು ಹಸಿಯಾಗಿರುವಾಗ ಹಸಿರು, ಹಣ್ಣಾದಾಗ ಹಸಿರುಮಿಶ್ರಿತ ಹಳದಿ ಬಣ್ಣ ತಳೆಯುತ್ತವೆ.

ನೆಲ್ಲಿ ವಿಟಮಿನ್-ಸಿಯ ಆಗರ ಎಂದು ಅನೇಕ ಪ್ರಯೋಗಗಳಿಂದ ದೃಢಪಟ್ಟಿದೆ. ಕ್ಷಯರೋಗಿಗಳಲ್ಲಿ, ನೆಲ್ಲಿಕಾಯಿ ಹಣ್ಣು ಮತ್ತು ವಿಟಮಿನ್-ಸಿ ಮಾತ್ರೆಗಳ ಚಿಕಿತ್ಸೆಯಿಂದ ನೆಲ್ಲಿಕಾಯಿಯಿಂದ ವಿಟಮಿನ್-ಸಿ ಗಿಂತಲೂ ಹೆಚ್ಚಿನ ಮತ್ತು ಶೀಘ್ರ ಪರಿಣಾಮ ಕಂಡುಬಂದಿದೆ. ಕಾಮಾಲೆ ಮತ್ತು ಪಿತ್ತ ವಿಕಾರಗಳಿಗೆ ಇದು ದಿವ್ಯ ಔಷಧಿ. ರೋಗಿಗಳಿಗೆ ನೆಲ್ಲಿಕಾಯಿಯ ರಸದಲ್ಲಿ ಕಲ್ಲು ಸಕ್ಕರೆ ಹಾಕಿ ಶರಬತ್ ಮಾಡಿ ಕುಡಿಸುವುದರಿಂದ ಬೇಗನೆ ಗುಣ ಕಂಡುಬರುತ್ತದೆ. ಮುಖವ್ರಣದಲ್ಲಿ ಇದರ ಎಲೆಗಳ ಕ್ವಾಥದಿಂದ ಬಾಯಿ ಮುಕ್ಕಳಿಸುವುದರಿಂದಲೂ ಬೇನೆಯ ಉಪಶಮನವಾಗುತ್ತದೆ. ಅಜೀರ್ಣ ಮತ್ತು ಅತಿಸಾರದಲ್ಲಿ ಇದರ ಚಿಗುರು ಪತ್ರದ ರಸವನ್ನು ಮಜ್ಜಿಗೆಯೊಡನೆ ಸೇವಿಸುವುದರಿಂದ ಅಜೀರ್ಣ ಮತ್ತು ಅತಿಸಾರ ಗುಣವಾಗುತ್ತವೆ. ಮೂಲವ್ಯಾಧಿಯಲ್ಲಿ ಕೊಡಲಾಗುವ ತ್ರಿಫಳಾದಲ್ಲಿ ನೆಲ್ಲಿ ಒಂದು ಪರಿಣಾಮಕಾರಿ ಔಷಧಿ. ಇದರಂತೆಯೇ ಅಳಲೆಕಾಯಿ ಮತ್ತು ಕಾರೆಕಾಯಿಗಳು ಕಣ್ಣುಗಳ ಸ್ವಚ್ಛತೆಗೆ ಬಹಳ ಉಪಯುಕ್ತ. ರಾತ್ರಿ ನೆಲ್ಲಿಯ ಚೂರ್ಣವನ್ನು ನೀರಿನಲ್ಲಿ ನೆನೆಸಿಟ್ಟು



ಮುಂಜಾನೆ ಆ ನೀರಿನಿಂದ ತೊಳೆದುಕೊಂಡರೆ ಕಣ್ಣುಗಳು ತಿಳಿಯಾಗುತ್ತವೆ. ಮೆಹಂದಿಯೊಡನೆ ಇದರ ಚೂರ್ಣ ಸೇರಿಸಿ ಹಚ್ಚುವುದರಿಂದ ಕೂದಲು ದಟ್ಟ ಮತ್ತು ಕಾಂತಿಯುಕ್ತವಾಗುತ್ತವೆ. ರಕ್ತದ ಕೊರತೆ ಇರುವವರು ನೆಲ್ಲಿಕಾಯಿಯನ್ನು ಒಣಗಿಸಿ, ಚೂರ್ಣವನ್ನು ಮಾಡಿ ಜೇನುತುಪ್ಪದೊಂದಿಗೆ ಸೇವಿಸುವುದರಿಂದ ರಕ್ತದ ಕೊರತೆಯು ದೂರವಾಗಿ ಶರೀರ ಪುಷ್ಟ ಮತ್ತು ಕಾಂತಿಯುತವಾಗುತ್ತದೆ.

ಡಾ|| ಪ್ರತಿಭಾ ಹಳಿಂಗಳಿ
ಜಮಖಂಡಿ

ಪೂರ್ವದಲ್ಲಿ ದೇಶದ ಪ್ರಭುತ್ವ ಶಿಕ್ಷಣ ವಿಷಯದ ಬಗ್ಗೆ ಹೆಚ್ಚು ಚಿಂತಿಸುತ್ತಿರಲಿಲ್ಲ. ಆ ಚಿಂತನೆ ಸಮಾಜದ ಕರ್ತವ್ಯವಿತ್ತು, ಅದರ ಹೊಣೆಗಾರಿಕೆಯಾಗಿತ್ತು. ಶಿಕ್ಷಣ ಪದ್ಧತಿ, ಅದಕ್ಕೆ ಸೂಕ್ತ ಅನುಕೂಲಗಳು ಈ ವಿಷಯದಲ್ಲಿ ಸಮಾಜದ ಎಲ್ಲ ಅಂಗಗಳು - ರೈತರು, ಉದ್ಯಮಿಗಳು, ವರ್ತಕಸಂಘಗಳು, ದಾನಿಗಳು, ಕುಶಲ ಕರ್ಮಿಗಳು – ಶಿಕ್ಷಣ ತಮ್ಮ ಕರ್ತವ್ಯವೆಂದು ಮುಂದೆ ಬರುತ್ತಿದ್ದವು. ಮಕ್ಕಳು ವಸತಿ ಊಟ ವಸ್ತ್ರ ಶಿಕ್ಷಣಾವಶ್ಯಕ ವಸ್ತುಗಳು ಯಾವುದಕ್ಕೂ ವ್ಯಕ್ತಿಶಃ ವೆಚ್ಚ ಭರಿಸಬೇಕಾಗಿರಲಿಲ್ಲ. ಗುರುಕುಲದ ಕುಲಪತಿಯ ಹೊಣೆಯಾಗಿತ್ತು. ಕುಲಪತಿಗೆ ಧನ-ಧಾನ್ಯ ಇತರ ಆವಶ್ಯಕತೆಗಳನ್ನೊದಗಿಸುವುದು ಸಮಾಜದ ಹೊಣೆಯಾಗಿತ್ತು. (ಶಿಕ್ಷಣ ಎಲ್ಲರಿಗೂ ಲಭ್ಯವಾಗಿದ್ದಂತಿಲ್ಲ ಎಂಬ ಅಭಿಪ್ರಾಯವೂ ಇದೆ, ಅದು ಬೇರೆ ವಿಷಯ.)

ಅದನ್ನು ಬಹುಮಟ್ಟಿಗೆ ಹೋಲುವ ವ್ಯವಸ್ಥೆಯನ್ನು ಈ ಹೊಸಯುಗದಲ್ಲಿ ನಮ್ಮ ದೇಶದಲ್ಲಿ ತರುವ ಯೋಚನೆ ಮಾಡಬಹುದೇ ?

ಈ ಯೋಚನೆ ಸಾಕಾರ ಪಡೆಯಲಾರದಂಥದ್ದೇನಲ್ಲವೆನ್ನಿಸುತ್ತದೆ. ಪ್ರಯತ್ನ, ಪ್ರಚೋದನೆ ಸಾಧ್ಯಗೊಳಿಸೀತು. ನಮ್ಮ ಸಮಾಜದಲ್ಲಿ ಹಣಕ್ಕೇನೂ ಕೊರತೆ ಇಲ್ಲ – ಭಾರೀ ಉದ್ಯಮಿಗಳು, ಶ್ರೀಮಂತ ರೈತಾಪಿ ಜನ, ಇದ್ದಾರೆ. ದಾನ-ಧರ್ಮ ಪ್ರವೃತ್ತಿ ಜೀವಂತವಿದೆ ಸಮಾಜದಲ್ಲಿ. ಈಗಾಗಲೇ ನಮ್ಮ ಕರ್ನಾಟಕದಲ್ಲಿಯೇ ಸರಕಾರವನ್ನು ಯತ್ಕಿಂಚಿತ್ ಅವಲಂಬಿಸದೇ ಯಶಸ್ವಿಯಾಗಿ ನಡೆಸಲಾಗುತ್ತಿರುವ ನವ್ಯ ಶಿಕ್ಷಣ ಸಂಸ್ಥೆಗಳು ಹಲವು ವರ್ಷಗಳಿಂದ ಇವೆ. ಇಡೀ ದೇಶದಲ್ಲೂ ಅನೇಕ ಕಡೆ ಇಂಥವು ಡಂಗುರ ಬಾರಿಸದೆ ಕಾರ್ಯಶೀಲವಾಗಿವೆ. ಈ ಯೋಜನೆಗೆ ಇನ್ನಷ್ಟು ಪ್ರಚಾರ ಸಿಕ್ಕು, ಶಿಕ್ಷಣಕ್ಕೆ ಪೋಷಣೆ ಒದಗಿಸಬಲ್ಲವರನ್ನು ಗುರುತಿಸಿ, ಆಕರ್ಷಿಸುವುದು ಸಾಧ್ಯ. ಹಿಂದು, ಕ್ರಿಸ್ತ, ಮುಸ್ಲಿಂ ಹಾಗೂ ಇತರ ಮಠಗಳು ಆಗಲೇ ಊಟ-ವಸತಿ ಸಹಿತ ಶಿಕ್ಷಣ ಒದಗಿಸುತ್ತಿವೆ. ದೇಶದಲ್ಲಿ ಇಂಥವರು ಒಟ್ಟಾಗಿ ದೇಶಾದ್ಯಂತ ಶೈಕ್ಷಣಿಕ ಚಳವಳಿ - ಆಂದೋಳನ ನಡೆಸಿದರೆ ಅನೇಕಾನೇಕ ವ್ಯಕ್ತಿಗಳು, ಸಂಸ್ಥೆಗಳು ಮುಂದೆ ಬಂದೇ ಬಂದಾವು. ಸರಕಾರ ಭರಿಸಲು (ಇಷ್ಟಪಟ್ಟರೂ) ಅಸಾಧ್ಯವೆನ್ನಿಸುವುದಕ್ಕೆ ಪೂರಕವಾಗಬಲ್ಲ ಸಂಪತ್ತು ಸಮಾಜದಿಂದ ಸಂಗ್ರಹವಾದೀತು. ''ಶಿಕ್ಷಣಕ್ಕೆ ನೀಡಿದಾಗ ಸಂಪತ್ತು ಸದ್ವಿನಿಯೋಗವಾಗುತ್ತದೆ'' ಎಂಬ ಉಕ್ತಿಯನ್ನು ಜ್ಞಾಪಿಸಬೇಕಷ್ಟೆ. ಪಾಪ-ಪುಣ್ಯದಲ್ಲಿ ನಂಬಿಕೆಯವರು, ಮಾನಸಿಕ ಸಮಾಧಾನ ಸಿಗುವ ದೃಷ್ಟಿಯವರು, ರಾಷ್ಟ್ರದ ಮಕ್ಕಳ ಹಿತದೃಷ್ಟಿಯವರು – ಹೀಗೆ ವಿವಿಧ ಶ್ರದ್ಧೆಗಳವರು ತಮ್ಮ ಸಂಪತ್ತನ್ನು ಭಾಗಶಃವಾದರೂ ನೀಡಲು ಮುಂದೆ ಬರುವುದರಲ್ಲಿ ಸಂಶಯವಿಲ್ಲ. ಶಿಕ್ಷಣಕ್ಕಾಗಿ ಪರದೇಶಗಳ ಮುಂದೆ ಭಿಕ್ಷಾಪಾತ್ರೆಯೊಡ್ಡುವ ಅವಮಾನಕರ ಕಾರ್ಯ ಬಿಟ್ಟು ದೇಶದಲ್ಲಿನ ಸಂಪತ್ತನ್ನು ಈ ರೀತಿ ಸಂಗ್ರಹಿಸಿ, ಶಿಕ್ಷಣ ಸುಸೂತ್ರವಾಗಿ, ಶ್ರೇಷ್ಠವಾಗಿ ಮಕ್ಕಳಿಗೆ ಲಭಿಸುವಂತಾಗಬೇಕು. ಈ ಬಗ್ಗೆ ದೇಶದಲ್ಲಿ ಚಿಂತನ ಮಂಥನ ನಡೆಯಲಿ. ಅನುಭವಿಗಳು, ಶಿಕ್ಷಣ ತಜ್ಞರು, ಮುಂತಾದವರ ನೆರವಿನಿಂದ ಅದು ಯಶಸ್ವಿಯಾಗಿ ಕಾರ್ಯಶೀಲವಾಗಿ ಪ್ರಭುತ್ವದ ಮೇಲಿನ ಆರ್ಥಿಕ ಭಾರವನ್ನು ತಾನು ಭಾಗಶಃ ವಹಿಸಿಕೊಳ್ಳಬಹುದು. ಮಕ್ಕಳ ಶಿಕ್ಷಣ, ಪ್ರಥಮದಿಂದ ಉತ್ತಮೋತ್ತಮ ಹಂತಗಳವರೆಗೆ ಸುಗಮವಾಗಿದ್ದು, ಪ್ರಾಮಾಣಿಕ ಹಾಗೂ ದಕ್ಷವಾಗಿ ಅದು ನಡೆಯಬೇಕು. ಮಕ್ಕಳು, ಶಿಕ್ಷಕರು, ಪಾಲಕ-ಪೋಷಕರು, ಶಿಕ್ಷಣ ಸಂಘಟನೆಯವರು ಎಲ್ಲರೂ ಸಂತೋಷ, ಸಂತೃಪ್ತಿ, ಸಮಾಧಾನ ಹೊಂದುವಂತಾಗಲಿ ಎಂಬ ಬಹುಕಾಲದ ಆಲೋಚನೆ, ದೃಷ್ಟಿ, ಆಸೆ ನನ್ನಂಥ ಅನೇಕ ಹಿರಿಯ ನಿವೃತ್ತ ಶಿಕ್ಷಕರದು. ಈ ಆಸೆ ಕೈಗೂಡುವುದರಲ್ಲಿ ಸಂಶಯವಿಲ್ಲವೆಂಬ ನಂಬಿಕೆ, ವಿಶ್ವಾಸ ನಮ್ಮದು.

ಬ.ನಾ. ರಘುರಾಮ
''ಗುಲ್ ಮೊಹರ್'', ಹೌಸಿಂಗ್ ಬೋರ್ಡ್ ಕಾಲೋನಿ, ಸಾಗರ - ೫೭೭ ೪೦೧

# ಅರೆಬೆತ್ತಲೆ ಫಕೀರ ಗಾಂಧೀ ಸೂಟುಧಾರಿ ಅಂಬೇಡ್ಕರ್

## ತಾತ್ವಿಕ ಜಿಜ್ಞಾಸೆ

ಗಾಂಧೀಜಿ ತಾವು ಹುಟ್ಟಿ-ಬೆಳೆದ ಸ್ಪರ್ಶ ಮೂಲದ ಪರಿಸರದ ಹಿನ್ನೆಲೆಯೊಳಗೆ ಭಾರತೀಯತೆ ಮತ್ತು ಅದರ ಅಂತಃಸತ್ವವೆನಿಸಿದ ಹಿಂದೂಧರ್ಮ ಉತ್ಕೃಷ್ಟವಾಗಿ ಕಾಣಿಸಿಕೊಂಡರೆ ಅದು ಗಾಂಧೀಜಿಯವರ ಕಣ್ಣಿನ ದೋಷವಲ್ಲ. ಅವರು ಬೆಳಸಿಕೊಂಡ ಸಂತಗುಣದ ದೋಷವಿರಬಹುದು. ಹಾಗೆಯೇ ಅಂಬೇಡ್ಕರ್ ಹುಟ್ಟಿ ಬೆಳೆದ ಅಸ್ಪೃಶ್ಯತೆಯ ಮೂಲದ ಬೇಗುದಿಯೊಳಗೆ ಇಂಡಿಯಾದ ಭಾರತೀಯತೆ ಮತ್ತು ಅದರ ಹೃದಯ ಭಾಗ ಹಿಂದೂಧರ್ಮ ಶ್ರೇಷ್ಠವಾಗಿ ಕಾಣಿಸಿಕೊಳ್ಳದಿದ್ದರೆ ಅದು ಅಂಬೇಡ್ಕರ್ ಅವರ ಆಲೋಚನೆಯ ದೋಷವಲ್ಲ, ಬದಲಾಗಿ ಅವರಲ್ಲಿ ಹುಟ್ಟಿಕೊಂಡ 'ಸ್ಫೋಟ ಗುಣ' ಇರಬಹುದು. ಈ ಇಬ್ಬರೂ ಭಾರತೀಯ ಮೂಲದ ನಾಯಕರುಗಳಿಗೆ ಇಂಡಿಯಾವು ಏಕ ಕಾಲದಲ್ಲಿ ಬೇರೆ ಬೇರೆಯಾಗಿ ಕಂಡುಬಂದರೆ ಆಶ್ಚರ್ಯಪಡಬೇಕಾಗಿಲ್ಲ. ಅಲ್ಲದೇ ಅವರ ಆಲೋಚನಾ ವಿಧಾನದ ರಾಷ್ಟ್ರೀಯವಾದಗಳು ಬೇರೆ ಬೇರೆಯಾಗಿ ಕಂಡುಬಂದರೆ ಯಾರೂ ಈ ಇಬ್ಬರನ್ನು ದೂಷಿಸಬೇಕಾಗಿಲ್ಲ.

ಸಂತಗುಣದ ಗಾಂಧೀಜಿಗೆ ಚಾತುರ್ವರ್ಣ್ಯ ಬೋಧಿಸುವ ಮನುಸ್ಮೃತಿ ಮತ್ತು ಹಿಂದೂಧರ್ಮದ ಸನಾತನ ಸಂಸ್ಕೃತಿಗಳು ಅತ್ಯಂತ ಹೆಚ್ಚು ವೈಜ್ಞಾನಿಕವಾಗಿ ಕಂಡು ಬರುತ್ತವೆ. ಅಲ್ಲದೆ ಈ ರೀತಿಯ ಚಾತುರ್ವರ್ಣ್ಯ ವ್ಯವಸ್ಥೆಯ ವಿಭಾಗ ಕ್ರಮದಿಂದಲೇ ಹಿಂದೂಧರ್ಮ ಉಳಿದುಕೊಂಡು ಬರಲು ಸಾಧ್ಯವಾಗಿದೆ ಎನ್ನುವ ಗಾಂಧೀಜಿಯ ಗ್ರಹಿಕೆಯಿಂದಲೇ ಅವರ ರಾಷ್ಟ್ರೀಯವಾದದ ಚಿಂತನೆ ಹೆಡೆಯೆತ್ತಿಕೊಂಡಿದೆ ಎಂಬುದು ಮುಖ್ಯವಾದುದೇ ಆಗಿದೆ. ಇಲ್ಲಿ ಮುಖ್ಯವಾಗಿ ಗಮನಿಸಲೇಬೇಕಾದ ವಿಚಾರವೆಂದರೆ ಗಾಂಧೀಜಿಗೆ ದೇಶದ ಸ್ವಾತಂತ್ರ್ಯಕ್ಕಿಂತ ಹಿಂದೂಧರ್ಮದ ರಕ್ಷಣೆಯ ಆಯ್ಕೆಯ ಕಡೆಗೆ ಹೆಚ್ಚು ಒಲವು ಇತ್ತು, ಎನ್ನುವ ಸೂಕ್ಷ್ಮವನ್ನು ನಾವು ಗ್ರಹಿಸಿಕೊಳ್ಳಬೇಕೆಂಬುದು. ಆದ್ದರಿಂದಲೇ ಗಾಂಧೀಜಿಗೆ ಬ್ರಿಟಿಷರನ್ನು ಈ ದೇಶದಿಂದ ತೊಲಗಿಸಬೇಕೆಂಬ 'ರಾಜಕೀಯ ಸ್ವಾತಂತ್ರ್ಯ'ದ ಆಯ್ಕೆಯ ಕಡೆಗೆ ಒಲವಿತ್ತು. ಅದು ಕೊನೆಗೆ 'ರಾಮರಾಜ್ಯ'ವಾಗಬೇಕೆಂಬ ಹಂಬಲದ ಪ್ರತೀಕವಾಗಿಯೇ ಆಂತರ್ಯದ ತುಡಿತವಾಗಿತ್ತು. ಇದು ಸಂತಗುಣದ ಚಿಂತನೆಗೆ ತಕ್ಕುದಾಗಿರುತ್ತದೆ.

ಗಾಂಧೀಜಿಯ ಸಂತಗುಣದ ಇನ್ನೊಂದು ಮುಖದ ವ್ಯಕ್ತಿತ್ವದ ನಡೆನುಡಿಗಳು, ಸರಳತೆ, ಆದರ್ಶಗುಣ, ಒಂದು ಕಪಾಳಕ್ಕೆ ಹೊಡೆದರೆ ಇನ್ನೊಂದು ಕಪಾಳವನ್ನು ತೋರಿಸುವ ಗುಣ, ಮಿತವಾದ ಆಹಾರ ಸೇವನೆ, ಸಿಟ್ಟು, ಹಠಮಾರಿತನ, ಶಿಸ್ತು, ಚರಕದಿಂದ ನೂಲು ನೇಯುವುದು, ಆಶ್ರಮದ ಬಾಳುವೆ – ಇತ್ಯಾದಿಗಳು ಇಂಡಿಯಾದಾದ್ಯಂತ ವಿವಿಧ ಸಂಸ್ಕೃತಿಯ, ಧರ್ಮ-ಜಾತಿಗಳ ಜನರಿಗೆ ಅವರು ಪ್ರಶ್ನಾತೀತ ನಾಯಕರಾಗಿ ಬಿಂಬಿತಗೊಳ್ಳಲು ಸಾಧ್ಯವಾಯಿತು. ಅಲ್ಲದೆ ಶೇಕಡ ೮೦ರಷ್ಟು ಜನಗಳು ಕುರಿಗಳ ಮಂದೆಯಂತೆ ಸಂತಗುಣದ ಗಾಂಧಿಯನ್ನು ಹಿಂಬಾಲಿಸಿಕೊಂಡು ಹೋಗುತ್ತಿದ್ದುದರ ಚಾರಿತ್ರಿಕ ಸತ್ಯವನ್ನು ಅಲ್ಲಗಳೆಯುವಂತಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಗಾಂಧೀಜಿಗಿಂತ ಭಿನ್ನವಾಗಿ ಅನೇಕ ನಾಯಕರುಗಳು ಇದ್ದಿರಬಹುದು. ಅವರೆಲ್ಲರಿಗೂ ಗಾಂಧೀಜಿಯ ಸಂತಗುಣ, ಪಾಪಪ್ರಜ್ಞೆ, ಸರಳ ವ್ಯಕ್ತಿತ್ವ ಇಲ್ಲದಿದ್ದುದರಿಂದಲೇ ಭಾರತದ ಸ್ವಾತಂತ್ರ್ಯ ಚಳುವಳಿಗೆ ನಾಯಕತ್ವ ಕೊಡಲು ಸಾಧ್ಯವಾಗಲಿಲ್ಲವೆಂದೇ ಹೇಳಬೇಕು. ಹೆಚ್ಚು ಅಪಾಯಕಾರಿಯಲ್ಲದ ಸಂತಗುಣದ ಗಾಂಧೀಜಿಯವರನ್ನು ಹೊರತುಪಡಿಸಿದರೆ ಮತ್ತ್ಯಾರೂ ನಾಯಕತ್ವವನ್ನು ವಹಿಸಿಕೊಳ್ಳಲು ಸಾಧ್ಯವಿರಲಿಲ್ಲ. ಆಕಸ್ಮಾತ್ ಬೇರೆಯವರು ಸ್ವಾತಂತ್ರ್ಯ ಚಳುವಳಿಯ ನೇತೃತ್ವವನ್ನು ವಹಿಸಿಕೊಂಡು ಚಳುವಳಿ ನಡೆಸಿದ್ದರೆ ಬಹುಶಃ ಯಶಸ್ವಿಯಾಗುತ್ತಿರಲಿಲ್ಲ. ಏಕೆಂದರೆ ಭಾರತದ ಎಲ್ಲ ಜಾತೀಯ ಜನಾಂಗಗಳು ಗಾಂಧೀಜಿಯ ಸಂತಗುಣವನ್ನು ಒಪ್ಪಿಕೊಂಡಿದ್ದರಿಂದಲೇ ಭಾರತ ಬ್ರಿಟಿಷರಿಂದ ಸ್ವಾತಂತ್ರ್ಯ ಗಳಿಸಲು ಸಾಧ್ಯವಾಯಿತು. ಜೊತೆಗೆ ಇಂಡಿಯಾದ ಸಮಸ್ತ ಜನಕೋಟಿಯನ್ನು ಮಂತ್ರಮುಗ್ಧರನ್ನಾಗಿ ಮಾಡಿಬಿಡುವ ಮೋಹಕ ಶಕ್ತಿ, ಆ ಮೋಡಿಗುಣ ಇದ್ದುದರಿಂದಲೇ ಇಂಡಿಯಾಕ್ಕೆ ಸಮರ್ಥವಾದ ನಾಯಕತ್ವವನ್ನು ಕೊಡಲು ಸಾಧ್ಯವಾಯಿತು.

'ಸ್ಫೋಟಗುಣ'ದ ಅಂಬೇಡ್ಕರ್ ಮೂಲತಃ ಸಾಮಾಜಿಕ ಸಂಕಟದ ಪ್ರತೀಕವಾಗಿ ಬಂದಿದ್ದರಿಂದಲೇ ಗಾಂಧೀಜಿಯ ಚಿಂತನೆಯ ಎಲ್ಲ ವಿಧಾನಗಳನ್ನು ಪ್ರತಿಮಾತ್ಮಕ ನೆಲೆಯಿಂದಲೇ ನೋಡುತ್ತಿದ್ದರು. ಅಲ್ಲದೆ, ಗಾಂಧೀಜಿಯನ್ನು ಕುರಿತು "ಗಾಂಧೀಜಿ ಒಬ್ಬ ಯಶಸ್ವಿ ನಯವಂಚಕ" ಎಂಬ ಅಂಬೇಡ್ಕರ್ ಅವರ ಸಂಕಟದ ಆಳವನ್ನು ನಾವು ಅರ್ಥಮಾಡಿಕೊಳ್ಳಬೇಕು. ಹಾಗೆಯೇ ಮನುಷ್ಯನನ್ನು ಮನುಷ್ಯನನ್ನಾಗಿ ನೋಡದೆ, ಪಶು, ಪಕ್ಷಿ, ಪ್ರಾಣಿಗಳಿಗಿಂತಲೂ ಕಡೆಯಾಗಿ ನೋಡುವ ಹಿಂದೂಧರ್ಮದ ಸನಾತನ ಸಂಸ್ಕೃತಿ, ಮನುಸ್ಮೃತಿಯನ್ನು ಬಹಿರಂಗವಾಗಿ ಸುಟ್ಟುಹಾಕಿದ್ದರ ಮರ್ಮವನ್ನು ತಿಳಿದುಕೊಳ್ಳಬೇಕು. ಇಂತಹ ಅವೈಜ್ಞಾನಿಕ ತತ್ತ್ವ ಸಿದ್ಧಾಂತಗಳನ್ನು ಬಿಂಬಿಸುವ ಹಿಂದೂಧರ್ಮವನ್ನು ಅದೊಂದು ಧರ್ಮವಲ್ಲ, ಅದೊಂದು 'ಅಫೀಮು' ಎಂದು ಅಂಬೇಡ್ಕರ್ ಅವರು ಕರೆದಿದ್ದರ ಔಚಿತ್ಯವನ್ನು

ಇಂಡಿಯಾದ ಚರಿತ್ರೆಯಲ್ಲಿ ಮಹಾತ್ಮ ಗಾಂಧಿ ಮತ್ತು ಬಾಬಾಸಾಹೇಬ್ ಅಂಬೇಡ್ಕರ್ ಇವರಿಬ್ಬರು ಮರೆಯಲಾಗದ ಮೈಲಿಗಲ್ಲುಗಳು. ಈ ದೈತ್ಯ ಪ್ರತಿಭೆಗಳನ್ನು ಬೇರೆ ಬೇರೆ ಕಾರಣಕ್ಕೆ ಅವರ ಅನುಯಾಯಿಗಳು ಪರ ವಿರೋಧದ ಅಲೆಗಳಲ್ಲಿ ಕುಳಿತು ತೆಪ್ಪ ನಡೆಸುತ್ತಿದ್ದಾರೆ. ಎರಡು ತೆಪ್ಪಗಳಲ್ಲಿ ಕುಳಿತಿರುವ ಜನಗಳ ಗುಂಪು ಬೇರೆ ಬೇರೆಯಾದರೂ, ಸಾಗುವ ನೀರಿನಲ್ಲಿ ಒಂದೇ ಆಗಿರುವುದನ್ನು ಮರೆಯಬಾರದು. ಗಾಂಧಿ-ಅಂಬೇಡ್ಕರ್ ಅವರು ಭಾರತೀಯರ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆಗಳ ಹಿನ್ನೆಲೆಯಲ್ಲಿ ಬಹಳ ಮುಖ್ಯವಾಗಿ ನಮ್ಮ ನಡುವೆ ಕಾಣಿಸಿಕೊಳ್ಳುತ್ತಾರೆ. ಈ ಕಾರಣಕ್ಕೆ ಇಬ್ಬರನ್ನೂ ವೈರಿಗಳಂತೆ ಚರಿತ್ರೆಯೊಳಗೆ ಕಟ್ಟಬೇಕಾಗಿಲ್ಲ ಮತ್ತು ಪ್ರತಿಬಿಂಬಿಸಬೇಕಾಗಿಲ್ಲ.

— ಸಿ. ಬಿ. ಹೊನ್ನಯ್ಯ —

ಮನಗಾಣಬೇಕಾಗಿದೆ. ಹೀಗೆ ಮುಂದುವರಿಯುತ್ತಾ ಅವರು ತಮ್ಮ ಸಾಮಾಜಿಕ ಸಂಕಟದ ಒಳಗಡೆ ಒಂದು ಪ್ರತಿಜ್ಞೆಯನ್ನೇ ದಾಖಲಿಸುತ್ತಾರೆ: ''ಹುಟ್ಟು ನನ್ನ ಕೈಯಲ್ಲಿರಲಿಲ್ಲ, ಆಕಸ್ಮಾತ್ ನಾನು ಹಿಂದೂ ಆಗಿ ಹುಟ್ಟಿದ್ದೇನೆ. ಸಾಯುವುದು ನನ್ನ ಕೈಯಲ್ಲಿದೆ; ನಾನು ಹಿಂದೂ ಆಗಿ ಮಾತ್ರ ಸಾಯಲಾರೆ'' ಎಂಬ ಮರಣ ಸಂಕಟದ ಮಾತುಗಳನ್ನು ಆಡುತ್ತಾರೆ. ಹಿಂದೂ ಧರ್ಮದಿಂದ ಬೇಸತ್ತ ಅಂಬೇಡ್ಕರ್ ಮನುಷ್ಯನನ್ನು ಮೇಲು-ಕೀಳು ಎಂದು ನೋಡದೆ ಸಮಾನವಾಗಿ ನೋಡುವ ಬುದ್ಧನ ಬೌದ್ಧಧರ್ಮವನ್ನು ಸ್ವೀಕರಿಸಿಬಿಡುತ್ತಾರೆ. ಇದರ ಔಚಿತ್ಯವನ್ನು ಕುರಿತು ಮಾತನಾಡುವ ಟೀಕಾಕಾರರು ಸಾಮಾಜಿಕ ಸಂಕಟದ ತಳಮಳದೊಳಗೆ ನರಳುತ್ತಿರುವ ಜೀವಿಯ ಸಂಕಟದ ಸ್ವರೂಪ, ಅದರ ದಾಹ ಅವರಿಗೆ ಅರ್ಥವಾಗಿಲ್ಲವೆಂದೇ ತಿಳಿಸಬೇಕಾಗಿದೆ.

ಅಂಬೇಡ್ಕರ್ 'ಸ್ಫೋಟಗುಣ'ದ ಸ್ವರೂಪವು ಸಿಟ್ಟು, ಆಕ್ರೋಶ, ಆವೇಶಗಳಿಂದಲೇ ಒಂದೇ ಸಾರಿಗೆ ನೆಲವನ್ನೆಲ್ಲ ನುಚ್ಚುನೂರು ಮಾಡಿಬಿಡುವ ಶತಶತಮಾನಗಳ ಆಕ್ರಂದನದ ಬೇಗೆಯು ಬೇಯುತ್ತಿದ್ದುದರ ಅಸ್ಪೃಶ್ಯತೆಯ ಕರಾಳಮುಖವನ್ನು ಅರ್ಥಮಾಡಿಕೊಳ್ಳಬೇಕು. ಇಡೀ ಇಂಡಿಯಾದ ಜನಸ್ತೋಮವು ಗಾಂಧೀಜಿಯ ತೆಕ್ಕೆಯೊಳಗೆ ಬಂಧಿಯಾಗಿದ್ದ ಸಂದರ್ಭದಲ್ಲಿ ಅಂಬೇಡ್ಕರ್ ಒಬ್ಬರು ಮಾತ್ರ ಗಾಂಧೀಜಿಯವರನ್ನು ಬಹಿರಂಗವಾಗಿಯೇ ವಿರೋಧಿಸುವುದೆಂದರೆ ಅಷ್ಟು ಸುಲಭವಲ್ಲ. ಗಂಡೆದೆ ಮೆಟ್ಟಿದ ಅಸ್ಪೃಶ್ಯತೆಯ ಈ ಸಂಕಟದ ಮುಂದೆ ಗಾಂಧೀಜಿಯಲ್ಲ, ಮತ್ತ್ಯಾರಾದರೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅಂಬೇಡ್ಕರ್ ಅವರಿಗೆ ಗಾಂಧೀಜಿಯವರ 'ರಾಜಕೀಯ ಸ್ವಾತಂತ್ರ್ಯ'ಕ್ಕಿಂತ ಸಾಮಾಜಿಕ ಸ್ವಾತಂತ್ರ್ಯದ ತುಡಿತವೇ ಅಗಾಧವಾಗಿತ್ತು. ಏಕೆಂದರೆ ಈ ರಾಜಕೀಯ ಸ್ವಾತಂತ್ರ್ಯ ಅಥವಾ ಈ ಅಧಿಕಾರವುಳ್ಳವರಿಂದ ಉಳ್ಳವರು ತಡೆದುಕೊಳ್ಳುವ ಅಧಿಕಾರದ ಹಸ್ತಾಂತರವೇ ಹೊರತು ಇದರಿಂದ ದಲಿತರಿಗೆ, ಕೆಳವರ್ಗದವರಿಗೆ, ಹಿಂದುಳಿದವರಿಗೆ ದೊರೆಯುವುದಾದರೂ ಏನು? ಎಂಬ ಸಾವಿರಾರು ಪ್ರಶ್ನೆಗಳು ಅಂಬೇಡ್ಕರ್ ಅವರನ್ನು ಕಾಡಿವೆ ಮತ್ತು ಕಲಕಿವೆ.

ಎರಡನೆ ದುಂಡು ಮೇಜಿನ ಪರಿಷತ್ತಿನ ಸಂದರ್ಭದಲ್ಲಿ ಗಾಂಧೀಜಿ - ಅಂಬೇಡ್ಕರ್ ಇಬ್ಬರ ಮಧ್ಯೆ ನಡೆದ ಐತಿಹಾಸಿಕ ಘರ್ಷಣೆಯಲ್ಲಿ ಗಾಂಧೀಜಿಯ ತಾರತಮ್ಯದ ಧೋರಣೆಯನ್ನು ಕುರಿತು ಅಂಬೇಡ್ಕರ್ ತೀವ್ರವಾಗಿ ವಿರೋಧಿಸುತ್ತಾರೆ. ತನ್ನ ಜನಾಂಗದ ಪ್ರಶ್ನೆ ಬಂದಾಗ ಒಂದು ಕಡೆ ಅಂಬೇಡ್ಕರ್ ಹೀಗೆ ಹೇಳುತ್ತಾರೆ: ''ನನ್ನ ಜನಾಂಗ ಮತ್ತು ಈ ದೇಶದ ಆಯ್ಕೆಯ ಪ್ರಶ್ನೆ ಬಂದಾಗ, ನಾನು ನನ್ನ ಜನಾಂಗವನ್ನು ಆಯ್ಕೆಮಾಡಿಕೊಳ್ಳುತ್ತೇನೆ. ನಾನು ಮತ್ತು ಈ ದೇಶದ ಆಯ್ಕೆಯ ಪ್ರಶ್ನೆ ಬಂದಾಗ ನಾನು ಈ ದೇಶವನ್ನು ಆಯ್ಕೆ ಮಾಡಿಕೊಳ್ಳುತ್ತೇನೆ.'' ಇಂತಹ ನಿಲುವು ಅಂಬೇಡ್ಕರ್ ಅವರಿಗೆ ಇದ್ದುದ್ದರಿಂದಲೇ ಗಾಂಧೀಜಿಯವರಿಗೆ ತನ್ನ ಜನಾಂಗದ ಉದ್ಧಾರಕ್ಕಾಗಿ ''ಪ್ರತ್ಯೇಕ ಮತದಾನದ ಹಕ್ಕ''ನ್ನು ಪ್ರತಿಪಾದಿಸುತ್ತಾರೆ. ಈ ನಿಲುವನ್ನು ಗಾಂಧೀಜಿಯವರು ಸಾರಾಸಗಟವಾಗಿ ನಿರಾಕರಿಸುತ್ತಾರೆ. ಅಲ್ಲದೆ ಬ್ರಿಟಿಷರ ಈ 'ಕೋಮು ತೀರ್ಪಿ'ನ ವಿರುದ್ಧ ಉಪವಾಸ ಸತ್ಯಾಗ್ರಹವನ್ನೇ ಹೂಡಲು ಕರೆಕೊಡುತ್ತಾರೆ. ''ಹಿಂದೂ ಧರ್ಮವನ್ನು ಒಡೆಯಲು ನಾನು ಬಿಡುವುದಿಲ್ಲ, ನನ್ನ ಸಮಾಧಿಯ ಮೇಲೆ ದಲಿತರನ್ನು ಪ್ರತ್ಯೇಕಗೊಳಿಸಿ'' ಎಂದು ನೇರವಾದ ಘರ್ಷಣೆಗಿಳಿಯುತ್ತಾರೆ. ಇಂತಹ ಸಂದರ್ಭದಲ್ಲಿ ಅಂಬೇಡ್ಕರ್ ಅಷ್ಟೇ ಸಿಟ್ಟು ಆಕ್ರೋಶದಿಂದ ''ನನ್ನ ಜನತೆಯ ವಿಮೋಚನೆಗೋಸ್ಕರ ಈ 'ಪ್ರತ್ಯೇಕ ಮತದಾನದ ಹಕ್ಕು' ಬೇಕೇ ಬೇಕು'' ಎಂದು ಬಿಗಿಪಟ್ಟು ಹಿಡಿಯುತ್ತಾರೆ. ಇಂತಹ ಸಂದರ್ಭದಲ್ಲಿ ಅಂಬೇಡ್ಕರ್ ಅವರನ್ನು ಕೊಲೆ ಮಾಡುವ ನೂರಾರು ದೂರವಾಣಿ ಕರೆಗಳು, ರಕ್ತದಿಂದ ಬರೆದ ಪತ್ರಗಳು ಅಂಬೇಡ್ಕರವರ ಮನೆಯನ್ನು ತಲುಪುತ್ತವೆ. ಆದರೆ 'ಸ್ಫೋಟ ಗುಣ'ದ ಅಸ್ಪೃಶ್ಯತೆಯ ನೋವು ಆ ಯಾವ ಬೆದರಿಕೆಯ ಕರೆಗಳನ್ನೂ ಲೆಕ್ಕಿಸದೆ ಮೆಟ್ಟಿನಿಲ್ಲುತ್ತದೆ. ಈ ರೀತಿಯ ಇಬ್ಬರ ಘರ್ಷಣೆ ಕೇವಲ ತಾತ್ವಿಕ ಭಿನ್ನಾಭಿಪ್ರಾಯಗಳೇ ಹೊರತು ಇದರಲ್ಲಿ ಗಾಂಧೀಜಿಯವರನ್ನು ವೈರಿಯಂತೆ ಕಾಣುವುದಿಲ್ಲ. ಹಾಗೆಯೇ ಅಂಬೇಡ್ಕರ್ ಅವರನ್ನು ಬ್ರಿಟಿಷರ ಏಜೆಂಟರಂತೆ ನಡೆದುಕೊಂಡರೆಂದು ಅವರನ್ನು ಗಾಂಧೀಜಿಯ ವೈರಿಯೆಂದು ನಾವು



ನೋಡಬೇಕಾಗಿಲ್ಲ. ಈ ನೆಲೆಗಳು ಇವರಿಬ್ಬರ ಆಯ್ಕೆಯ ವಿಚಾರಗಳಾಗಿದ್ದವು ಅಷ್ಟೆ.

ಪಾಪಪ್ರಜ್ಞೆಯ ಗಾಂಧೀಜಿ, ಜಾಗೃತಪ್ರಜ್ಞೆಯ ಅಂಬೇಡ್ಕರ್ ಇವರಿಬ್ಬರ ಮನಸ್ಸಿನ ಮುಖಾಮುಖಿಯನ್ನು ಇಂದು ಇಂಡಿಯಾ ತನಗೆ ತಾನೇ ಕಂಡುಕೊಳ್ಳಬೇಕಾಗಿದೆ, ಮತ್ತು ಅದನ್ನು ಕಟ್ಟಿಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಗಾಂಧೀಜಿಯವರು ಇಂಡಿಯಾವನ್ನು ನೋಡುವ ಸುಧಾರಣಾವಾದಿ ನೆಲೆಗಳು ಮತ್ತು ಅಂಬೇಡ್ಕರ್ ಅವರು ಇಂಡಿಯಾವನ್ನು ನೋಡುವ ಕ್ರಾಂತಿಕಾರಿ ಬದಲಾವಣೆಯ ಮಾನವೀಯತೆಯ ನೆಲೆಗಳು ಇವರಿಬ್ಬರಿಗೆ ತನಗೆ ತಾನೇ ವಿರೋಧಗಳು; ಭಿನ್ನತೆಗಳು ಕಂಡುಬರಬಹುದು.

ಗಾಂಧೀಜಿಯ ಸ್ಪರ್ಶ ಮೂಲದ ಮನಸ್ಸು ಈ ದೇಶದ ಎಲ್ಲ ಸವಲತ್ತುಗಳನ್ನು ಪಡೆದು ಅಂಬೇಡ್ಕರ್ ಅವರನ್ನು, ಅವರ ಜನಾಂಗದವರನ್ನು ಕಂಡು ಆ ಸಂತಗುಣದ ಮನಸ್ಸು ಮರುಗಿದ್ದರಿಂದಲೇ ಪಾಪಪ್ರಜ್ಞೆ ಕಾಡಿದೆ. ಈ ಕಾಡುವಿಕೆಯಿಂದಲೇ ಗಾಂಧೀಜಿಯವರು ತಾನು ಮುಂದಿನ ಜನ್ಮದಲ್ಲಿ ಅಸ್ಪೃಶ್ಯನಾಗಿ ಹುಟ್ಟಬೇಕೆನ್ನುವ ಬಯಕೆಯನ್ನು ವ್ಯಕ್ತಪಡಿಸುತ್ತಾರೆ. ಹಾಗೆಯೇ ಅಂಬೇಡ್ಕರ್ ಜೊತೆಯಲ್ಲಿ ಮುಖಾಮುಖಿಯಾಗಿ ಮಾತನಾಡುವ ಸಂದರ್ಭದಲ್ಲಿ ಹೀಗೆ ಹೇಳುತ್ತಾರೆ: ''ನಾನು ಹುಟ್ಟಿನಿಂದ ಏನೇ ಇದ್ದರೂ ದತ್ತು ಪುತ್ರನಾಗಿ ಅಸ್ಪೃಶ್ಯನೇ ಆಗಿರುತ್ತೇನೆ'' ಎನ್ನುವುದು, ಇದರ ಜೊತೆಗೆ 'ಹರಿಜನ ಸೇವಾ ಸಂಘ'ವನ್ನು ಸ್ಥಾಪನೆ ಮಾಡಿ ಸವರ್ಣೀಯರೆಲ್ಲರೂ ಪಾಪಪ್ರಜ್ಞೆಯಿಂದ ಕೆಲಸ ಮಾಡಲು ಅನುವು ಮಾಡಿಕೊಡುವುದು ಮತ್ತು ಶೌಚಾಲಯವನ್ನು ತೊಳೆದು ಸ್ವಚ್ಛ ಮಾಡುವುದು, ಈ ರೀತಿಯ ಪಾಪಪ್ರಜ್ಞೆಯ ಪ್ರತೀಕವಾಗಿ ಕಂಡುಬಂದ ಗಾಂಧೀಜಿ ಈ ದೇಶದ ದಾರಿದ್ರ್ಯ ಮತ್ತು ಬಡತನವನ್ನು ನೋಡಿ ಸೂಟುಧಾರಿಯಾಗಿದ್ದ ತನ್ನ ಉಡುಪುಗಳನ್ನು ಬಿಚ್ಚಿ ಅರಬೆತ್ತಲೆ ಫಕೀರನಾಗಿ ಮೂಡಿಬಂದಿದ್ದಾರೆ. ಅಂದರೆ ಇಲ್ಲಿ ಬಟ್ಟೆ, ಊಟ, ಸವಲತ್ತಿರುವ ಗಾಂಧೀಜಿ ಉಟ್ಟಬಟ್ಟೆಯನ್ನು ಕಳಚುವ ಮೂಲಕ ಮಹಾತ್ಮರಾಗುವ ದಿಕ್ಕನ್ನು ಕಂಡುಕೊಂಡರು. ಇದು ಈ ದೇಶವನ್ನು ಗಾಂಧೀಜಿ ಅರ್ಥಮಾಡಿಕೊಂಡಿದ್ದರ ಪ್ರತಿಫಲವೇ ಆಗಿದೆ.

ಇನ್ನೊಂದು ಕಡೆ ಜಾಗೃತ ಪ್ರಜ್ಞೆಯ ಅಂಬೇಡ್ಕರ್ ಶತಶತಮಾನಗಳಿಂದ ತುಳಿತಕ್ಕೆ, ಅಸ್ಪೃಶ್ಯತೆಯ ಅವಮಾನಕ್ಕೆ ಗುರಿಯಾಗಿ, ನಾಯಿ, ನರಿಗಳಿಗಿಂತಲೂ ತುಚ್ಛವಾಗಿ ಕಂಡ ಈ ದೇಶ ಮತ್ತು ಅದರ ಧರ್ಮವನ್ನು ಗುಮಾನಿಯಿಂದಲೇ ನೋಡುತ್ತಾ ಯಥಾಸ್ಥಿತಿಯ ಸುಧಾರಣಾವಾದಿ ನೆಲೆಗಿಂತ ಸಂಪೂರ್ಣ ಬದಲಾವಣೆಯ ಮಾನವೀಯತೆಯತ್ತ ತಿರುಗಿಸುವ ಪ್ರಯತ್ನವಾಗಿ ಅಂಬೇಡ್ಕರ್ ಮೂಡಿಬರುತ್ತಾರೆ. ಇಂತಹ ಹಲವಾರು ಕಾರಣಗಳಿಂದಲೇ ಅಂಬೇಡ್ಕರ್ ಬಹಳ ನೋವಿನಿಂದ ''ನನಗೆ ಹೇಳಿಕೊಳ್ಳಲು ತಾಯ್ನಾಡು ಎಂಬುದಿಲ್ಲ. ನನ್ನ ತಾಯ್ನಾಡಾಗಿದ್ದರೆ, ನನ್ನನ್ನು, ನನ್ನ ಜನಾಂಗವನ್ನು ಈ ದೇಶ ಮತ್ತು ಧರ್ಮ ನಾಯಿ-ನರಿ-ಕತ್ತೆಗಳಂತೆ ಏಕೆ ಕಾಣುತ್ತಿತ್ತು? ಮುಟ್ಟಿಸಿಕೊಳ್ಳಲು ಗಜದೂರ ಹೌಹಾರುತ್ತಿತ್ತು? ಇಂತಹ ದೇಶ, ಧರ್ಮ ಹೇಗೆ ನನ್ನ ದೇಶ, ಧರ್ಮವಾಗಲು ಸಾಧ್ಯ''ವೆಂಬ ಚಾರಿತ್ರಿಕ ಸತ್ಯವನ್ನು ನಿಷ್ಠುರವಾಗಿಯೇ ನುಡಿಯುತ್ತಾರೆ. ಹೊಟ್ಟೆಗೆ ಹಿಟ್ಟಿಲ್ಲದ, ಬಟ್ಟೆಯಿಲ್ಲದ ಅಸ್ಪೃಶ್ಯತೆಯ ಮೂಲದಿಂದ ಬಂದ ಅಂಬೇಡ್ಕರ್ ಸಹಜವಾಗಿಯೇ ಜಾಗೃತಪ್ರಜ್ಞೆಯ ಪ್ರತೀಕವಾಗಿ ಬಟ್ಟೆಯನ್ನು ಧರಿಸುವ ಮೂಲಕ ಸೂಟುಧಾರಿಯಾಗಿ ಕಂಡುಬರುತ್ತಾರೆ. ಅಂದರೆ ಇಲ್ಲಿ ಹೊಟ್ಟೆ, ಬಟ್ಟೆ ಎಲ್ಲ ಸವಲತ್ತುಗಳನ್ನು ಅನುಭವಿಸಿದ ಗಾಂಧೀಜಿಯವರು ಉಟ್ಟಬಟ್ಟೆಯನ್ನು ಕಳಚಿ ಅರಬೆತ್ತಲೆ ಫಕೀರರಾದರೆ, ಹೊಟ್ಟೆ ಬಟ್ಟೆಗೆ ಗತಿಯಿಲ್ಲದ, ಎಲ್ಲ ಸವಲತ್ತುಗಳಿಂದಲೂ ವಂಚಿತರಾದ ಮೂಲದಿಂದ ಬಂದ ಅಂಬೇಡ್ಕರ್ ಸಹಜವಾಗಿ ಬಟ್ಟೆಯನ್ನು ಧರಿಸುವ ಮೂಲಕ ಸೂಟುಧಾರಿಯಾಗಿ ಕಂಗೊಳಿಸುತ್ತಾರೆ. ಈ ರೀತಿಯ ಇವರಿಬ್ಬರ ಮುಖಾಮುಖಿಯ ಚರಿತ್ರೆಯೇ ಇಂಡಿಯಾದ ನಿಜವಾದ ಚರಿತ್ರೆ ಆಗಬೇಕಾಗಿದೆ.

ಪಿ. ಬಿ. ಹೊನ್ನಯ್ಯ
ಅಧ್ಯಾಪಕರು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ
(ಬೆಂಗಳೂರು ವಿಶ್ವ ವಿದ್ಯಾಲಯ) ತುಮಕೂರು - ೩

*(ಸೂಫಿ ಸಂತರೊಬ್ಬರ ಗದ್ದುಗೆ. ಚೌಕುಳಿ ವಸ್ತ್ರದಿಂದ ಅಲಂಕರಿಸಿದ್ದಾರೆ. ಧೂಪ ದೀಪಗಳು ಬೆಳಗುತ್ತಿವೆ.)*

ಮೇಳ

*ಹುಸೇನಿ ಸಾಹೇಬರ ಬದಿಯಲಿ ಹೋಗಿ*
*ಹಸಿರಾಗಿ ನಾವು ಬಂದೇವು ॥ ಪಲ್ಲವಿ ॥*
*ಮಸೂದಿಯೊಳಗಿನ ಮೂಲವ ತಿಳಿದು*
*ದೀನ ದಯಾಳನ ನೆನೆದೇವು*
*ಲಾಡ ಬಂಧನದ ಲಾಡಿಯ ಕಟ್ಟಿ*
*ಓಡ್ಯಾಡೋ ಪಂಜೆಯ ಹಿಡಿದೇವೊ*
*ಸೂರ್ಯಚಂದ್ರರು ಎಂದಿಗೆ ಇಲ್ಲಾ*
*ಅಂದೊಬ್ಬ ಪೀರನ ಕಂಡೇವೊ ॥ ೧ ॥*

*ಹಸಿರು ಹಳದಿ ಬಿಳಿದು ಕೆಂಪು*
*ಕುಶಲದ ಚೌಕಿಯ ಕಂಡೇವೋ*
*ಮುಸಲರ ಗೂಡ ಫಕೀರರಾಗಿ*
*ಸವಿಸವಿ ಪ್ರಸಾದ ಉಂಡೇವೊ ॥ ೨ ॥*

*ಕತಾಲವೆಂಬೋ ಕತ್ತಲೆಯೊಳಗೆ*
*ಸುತ್ತೆಲ್ಲ ಜ್ಯೋತಿಯ ಕಂಡೇವೊ*
*ಉತ್ತರ ಪಶ್ಚಿಮ ನವಬಾಜೆ ವಾದ್ಯವ*
*ಅದರ ಭ್ರಮ ನಾವುಗೊಂಡೇವೊ ॥ ೩ ॥*

*ಖಾಲಿಯೆಂಬುವ ಡೋಲಿಯ ಮುರಿದು*
*ಒಳಗಿನ ಮೂಲವ ತಿಳಿದೇವೊ*
*ಕಲಬುರಗಿಯ ಸಿದ್ಧೇಶ್ವರನ*
*ಬಾಲರಾಗಿ ಪಡಕೊಂಡೇವೊ ॥ ೪ ॥**

*(ಕೂಡಿದವರಲ್ಲಿ ಹಿಂದೂ, ಮುಸ್ಲಿಮರೆಲ್ಲ ಸೇರಿದ್ದಾರೆ.)*

**೧ನೆಯವ** : ಬಂದರು, ಬಂದರು ಸಂತಗುರುಗಳು.

**ಎಲ್ಲರೂ** : ಸಂತಗುರು ಟಿಖಾಯಿತ್ ಖಾನ ಸಾಹೇಬಕೂ ಜಯ ಹೋ! ಸಂತಗುರು ಟಿಖಾಯಿತ್‌ಖಾನ ಸಾಹೇಬ ಆಗಯೇ, ಆಗಯೇ.

**ಟಿಖಾಯತ್ ಖಾನ**: ಸಬ್‌ಕೊ ಶುಭ ಹೊ

**ಎಲ್ಲರೂ** : ಸಂತ ಗುರೂಂಕೊ ಸಲಾಮ್ ಸಲಾಮ್

**ಟಿಖಾಯತ ಖಾನ** : ಬೈಠೊ, ಸಬ್ ಬೈಠೊ

*(ಟಿಖಾಯತ್ ಖಾನ ಗದ್ದುಗೆಗೆ ದುವಾ ಹಾಕುವರು. ಎಲ್ಲರೂ ಹಾಗೆ ಮಾಡುವರು. ಎಲ್ಲರೂ ಅವರವರ ಸ್ಥಾನದಲ್ಲಿ ತಿರುಗಿಬಂದು ಕೂಡ್ರುವರು)*

**ಟಿಖಾಯತ ಖಾನ** : ಸಭೀ ಅಚ್ಛೇ ಹೈನಾ ?

**೨ನೆಯವ** : ಸಂತ ಸಾಹೇಬರ ಅನುಗ್ರಹದಿಂದ ನಾವೆಲ್ಲ ಸುಖವಾಗಿದ್ದೇವೆ.

**ಟಿಖಾಯತ ಖಾನ** : ಎಲ್ಲಾ ಅಲ್ಲಾಹುನ ಅನುಗ್ರಹ. ಇರಲಿ. ಇಷ್ಟೆಲ್ಲ ಜನ ಸೇರಿದ್ದು ಯಾಕೆ ಅಂತ ತಿಳೀಲಿಲ್ವಲ್ಲ? ಭಜನೆ ಮಾಡತೀರೇನು? ಹೊಡಿರಲಾ.

**೩ನೆಯವ** : ಭಜನೆಗಾಗಿ ಅಲ್ಲ ಗುರು. ತಮ್ಮ ಬಗ್ಗೆ ಒಂದು ದೊಡ್ಡ ಅಪವಾದ ಬಂದಿದೆ.

**ಟಿಖಾಯತ ಖಾನ** : ಯಾರಿಂದ ?

**೪ನೆಯವ** : ಎಲ್ಲರಿಂದ.

**ಟಿಖಾಯತ ಖಾನ** : ಅರೆ ಅಲ್ಲಾ, ಏನಪಾ ಅದು, ಏನು ಬಾನಗಡಿ ?

**೨ನೆಯವ** : ಅದರ ತೀರ್ಮಾನ ಆಗಬೇಕೂ ಅಂತ.....

**೩ನೆಯವ** : ಇಷ್ಟು ಜನ ಸೇರಿದ್ದೇವೆ.

**ಟಿಖಾಯತ ಖಾನ** : ಏನದು ಸಮಸ್ಯೆ ? ಅದೇ ಹಳೆಯ ಸಮಸ್ಯೆ ತಾನೆ ? ನಾನು ಶಿವಭಕ್ತರ ಬಳಿ ಹೋಗತೇನೆ. ವಿಷ್ಣು ಭಕ್ತರ ಮನೆಗೆ ಹೋಗತೇನೆ....

**೪ನೆಯವ** : ಮಡಿವಾಳರ ಕೇರಿ, ಜೇಡರ ಕೇರಿ, ಅಸ್ಪೃಶ್ಯರ ಕೇರಿಗೂ ಹೋಗತೀರಿ.

*(ಮೇಲಿನ ಹಾಡು ಸೂಫಿ ಕವಿ ಸಿದ್ಧಲಿಂಗ ಕವಿಯ ರಚನೆ ಎಂದು ಡಾ॥ ರಹಮತ್ ತರೀಕೆರೆ ಹೇಳುತ್ತಾರೆ. ಅವರ 'ಕರ್ನಾಟಕ ಸೂಫಿಗಳು' ೧೯೯೮ರ ಕೃತಿಯ ೬೩ನೇ ಪುಟ)*

**೫ನೆಯವ** : ಹೋಗತೀರಿ; ಅವರಿಗೆ ಉಪಕಾರ ಮಾಡತೀರಿ. ಆದರೂ ಅವರನ್ನು ಮುಸ್ಲಿಮರನ್ನಾಗಿ ಮಾಡೂದಿಲ್ಲ. ಸ್ವತಃ ನೀವು ಸರಿಯಾಗಿ ನಮಾಜು ಮಾಡೂದಿಲ್ಲ.

**೧ನೆಯವ** : ಹೀಗೆ ನೀವು ಮುಸ್ಲಿಮ್ ಧರ್ಮವನ್ನು ಅಶುದ್ಧಗೊಳಿಸುತ್ತೀರಿ.....

**೨ನೆಯವ** : ಎಂದು ನಮ್ಮ ಮುಲ್ಲಾ ಸಾಹೇಬರು ಅಬ್ಬರಿಸುತ್ತಾರೆ.

**ಟಿಖಾಯತ ಖಾನ** : ಅದರಿಂದಾದ ತಪ್ಪೇನು ? *(ಆಕಾಶ ನೋಡಿ ನಗೆಯಾಡುತ್ತಾರೆ.)*

**೫ನೆಯವ** : ಅದು ಕುರಾನಿಗೆ ವಿರುದ್ಧವಾದುದು. ಅಲ್ಲಾಹುಗೆ ಪ್ರಿಯವಾದ ಕೆಲಸವಲ್ಲವಂತೆ.

**ಟಿಖಾಯತ ಖಾನ** : ಇಷ್ಟೇ ಅಲ್ಲಾ? ನಾನು ಮುಸ್ಲಿಮರ ಮನೆಗೆ ಹೋದಂತೆ ಅಲ್ಲಿಗೂ ಹೋಗತೇನೆ.

**೩ನೆಯವ** : ಇನ್ನೂ ಉಂಟು ಸಾಹೇಬ್.

**ಟಿಖಾಯತ ಖಾನ** : ಏನು ಇನ್ನೂ ?

**೪ನೆಯವ** : ನೀವು ನಿಮ್ಮವರ ಮನೆಗಳಿಗಷ್ಟೇ ಹೋಗದೆ ಇತರೆ ಜಾತಿಗಳವರ ಮನೆಗೂ..

**೩ನೆಯವ** : ಅವರ ಸುಖ ದುಃಖ ಕೇಳಿ....

**೪ನೆಯವ** : ಕಷ್ಟ ಪರಿಹರಿಸಿತಿರಂತೆ.

**ಟಿಖಾಯತ ಖಾನ** : *(ನಗುತ್ತ)* ಇದರಲ್ಲಿ ತಪ್ಪೇನು ?

**೩ನೆಯವ** : ಅದರಿಂದ ಹಿಂದೂಗಳ ನಡವಳಿಕೆಯೆಲ್ಲ ಕೆಟ್ಟು ಹೋಗತದಂತೆ.

**ಟಿಖಾಯತ ಖಾನ** : ಹೇಗದು ?

**೧ನೆಯವ** : ಹೇಗೆಂದರೆ ಅವರೆಲ್ಲ ನಿಮ್ಮ ವಶ ಆಗತಾರಂತೆ, ಭಕ್ತರಾಗತಾರಂತೆ.

**೪ನೆಯವ** : ನೀವು ವಿಧರ್ಮೀಯರಂತೆ.



# ದಯಕನ

**೩ನೆಯವ** : ನಿಮಗೆ ನೀತಿ ನೇಮ ಇಲ್ಲವಂತೆ.

**೪ನೆಯವ** : ಇದರಿಂದ ಹಿಂದೂ ಜನರನ್ನು ದೇವರು ಕೈಬಿಡುತಾನಂತೆ.

**೫ನೆಯವ** : ಹಾಗೇ ಮುಸ್ಲಿಮ್ ದೇವರು ಕೈಹಿಡಿಯೂದಿಲ್ಲವಂತೆ.

**ಟಿಖಾಯತ ಖಾನ** : ಯಾರು ಹೇಳತಾರೆ ಹಾಗೆ ?

**೪ನೆಯವ** : ನಮ್ಮ ಗುರುಗಳು ಹೇಳುತ್ತಾರೆ.

**ಟಿಖಾಯತ ಖಾನ** : ಇರಲಿ, ಇರಲಿ *(ನಕ್ಕು)* ನೀವು ಯಾಕೆ ತಲೆ ಕೆಡಿಸಿಕೋತೀರಿ ? ಅವನ್ನೆಲ್ಲ ಈ ಕಿವಿಯಿಂದ ಕೇಳಿ ಆ ಕಿವಿಯಿಂದ ಬಿಟ್ಟುಬಿಡಬೇಕು.

**೧ನೆಯವ** : ಅಷ್ಟು ಸರಳವಲ್ಲ ಖಾನ್ ಸಾಹೇಬ್; ಊರಿನಲ್ಲಿ ದೊಡ್ಡ ದಂಗೆ ಆಗಲಿದೆ.

**ಎಲ್ಲರೂ** : ಹೌದು, ಹೌದು ಸಾಹೇಬ್. ದೊಡ್ಡ ದಂಗೆ ಆಗಲಿದೆ. ಹಿಂದೂ ಮುಸ್ಲಿಮ್ ಎಂದು ಎರಡು ಗುಂಪಾಗಿದ್ದಾರೆ. ಒಂದು ಗುಂಪಿನವರು ಮತ್ತೊಂದು ಗುಂಪಿನವರನ್ನು ಊರಿಂದ ಓಡಿಸಬೇಕೆಂದುಕೊಂಡಿದ್ದಾರೆ.

**೧ನೆಯವ** : ಹಿಂದುಗಳು ಕಾಫಿರರು. ಅವರನ್ನು ಮುಸ್ಲಿಮ್ ಧರ್ಮಕ್ಕೆ ಧರ್ಮಾಂತರಿಸಬೇಕು, ಇಲ್ಲವೇ ಕೊಲ್ಲಬೇಕು ಎಂದು ನಮ್ಮ ಸರದಾರ ಕಾಸಿಂ ಸಾಬರು ಮನೆ ಮನೆಗೆ ಬಂದು ಹೇಳತಿದಾರೆ.

**೨ನೆಯವ** : ಅವರ ಸಂಗಡ ನಮ್ಮ ಮುಲ್ಲಾ ಸಾಹೇಬರು ಬರುತ್ತಿದ್ದಾರೆ.

**೪ನೆಯವ** : ಮುಸ್ಲಿಮರು ಮ್ಲೇಚ್ಛರು. ಜಾತಿ ಇಲ್ಲದವರು. ನೀಚರು, ರಕ್ತ ಪಿಪಾಸುಗಳು. ಅವರನ್ನು ಊರಿಂದ ಓಡಿಸಬೇಕು, ಇಲ್ಲವೇ ಕೊಲ್ಲಬೇಕು.

**೫ನೆಯವ** : ಅಂದರೆ ಸಂತ ಸಾಹೇಬರೂ ಇಲ್ಲಿಂದ ಓಡಿಹೋಗತಾರೆ ಅಂತಿದಾರೆ ನಮ್ಮ ಮತದವರು.

**ಟಿಖಾಯತ ಖಾನ** : ಹೌದೇನು ! ಸಮಸ್ಯೆಯೇನೊ ಗಂಭೀರವಾದುದೇ. ಆದರೆ ನೀವಿದೀರಲ್ಲ, ನೀವು ಏನು ಹೇಳತೀರಾ ? ಏನು ಮಾಡತೀರಿ ?

**ಎಲ್ಲರೂ** : ನಮಗೆ ಏನು ಮಾಡಬೇಕೆಂಬುದೇ ತಿಳಿಯೊದಿಲ್ಲ. ಅವರು ಹೇಳಿದ ಹಾಗೆ ನಾವು ನಮ್ಮ ಧರ್ಮಕ್ಕೆ ಹೊರತಾದುದನ್ನು ಮಾಡತಿದ್ದೇವೊ, ಅನ್ಯಾಯ ಮಾಡುತಿದ್ದೇವೊ ಎಂಬುದೇ ತಿಳೀತಾ ಇಲ್ಲ. ಪರ ಧರ್ಮ ಭಯಾನಕವಾದುದೆಂದು ಅವರು ಹೇಳತಿದ್ದಾರೆ. ಅದು ಹೌದೇನೊ ಅನ್ನಿಸಿ, ದೇವರು ನಮ್ಮನ್ನು ಶಪಿಸತಾನೊ, ನರಕ ಕೊಡತಾನೊ ಎಂದು ಭಯವಾಗತದೆ. ನಮಗೆ ಏನು ಮಾಡಬೇಕೆಂದೇ ತಿಳೀತಾಯಿಲ್ಲ. ನಾವು ಇಲ್ಲಿ ತನಕ ಎಲ್ಲಾ ದೇವರೂ ನಮ್ಮದೇ ಎಲ್ಲಾ ದೇವರು ಒಂದೇ

ಎಂದು ತಿಳೀತಾ ಬಂದಿದೇವೆ. ಎಂತಲೇ ಗುರು ದರುಶನಕ್ಕೆ ಬಂದಿದೇವೆ.

*(ಟಿಖಾಯತ ಖಾನ ಗಂಭೀರಾಗುತ್ತಾರೆ. ಗದ್ದಿಗೆಗೆ ದುವಾ ಹಾಕುತ್ತಾರೆ. ತಮ್ಮ ಸ್ಥಾನದಲ್ಲಿ ಬಂದು ಕೂಡ್ರುತ್ತಾರೆ.)*

**ಎಲ್ಲರೂ** : ಈಗ ನಾವೇನು ಮಾಡಬೇಕು ? ನಿಮ್ಮ ದರುಶನ ನಮಗೆ ಬೇಕು.

**ಟಿಖಾಯತ ಖಾನ** : ಅಚ್ಛಾ. *(ಟಿಖಾಯತ ಖಾನ ಗಂಭೀರವಾಗುತ್ತಾರೆ. ಹಾಗೇ ಗುಡಗುಡಿ ಸೇದುತ್ತಾರೆ. ದೃಶ್ಯ ಬದಲಾಗುತ್ತದೆ.)*

ದೃಶ್ಯ - ೨

ಹಾಡು

*ಇದೋ ಕೇಳಿ ನಾವು ಹೇಳುವಂತ*
*ವಿಸ್ಮಯದ ಒಂದು ಕತೆಯ*
*ಸೂಫಿ ಸಂತ ಟಿಖಾಯತ ಖಾನರು*
*ಬರೆದಂಥ ಸನುಮತಿಯ*
*ಕತ್ತಲೆಂಬ ಕತ್ತಲೊಳಗೆ ಹೆಪ್ಪು*
*ಗಟ್ಟಿದಂಥ ಕೊಳಕ*
*ಮೆಟ್ಟಿಮೀರಿ ಹೊಸಬದುಕು ತುಂಬಿ*
*ತುಳುಕುವಂಥ ಬೆಳಕ*
*ತುಂಬಿಕೊಳ್ಳುವೆವು ಎದೆತನಕ....*

(ಹಾಡು ಮುಗಿಯುತ್ತಿದ್ದಂತೆ ಒಂದು ಮನೆ. ಗೃಹಸ್ಥನೋರ್ವ ಕುಳಿತಿದ್ದಾನೆ.)

**ಗೃಹಸ್ಥ** : (ಎದ್ದು ತಿರುಗಾಡಿ) ಹೌದು, ಇದೇ, ಇದೇ ಸರಿಯಾದ ವಯಸ್ಸು. *(ಕರೆಯುತ್ತಾನೆ)* ಮಕ್ಕಳೇ ! *(ಧ್ವನಿ ಎತ್ತರಿಸಿ)* ಮಕ್ಕಳೇ !

**ಮಗ ೧** : ಅಪ್ಪಾ, ಕರೆದಿರಾ?

**ಅಪ್ಪ** : ಹೌದು ಮಗಾ, ಬಾ ಇಲ್ಲಿ.

**ಮಗ ೧** : ಬಂದೆ ಅಪ್ಪಾ, ಏನು ವಿಶೇಷ ?

**ಅಪ್ಪ** : ನಿನ್ನ ತಮ್ಮಂದಿರು ಎಲ್ಲಿ ?

**ಮಗ ೨** : ಅಪ್ಪಾ, ಕರೆದಿರಾ ? ನಾನು ಇಲ್ಲಿದ್ದೇನೆ. ಮೊನ್ನೆ ಬೆಟ್ಟದಿಂದ ಹಿಡಿದು ತಂದಿದ್ದೇವಲ್ಲ, ಆ ಚಿಗರೆ ಮರಿ, ಅದನ್ನ ಆಡಿಸುತ್ತಾ ಇದ್ದೆ. ಹೀಗೆ ಟಣ್ ಎಂದು ಹಾರುತ್ತದೆ.

**ಅಪ್ಪ** : ಮಜಾ ಅಂದರೆ ಮಜಾನಪ್ಪ.

**ಮಗ ೩** : ಅಪ್ಪಾ ಬಂದೆ. ಅಪ್ಪಾ ಇಂದು ಬೆಳಿಗ್ಗೆ ಮನೆ ಮುಂದಿನ ಮರದ ಮೇಲಿಂದ ಕೂಗುತಾಯಿತ್ತಲ್ಲ, ಆ ಹಕ್ಕಿ......

**ಅಪ್ಪ** : ಕೋಗಿಲೆ ಅದು, ಮಗನೆ.

**ಮಗ ೩** : ಹೌದು. ಆ ಕೋಗಿಲೆಯನ್ನ ಅರಸಿಹೋಗಿದ್ದೆ....

**ಅಪ್ಪ** : ಬನ್ನಿ ಮಕ್ಕಳೆ, ಹೀಗೆ ಕುಳಿತುಕೊಳ್ಳಿ.

*(ಎಲ್ಲರನ್ನೂ ಮುಟ್ಟಿ ಮುದ್ದಿಸಿ)*

ಮಕ್ಕಳೇ, ಈಗ ನೀವು ದೊಡ್ಡವರಾಗಿದ್ದೀರಿ. ವಿದ್ಯೆ ಕಲಿಯುವ ವಯಸ್ಸಿಗೆ ಬಂದಿದ್ದೀರಿ.

**ಮಕ್ಕಳು** : ನಾವು ಕಲಿಯುತ್ತೇವೆ.

**ಅಪ್ಪ** : ಮಕ್ಕಳೇ, ಹೀಗೆ ಮನೆಯಲ್ಲೇ ಕುಳಿತರೆ ವಿದ್ಯೆ ಸಿಕ್ಕಲಾರದು. ಅದನ್ನು ಗಳಿಸಬೇಕು. ದೇಶ ಸಂಚಾರವೇ ವಿದ್ಯೆ ಗಳಿಸಲು ತಕ್ಕ ಸಾಧನ. ನೀವು ಜಗತ್ತಿನ ಒಂದೊಂದು ದಿಕ್ಕನ್ನು ಹಿಡಿದು ಸಂಚರಿಸುತ್ತ ಹೋಗಿ. ಅಲ್ಲಿ ನೋಡುತ್ತ, ಕಲಿಯುತ್ತ, ಬದುಕುತ್ತ ಅನುಭವವೆಂಬ ಸಂಪತ್ತನ್ನು ಗಳಿಸಿಕೊಳ್ಳಿ. ಅನುಭವವೇ ಅಧ್ಯಾತ್ಮ ಕೂಡ. ಹಾಗೆ ನಿಮ್ಮ ಬದುಕು ವಿವಿಧ ಅನುಭವಗಳಿಂದ ಸಮೃದ್ಧವಾಗಲಿ.

**ಮಕ್ಕಳು** : ಅಪ್ಪಣೆ ಅಪ್ಪಾ. ನಮ್ಮನ್ನು ಆಶೀರ್ವದಿಸಿ. *(ಮೂವರು ತಲೆಬಾಗುವರು. ಅವರನ್ನು ತೆಕ್ಕೆ ಸಿಕೊಳ್ಳುತ್ತಾನೆ)*

**ಅಪ್ಪ** : ಹೋಗಿಬನ್ನಿ. ನಿಮಗೆ ಒಳಿತಾಗಲಿ.

ದೃಶ್ಯ - ೩

*(ಋಷ್ಯಾಶ್ರಮ. ಪೀಠದ ಮೇಲೆ ಗುರು. ಎದುರು ತುಸು ಕೆಳಗಿನ ಆಸನದ ಮೇಲೆ ಶಿಷ್ಯರು ಕುಳಿತಿದ್ದಾರೆ.)*

**ಪಿಂ.ಶ.** : ಅಭಿವಂದಿಸುತ್ತಿದ್ದೇನೆ ಗುರುವರ್ಯ.

**ಋಷಿ** : ವತ್ಸಾ, ಪಿಂಗಳ ಶರ್ಮಾ, ನೀನು ಆಶ್ರಮಕ್ಕೆ ಬಂದು ಬಹಳ ವರ್ಷಗಳು ಸಂದವು.

**ಪಿಂ.ಶ.** : ನನ್ನನ್ನು ತಮ್ಮ ಪುತ್ರನಂತೆ ಸಲಹಿದಿರಿ.

**ಋಷಿ** : ಶಿಷ್ಯನೂ ಪುತ್ರ ಸಮಾನ ತಾನೇ ?

**ಪಿಂ.ಶ.** : ಗುರುವಾಗಿ ವಿದ್ಯಾದಾನ ಮಾಡಿದಿರಿ.

**ಋಷಿ** : ಈಗ ನೀನು ವಿದ್ಯಾವಂತನೂ ವಯೋವಂತನೂ ಆಗಿರುವಿ. ಬದುಕಿನ ಅನುಭವವೂ ಓದಿನ ಅನುಭವವೂ ಏಕತ್ರಗೊಂಡು ನಿನ್ನ ಜೀವನ ಸಮೃದ್ಧವಾಗಲಿ.

**ಪಿಂ.ಶ.** : ಹಾಗಾಗಲೆಂದೇ ನಾನು ಬಯಸುತ್ತೇನೆ. ನಾನು ಮನೆಯಿಂದ ಹೊರಟು ವರ್ಷವೇ ಕಳೆದುಹೋಗಿತ್ತು. ಅನೇಕ ಗ್ರಾಮ-ನಗರಗಳನ್ನು ನೋಡುತ್ತ, ಯಾರ ಯಾರದೋ ಕೆಲಸ ಮಾಡುತ್ತ, ಕೂಲಿ ಗಳಿಸುತ್ತ, ಅದು ಸಿಕ್ಕದಾಗ ಉಪವಾಸ ಅನುಭೋಗಿಸುತ್ತ ದಾರಿ ಸಾಗಿಸಿದೆ. ನನ್ನ ಅಲೆದಾಟಕ್ಕೊಂದು ನಿಶ್ಚಿತವಾದ ಸ್ಥಾನ ಸಿಕ್ಕಲೆಂದು ದಿನಾ ರಾತ್ರಿ ಧ್ಯಾನಿಸುತ್ತಿದ್ದೆ. ಕೊನೆಗೆ ನನಗೆ ಅಂಥ ಪುಣ್ಯಾಶ್ರಯವು ಇಲ್ಲಿ ಸಿಕ್ಕಿತು.

**ಋಷಿ** : ಪುಣ್ಯಾಶ್ರಯವೇ ನನ್ನ ಆಶ್ರಮ ? ಆಶ್ರಮದ ಹಸುಗಳನ್ನು ನೀನು ಕಾದೆ. ಅವುಗಳ ಸೇವೆ ಮಾಡಿದೆ. ಗುರು ಮತ್ತು ಗುರು ಪತ್ನಿಯರನ್ನು ತಂದೆ ತಾಯಿಗಳೆಂದೇ ತಿಳಿದು ಸೇವೆ ಮಾಡಿದೆ. ದಿನಾಲು ತಣ್ಣೀರಿನ ಸ್ನಾನ ಮಾಡಿದೆ. ನಡುಗುವ ಚಳಿಯಲ್ಲೆದ್ದು ಅಧ್ಯಯನ ನಡೆಸಿದೆ. ಇದು ನಿನಗೆ ಆಶ್ರಮವೊ ಅತಿಶ್ರಮವೊ ತಿಳಿಯದು.

**ಪಿಂ.ಶ.** : ಅದೆಂಥ ಮಾತು ಗುರುವರ್ಯಾ ! ಅದರಿಂದಾಗಿ ತಮ್ಮ ವಾತ್ಸಲ್ಯದಲ್ಲಿ ಕಿಂಚಿತ್ ಕೂಡ ಊನವಾಗಲಿಲ್ಲ. ನೀವು ಪ್ರೀತಿಯ ಅಮೃತಧಾರೆಯನ್ನೇ ಸುರಿಸಿದ್ದೀರಿ ನನ್ನ ಮೇಲೆ. ಗುರುಮಾತೆ ನನ್ನನ್ನು ಪ್ರತ್ಯಕ್ಷ ತನ್ನ ಮಗುವಿನಂತೆ ಕಂಡಿದ್ದಾರೆ. ನೀವಿಬ್ಬರೂ ನನಗೆ ಹೊಸ ಹುಟ್ಟನ್ನು ದಯಪಾಲಿಸಿದ್ದೀರಿ. ಇಂಥ ಋಣವನ್ನು ತೀರಿಸಲು ಜನ್ಮಜನ್ಮಗಳೇ ಸಾಕಾಗವು.

**ಋಷಿ** : ನಿನ್ನ ಮನಸ್ಸು ಗಿರಿಗಹ್ವರಗಳ ಮಧ್ಯೆ ಹರಿವ ಝರಿ-ತೊರೆಯಂತೆ ಪರಿಶುದ್ಧವಾದುದು. ನಿನಗೆ ಒಳಿತಾಗಲಿ.

**ಪಿಂ.ಶ.** : ನನ್ನ ಮುಂದಿನ ಕರ್ತವ್ಯ ದರ್ಶನ ಮಾಡಿ ಗುರುವರ್ಯಾ.

**ಋಷಿ** : ವತ್ಸಾ, ನೀನು ಈಗ ಬ್ರಹ್ಮಚರ್ಯಾಶ್ರಮದಿಂದ ಗೃಹಸ್ಥಾಶ್ರಮವನ್ನು ಪ್ರವೇಶಿಸುವ ಕಾಲ ಬಂದಿದೆ.

**ಪಿಂ.ಶ.** : ನನ್ನನ್ನು ತಮ್ಮ ಸಾಮೀಪ್ಯದಿಂದ ದೂರ ಸರಿಸಬೇಡಿ ಗುರುವರ್ಯಾ.

**ಋಷಿ** : ಹಾಗಲ್ಲ ಮಗು, ನಿನ್ನ ವಿದ್ಯೆ, ನಿನ್ನ ಶಕ್ತಿಯೆಲ್ಲ ಸಮಾಜಕ್ಕೆ ಅರ್ಪಿತವಾಗಬೇಕು. ಪ್ರತಿಯೊಬ್ಬರೂ ಗೃಹಸ್ಥನಾಗಿ ಗೃಹಸ್ಥಧರ್ಮವನ್ನೂ, ಸಮಾಜ ಧರ್ಮವನ್ನೂ ಪಾಲಿಸಬೇಕು. ಈ ದೇಶದ ಅಡಿಪ್ರಾಂತದಲ್ಲಿ ನನ್ನ ಶಿಷ್ಯನೊಬ್ಬನಿದ್ದಾನೆ. ಆತನಿಗೆ ಸುಶೀಲಳೂ, ಸ್ಫುರದ್ರೂಪಿಯೂ ಆದ ಮಗಳೊಬ್ಬಳಿದ್ದಾಳೆ. ಅವಳ ಪಾಣಿಗ್ರಹಣ ಮಾಡಿಕೊಂಡು ತೇಜಸ್ವಿಗಳಾದ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆದು ಜೀವನದ ಸುಖ ದುಃಖಗಳ ಸಾರವನ್ನು ಹೀರಿ ಸಂಸಾರದ ಅನುಭವದಿಂದ ಪಕ್ವವಾಗಿ, ಸಂಸಾರದ ಜವಾಬ್ದಾರಿಯನ್ನು ಅವರಿಗೆ ವಹಿಸಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಸಾಫಲ್ಯವನ್ನು ಪಡೆ. ಅದು ನೀನು ಸಂಸಾರಕ್ಕೂ, ಸಮಾಜಕ್ಕೂ ಸಲ್ಲಿಸುವ ಸೇವೆಯೂ, ಧರ್ಮವೂ ಆಗಿದೆ. ಇಗೋ ಇಲ್ಲಿ ನನ್ನ ಶಿಷ್ಯನಿಗಾಗಿ ಲೇಖಿಸಿಟ್ಟ ಪತ್ರವಿದೆ. ತೆಗೆದುಕೋ.

**ಪಿಂ.ಶ.** : ಅನುಗ್ರಹೀತನಾದೆ.

**ಋಷಿ** : ಸತ್ಯಂ ವದ, ಧರ್ಮಂ ಚರ, ಸ್ವಧ್ಯಾಯಂ ಕುರು...

ದೃಶ್ಯ - ೪

*(ಒಂದು ಸಾಮಾನ್ಯ ಮನೆ)*

**ಮುಲ್ಲಾ** : *(ಮನೆ ಹೊರಗೆ)* ಹಾಯ್, ಚಾಂದ್, ಓ ಚಾಂದ್.

**ಚಾಂದ್** : ಆವೊ ಆವೊ, ಮುಲ್ಲಾ ಸಾಬ್ ಆವೊ.

**ಮುಲ್ಲಾ** : ಬನ್ನಿ, ನಮ್ಮ ಚಾಂದ್‌ಳ ಮನೆ ಇದು. ಪಾಪ ! ಅಲ್ಲಾ ಕೀ ಆಶಾ ! ಅವಳ ಗಂಡ ತೀರಿಹೋದ. ಇವಳಿಗೊಬ್ಬಳೇ ಮಗಳು. ಹಾಂ, ಕ್ಯಾ ನೂರಜ್ ಎಲ್ಲಿ? ಚಾಂದ್ ಇಲ್ಲೇ ನೆರೆಮನೆಗೆ ಹೋಗಿದಾಳು. ಅವಳದೇನು, ಮಕ್ಕಳ ಮನಸ್ಸು, ಇವರು ಯಾರು ?

**ಮುಲ್ಲಾ** : ಇವರು, ನನಗೆ ಸಂಬಂಧಿಕರಿದ್ದ ಹಾಗೆ. ನಿನಗೆ ಗೊತ್ತಲ್ಲ, ನಮ್ಮ ಇಸ್ಮಾಯಿಲ್ ? ಅವನ ಸಂಗಡ ಆಗ



೨೫-೩೦ ವರ್ಷದಿಂದ ವ್ಯಾಪಾರದಲ್ಲಿ ಪಾಲುಗಾರರಾಗಿದ್ದಾರೆ. ಊರೂರು ಸುತ್ತುತ್ತ ಇಲ್ಲಿ ಬಂದಿದ್ದಾರೆ. ವ್ಯಾಪಾರಿಗಳಪ್ಪ.

**ಚಾಂದ್** : ಇಲ್ಲಿ ಏನು ವ್ಯಾಪಾರ ?

**ಮುಲ್ಲಾ** : ವ್ಯಾಪಾರ ಅಂತ ಅಲ್ಲ, ಇವರು ದೂರ ದೂರದಿಂದ ಅಲೆದಾಡುತ್ತ ಬಂದವರು. ಅನೇಕ ಗಿರಿಕಂದರಗಳನ್ನು ದಾಟಿ, ಅನೇಕ ಭಾಷೆಗಳನ್ನು ಕಲಿತು, ಓ, ದೊಡ್ಡ ಪಂಡಿತರಾಗಿಬಿಟ್ಟಿದ್ದಾರೆ. ನಮ್ಮ ಅರೇಬಿಕ್ ಸಾಹಿತ್ಯ, ಧರ್ಮಶಾಸ್ತ್ರ, ಎಲ್ಲವನ್ನೂ ಬಲ್ಲವರು.

**ಚಾಂದ್** : ಅಷ್ಟು ಪಂಡಿತರಾದವರು ಮುಲ್ಲಾ ಆಗಬೇಕಪ್ಪ; ವ್ಯಾಪಾರ ಅಂದರೇನು ?

**ಕುತುಬ್** : ಹಾಗಲ್ಲಮ್ಮ, ನನಗೆ ಯಾವಾಗಲೂ ದೇಶ ಸುತ್ತುವುದು ಅಂದರೆ ಆಯ್ತು.

**ಚಾಂದ್** : ಅಂದರೆ ಬಹಳ ದೇಶ ಸುತ್ತಿದ್ದೀರಿ.

**ಕುತುಬ್** : ಆಹ! ಎಂಥ ಪ್ರವಾಸ! ಹಳ್ಳಿ ಪಳ್ಳಿ ಎಂದಲ್ಲದೆ, ಪುರ-ಪಟ್ಟಣಗಳನ್ನೆಲ್ಲ ತಿರುಗಾಡಿದೆ. ಈ ವ್ಯಾಪಾರದ ದಂಧೆ ಬಹಳ ಪಸಂದ್ ಆಗಿದೆ. ಅರಬಸ್ತಾನದ ಬೈಲಿನಲ್ಲಿ ಶುದ್ಧ ಆಕಾಶ, ಮೇಲೆ ನಕ್ಷತ್ರಗಳ ಚಲನೆಯನ್ನು ನಿರೀಕ್ಷಿಸುತ್ತ, ಲೆಕ್ಕ ಹಾಕುತ್ತಾ ಇರುವುದು, ಎಂಥ ಖುಷ್ ಅದು! ತಿಳಿಯಬೇಕು, ತಿಳಿಯಬೇಕು. ಅದಕ್ಕೆ ನನ್ನ ವ್ಯಾಪಾರ ಬಡಾ ಸಹಾಯ ಆಯಿತು. ಹಾಗೆ ವ್ಯಾಪಾರ ಮಾಡತಾ ಮಾಡತಾ ಪರ್ಶಿಯಾಕ್ಕೆ ಬಂದೆ. ಅಲ್ಲಿ ಮೇರಾ ದೋಸ್ತ್ ಗಟ್ಟಿಯಾಗಿ ಹಿಡಿದು ನಿಲ್ಲಿಸಿಬಿಟ್ಟ. ಅವನ ತಂಗಿಯನ್ನೇ ಮದುವೆಯಾದೆ. ಇದು ಹಳೆಯ ಕತೆ.

**ಚಾಂದ್** : ಹೆಂಡತಿಯನ್ನು ಸಂಗಡ ಕಟ್ಟಿಕೊಂಡೇ ತಿರುಗಾಡಿದ್ದಾ? ಅಥವಾ ಹೋದಹೋದಲ್ಲಿ ಹೊಸಾ ಕತೆ ಅಂತ ಹೆಂಡತಿಯನ್ನು ಹೆಚ್ಚಿಸ್ತಾ ಹೋದದ್ದಾ ?

**ಕುತುಬ್** : ಖುದಾ ಕ್ಷಮಾ ಮಾಡಲಿ, ಹಾಗೆ ನಾನು ಮಾಡಲಿಲ್ಲ ಕುರಾನ್ ಹಾಗೆ ಹೇಳುವುದಿಲ್ಲ ಅದು ಪ್ರವಾದಿ ಪೈಗಂಬರರು ಮೆಚ್ಚುವ ಸಂಗತಿ ಅಲ್ಲ ನನ್ನದು ಒಂದೇ ಮದುವೆ.

**ಚಾಂದ್** : ಅಲ್ಲಾಹು ನಿಮಗೆ ಒಳ್ಳೆಯದು ಮಾಡಲಿ.



**ಮುಲ್ಲಾ** : ಚಾಂದ್, ಇವರಿಗೆ ಪ್ರಾಯಕ್ಕೆ ಬಂದ ಒಬ್ಬ ಮಗ ಇದ್ದಾನೆ. ಅವನಿಗೆ ತಕ್ಕ ಹೆಣ್ಣು ಎಂದರೆ ನಿನ್ನ ಮಗಳು ನೂರಜ್ ಅಂತ ಎಣಿಸಿ ಕರೆದುಕೊಂಡು ಬಂದೆ. ದೊಡ್ಡ ಮನೆತನ. ಇವರ ಹಾಗೇ ಇವರ ಮಗನೂ ವಿದ್ಯಾವಂತ, ಸಾಹಸಿ, ಗುಣವಂತ. ಹೀಗಾಗಿ...

**ಚಾಂದ್** : ಮುಲ್ಲಾ ಸಾಹೇಬರೆ, ನೀವು ಹೇಳಿದ ಮೇಲೆ ನಾನು ಏನು ಹೇಳಲಿ ? ನಿಮಗೆ ತಿಳಿಯದ್ದು ಯಾವುದಿದೆ ? ಅಲ್ಲದೆ ನನಗೆ ಬೇರೆ ಅಂಥ ಬಂಧುಗಳು ಯಾರು ಇದ್ದಾರೆ ? ಬೇಟಿ ನೋಡಿ ಒಪ್ಪಬೇಕಲ್ಲ

**ಕುತುಬ್** : ಠೀಕ್, ಠೀಕ್ ಬಿಲ್ ಕುಲ್ ಠೀಕ್ ಹೈ. ನಿಕಾ ಎಲ್ಲ ಶಾಸ್ತ್ರದ ಪ್ರಕಾರನೇ ಆಗಲಿ. ಅಂದಮೇಲೆ ಲಡಕಿ ಒಪ್ಪಿಗೆ ಇಲ್ಲದೆ ಆಗಲು ಹೇಗೆ ಸಾಧ್ಯ ? ಆದ್ದರಿಂದ ಅದಕ್ಕೆಲ್ಲ ಗುಮಾನಿ ಬೇಡ. ಮುಂದಿನ ಸಲ ಇಲ್ಲಿ ಬರುವಾಗ ಅವನನ್ನೇ ಕಳಿಸುತ್ತೇನೆ.

**ಮುಲ್ಲಾ** : ಖರೆ, ಬರೋಬರ್ ಕಾಳಜಿ ಬೇಡ ಚಾಂದ್. ಮೈ ದೇಖತಾ ಹೂಂ, ಅಲ್ಲಾಹು ಒಳ್ಳೆಯದನ್ನು ಮಾಡಲಿ.

**ಕುತುಬ್** : ಮುಲ್ಲಾ ಸಾಹೇಬರಂತೂ ನಮಗೂ ಬಂಧುಗಳು ಇದ್ದಹಾಗೆ.

ದೃಶ್ಯ - ೫

(ಮನೆ)

ಹಾಡು

ಇದು ವಸಂತ ಇದು ವಸಂತ
ಎಂದು ಉಲಿಯೆ ಕೋಗಿಲೆ
ಒಳಸೆಳವಿನ ಸುರಳಿಯೊಂದು
ತನಗೆ ತಾನೆ ಅರಳಿದೆ

**ಮಗು** : ಗೇಂಡ್‌ಮಾ, ಗೇಂಡ್‌ಮಾ

**ಅಜ್ಜ** : ಓ ಮ್ಯಾ ಚಾಯ್ಲ್ಡ್, ಏನು ಅದು ಮಗು ?

**ಮಗು** : ಕೇಳಿದೆಯಾ ಅಜ್ಜನ ಮೂಸಿಕ್ಕು.

**ಅಜ್ಜ** : ಹೇಗೆ, ನೀವೇ ಹೇಳಿ.

**ಮಗು** : ಇದು ವಚಂತ, ಇದು ವಚಂತ.

**ಥಾಮಸ್** (ಅಜ್ಜ) : ವಚಂತ ಅಲ್ಲ ಮಗೂ ವಸಂತ, ವಸಂತ ಸ್ಪ್ರಿಂಗ್ ಸ್ಪ್ರಿಂಗ್, ಸ್ಪ್ರಿಂಗ್ ಬಿಚ್ಚಿದ ಹಾಗೆ ಸ್ಪ್ರಿಂಗ್ ಅಬ್ಬ! ಹೀಗೆ ...ಹೀಗೆ ನಮ್ಮ ಮನೆಯ ಮುಂದೆ ನಮ್ಮ ಒಲ್ಡ ಹೌಸಿನ ಮುಂದೆ ಒಂದು ದೊಡ್ಡ ಮರ ಇತ್ತು.

**ಮಗು** : ಎಲ್ಲಿ ಗೇಂಡ್ ಫಾದರ್, ದೊಡ್ಡ ಮರ ?

**ಥಾಮಸ್** : (ಮಗುವನ್ನು ಮುದ್ದಾಡಿ) ಅಲ್ಲಿ, ಅಲ್ಲಿ ನಾನು ಮರೆತೆ ಎಲ್ಲೊ ಅಲ್ಲಿ.

**ಅಜ್ಜ** : ಏನು ಹೇಳುತ್ತೀರಿ ಮೊಮ್ಮಗನಿಗೆ. ಅದು ಹೆದರುತ್ತದೆ, ಫಿಯರು.

**ಥಾಮಸ್** : ಹೌದು ಎಲಿಜಾ, ಇಷ್ಟು ದಿನ, ಇಷ್ಟು ವರ್ಷ ಎಲ್ಲಿ ಹೋಗಿತ್ತೋ ಕೋಗಿಲೆಯ ಕುಕಿಲು ! ಈಗ ಈಗ ಕೇಳುತ್ತಿದೆ.

**ಎಲಿಜಾ** : ಅದೇನು ಪ್ರತಿ ಸ್ಪ್ರಿಂಗ್‌ನಲ್ಲೂ ಕೇಳುವುದೆ. ಈಗ ಹಳೆಯ ವಸಂತ, ವಸಂತ ಹಳೆಯ.....

**ಥಾಮಸ್** : ಅಲ್ಲ, ಹೊಸದು. ಸ್ಟಿಲ್ ಇಟ್ ಈಸ್ ಸ್ಪ್ರಿಂಗ್. ತೆರೆ ಎಬ್ಬಿಸುವ ಕೋಗಿಲೆಯ ಗಾನ. ಇದು ಹೊರಗಿನಿಂದಲ್ಲ; ಇದು ಒಳಗಿನಿಂದ ! ಹೊಸ ಅರಿವಿನಿಂದ. ಒಂದೇ ಸಮನೆ ನನ್ನನ್ನು ಸೆಳೆಯುತ್ತಿದೆ. ಅಂತರಂಗದ ಕದ ತೆರೆಯುತ್ತಿದೆ.

**ಎಲಿಜಾ** : ಹಾಗೆಲ್ಲ ಹೇಳಬೇಡಿ. ಇಷ್ಟು ವಯಸ್ಸಿನಲ್ಲಿ ಎಂಥಾದದು ವಸಂತ ? *(ಮಗು ಒಳಗೆ ಹೋಗುತ್ತದೆ)*

**ಥಾಮಸ್** : ಅದು ಹಾಗಲ್ಲ, ಎಲಿಜಾ. ನಿನ್ನೆ ರಾತ್ರಿಯೊಂದು ಕನಸು ಕಂಡೆ. ಆಹ ! ಆಹ ! ಆ ಕನಸಿನಲ್ಲಿ ಒಂದು ಮನೆಯ ಕಂಡೆ. ಮನೆಯ ಮುಂದೊಂದು ಮರ. ಅದರಾಚೆ ಹರಿವೊಂದು ಹೊಳೆ, ರಿವರ್. ಅಲ್ಲಿ ನಾನು ! ಹಕ್ಕಿಯ ದನಿಯನ್ನು ಅನುಕರಿಸುತ್ತ ಅಲೆಯುತ್ತಾನೆ ಹುಡುಗ.

**ಎಲಿಜಾ** : ಕನಸಿನಲ್ಲೂ ಹೊಳೆ! ನಿಮಗೆ ಆ ಭಯ ಮೊದಲಿನಿಂದಲೂ ಇದೆ. ನೆನಪಿಸಿಕೊ ನಮ್ಮ ಮೊದಲ ಭೆಟ್ಟಿ.

**ಥಾಮಸ್** : ನನಗೆ ಎಚ್ಚರ ಇದ್ದಿರಲಿಲ್ಲ!

**ಎಲಿಜಾ** : ನೀನು ಹೊಳೆಯಲ್ಲಿ ಕಂತುಹೋಗಿ ಉಸಿರುಕಟ್ಟಿ ಬಿದ್ದಿದ್ದಿ.

**ಥಾಮಸ್** : ಹೊಳೆಯಂಚಿಗೆ.

**ಎಲಿಜಾ** : ನಾನು ಹೆದರಿಹೋದೆ ! ಆದರೂ ನೀನು ಮತ್ತೆ ನೀರಿನ ಸೆಳವಿಗೆ ಮಗುಚಿಕೊಳ್ಳಬಾರದೆಂದು ಮೇಲೆ ಎಳೆದು ತಂದೆ. ಸಮೀಪ ಕೆಲಸ ಮಾಡುತ್ತಿದ್ದ ಜನಗಳನ್ನು ಕೂಗಿದೆ. ಅವರು ನಿನ್ನ ಹೊಟ್ಟೆಯಲ್ಲಿ ತುಂಬಿದ್ದ ನೀರನ್ನು ತೆಗೆದರು.

**ಥಾಮಸ್** : ನನಗೆ ಸ್ವಲ್ಪ ಎಚ್ಚರ ಬರುತ್ತಿತ್ತು. ನೀನು ನಿನ್ನ ಮನೆಗೆ ಸಾಗಿಸಿದೆ. ನನಗೆ ಮನೆಯೇ ಇದ್ದಿರಲಿಲ್ಲವಲ್ಲ. ಹೊಳೆಯ ಮೇಲಿನ ಪ್ರವಾಸದಲ್ಲಿ ದೋಣಿ ಮಗುಚಿಕೊಂಡು ಹೊಳೆಯಲ್ಲಿ ಬಿದ್ದುಬಿಟ್ಟಿದ್ದೆ.

**ಎಲಿಜಾ** : ಎರಡು ಮೂರು ತಿಂಗಳು ಎಡೆಬಿಡದೆ ಸೇವೆ ಮಾಡಿದೆ. ಸೊರಗಿ ಸೊರಗಿ ಕಡ್ಡಿಯಾಗಿದ್ದಿ ನೀನು.

**ಥಾಮಸ್** : ಊರೂರು ಸುತ್ತುತ್ತ, ಹಸಿವು ಕಷ್ಟಗಳನ್ನು ಸಹಿಸಿ ಸಹಿಸಿ ಸೊರಗಿ ಹೋಗಿದ್ದೆ. ನಿನ್ನ ಸೇವೆಯಲ್ಲಿ ಮೈ ಕೈ ತುಂಬಿಕೊಂಡೆ. ನನಗೆ ಹೊಸ ಜನ್ಮ ಬಂತು.

**ಎಲಿಜ** : ತುಂಬ ಸುಂದರವಾದ ಜನ್ಮ.

**ಥಾಮಸ್** : ನೀನು, ''ಆಯ್ ಲೌವ್ ಯು'' ಎಂದೆ.

**ಎಲಿಜಾ** : ಚೀಚೀ ನನಗೆ ನಾಚಿಕೆಯಾಗುತ್ತದೆ. ಶೇಮ್.

**ಥಾಮಸ್** : ನಮ್ಮ ಮದುವೆಯಾಯಿತು. ನಮ್ಮ ಮಗ ಪೀಟರ್ ನಮ್ಮ ಮನೆ ತುಂಬಿದ. ಮೊಮ್ಮಕ್ಕಳೂ ಆದರು. ಹೀಗೆ ನಮ್ಮ ಸಂಸಾರ ಸಾಗಿತು.

**ಎಲಿಜಾ** : ಈಗ.....

**ಥಾಮಸ್** : ಈಗ ಕೋಗಿಲೆಯ ಧ್ವನಿಯೊಂದು ಹೃದಯದಿಂದ ನಿರಂತರ ಹೊರ ಹೊಮ್ಮುತ್ತಿದೆ. ಆ ಸೆಳವಿಗೆ ಸಿಕ್ಕಿದ್ದೇನೆ ಆ ಮೊದಲು ಹೊಳೆಯ ಸೆಳವಿಗೆ ಸಿಕ್ಕಿದ ಹಾಗೆ. ನನ್ನ ಮನೆಯ ನೆನಪಿನ ಸೆಳವು ಕೊಚ್ಚಿಕೊಂಡು ಹೋಗುತ್ತಿದೆ. ಎಲ್ಲಿ ಪೀಟರ್....

ದೃಶ್ಯ - ೬

*(ನಾಟಕದ ಮೊದಲ ದೃಶ್ಯದ ಮನೆ. ಈಗ ತುಸು ಹಳತಾಗಿದೆ)*

**ಪಿಂಗಳ ಶರ್ಮಾ** : ಹೌದು. ಇದು ನನ್ನ ಮನೆ. ಅ ಹಂ ಆಗತಃ. ಅಂತೂ ತಲ್ಪಿಬಿಟ್ಟೆ ! ನನ್ನ ಮನೆ. ಇದು ಅಂಗಳ, ಇಲ್ಲೇ ನಮ್ಮ ದನ ಕೌಲೆಯ ಕರುವನ್ನು ಕಟ್ಟುತ್ತಿದ್ದರು. ಛಂಗನೆ ಹಾರಿ ಕುಣಿಯುತ್ತಿತ್ತು. ನಾನು ಬಂದುಬಿಟ್ಟೆ! *(ಆನಂದಾತಿರೇಕದಿಂದ ಗೋಡೆ, ಕಂಬಗಳನ್ನೆಲ್ಲ ಮುಟ್ಟುತ್ತ, ತಟ್ಟುತ್ತ, ಮೂಸುತ್ತ ಇರುತ್ತಾನೆ.)*

**ಕುತುಬ್** : *(ಪ್ರವೇಶಿಸಿ)* ಅಬ್ಬಬ್ಬ. ಆ ಗಯಾ! ಅಬ್ ಬಹುತ್ ಖುಶ್ ಹೋಗಯಾ! ಇದೇ ಇದೇ ನನ್ನ ಮನೆ. ಆದರೇ! ಅಲ್ಲಿ ಕಿಟಕಿಯ ಮೇಲ್ಗಡೆ ನಾನೇ ಬರೆದದ್ದು ಚಿಗರೆಯ ಚಿತ್ರ! ನಾನೇ ಬರೆದದ್ದು!

ಎಲಾ, ಇವನಾರಪ್ಪ! ಹುಚ್ಚ, ಕಂಬಗಳನ್ನೆಲ್ಲ ಅಪ್ಪಿಕೊಂಡು ಕುಣಿಯುತ್ತಿದ್ದಾನೆ! ರೂಪ ನೋಡಿದರೋ... ತಲೆಯ ಹಿಂದೆ ಚಂಡಿಕೆ, ಮತ್ತೆಲ್ಲ ಬೋಳು. ಹಹಹ ಎದೆಯ ಮಧ್ಯ ಅಡ್ಡವಾದ ಗಡುತರ ದಾರ, ಸೊಂಟಕ್ಕೆ ಸುತ್ತಿಕೊಂಡ ಪಂಜಿ. ಏನೋ ಸನ್ನೆ ಮಾಡುತ್ತಿದ್ದಾನೆ. ಓಹೊ, ಇದು ನನ್ನ ಮನೆ, ನೀನೇಕೆ ಬಂದೆ ಎನ್ನುತ್ತಾನೆ. ಬದ್ಮಾಷ್. ಎಲ್ಲೈ ಜುಟ್ಟುಧಾರಿ, ಭಿಕಾರಿ. ತುಂ ಕೌನ್ ಹೊ. ಇಲ್ಲಿಗೇಕೆ ಬಂದೆ ?

**ಪಿಂಗಳ ಶರ್ಮಾ** : ಏತತ್ ಮಮ ಗೃಹಂ.

**ಕುತುಬ್** : ಯಹ್ ಮೇರಾ ಘರ್ ಹೈ.

**ಥಾಮಸ್** : *(ಪ್ರವೇಶಿಸಿ)* ಏನಿದು, ಗರಮ್ ಗರಮ್ ಎಂತಾನೊಬ್ಬ ಘುರ್ ಘುರ್ ಅಂತಾನೆ ಇನ್ನೊಬ್ಬ. ಆಽಹ ಆಽಹ ಈಸ್ ಇಟ್ ನಾಟ್ ಮೈ ಹೌಸ್ ? ಹ ಹ ಹ. ಒಬ್ಬ ಜುಟ್ಟಿನವ, ಮತ್ತೊಬ್ಬ ಗಡ್ಡದವ. ಒಬ್ಬ ಪಂಚೆಯವ, ಇನ್ನೊಬ್ಬ ಲುಂಗಿಯವ. ನಾನ್‌ಸೆನ್ಸ್. ನನ್ನದಾದರೆ ಎಂಥ ಚೆಂದ! ತಲೆತುಂಬ ಕ್ರಾಪು, ಕೊರಳಿಗೆ ಕ್ರಾಸು. ಇವರದೋ ಎಂಥ ಭಾಷೆ ? ವ್ಹಾಟ್ ಲಾಂಗ್ವೆಜ್.. ಥೂ ಥೂ.

**ಪಿಂಗಳ ಶರ್ಮಾ** : ಏನಂದೆ ? ನಿನ್ನ ಎಸ್ ಪಿಸ್ ಎಲ್ಲ ಇಲ್ಲಿ ನಡೆಯೂದಿಲ್ಲ, ಪೆಟ್ಲೆಂಡೆ ಆಲಿನವನೆ

**ಕುತುಬ್** : ಕ್ಯಾ ಬೋಲತಾ ಹೈ ಕಾಫಿರ್ ?

**ಥಾಮಸ್** : ರಾಸ್ಕಲ್ ! ನನ್ನ ಮನೆಗೆ ಬಂದು ನನ್ನನ್ನೆ ಬಯ್ತಿಯಾ ? *(ಮುಷ್ಟಿ ಕಟ್ಟುವನು)*

**ಪಿಂಗಳ ಶರ್ಮ** : ಏನು ತ್ವಂ ಕಿಂ ಕರೋಷಿ ?

**ಕುತುಬ್** : ತು ಕ್ಯಾ ಕರ್ತಾ ಹೈ ?

**ಥಾಮಸ್** : ವ್ಹಾಟ್ ಡುಯುಡು ?

**ಪಿಂಗಳ ಶರ್ಮ** : ನಿನ್ನ ಸಂಹಾರ ಮಾಡಿಬಿಡ್ತೇನೆ. *(ದೊಡ್ಡ ಸೊಟ್ಟೆ ಎತ್ತುವನು)*

**ಕುತುಬ್** : ನಿನ್ನ ಕತಮ್ ಮಾಡಿಬಿಡ್ತೇನೆ. *(ದೊಡ್ಡ ಕಲ್ಲು ಎತ್ತುವನು)*

**ಥಾಮಸ್** : ನಿಮ್ಮನ್ನೆಲ್ಲ ಮರ್ಡರ್ ಮಾಡಿಬಿಡ್ತೇನೆ. *(ಮುಷ್ಟಿ ಕಟ್ಟಿ ನುಗ್ಗುವನು)*

*(ಒಬ್ಬರೊಬ್ಬರ ಮೇಲೆ ಎರಿಹೋಗುವರು)*

**ಅಪ್ಪ** : *(ಮೊದಲಿನ ಗೃಹಸ್ಥ ತಟ್ಟನೆ ಬಾಗಿಲು ತೆಗೆದು ಬಂದು)* ಹಂ ಹಂ ಹಂ ನಿಲ್ಲಿಸಿ.

**ಮೂವರು** : ಯಾಕೆ ? ಯಾಕೆ ?

**ಅಪ್ಪ** : ನಾನು ನಿಮ್ಮ ಅಪ್ಪ. ನೀವು ಮೂವರೂ ನನ್ನ ಮಕ್ಕಳು. ನೀವು ನೀವು ಸೋದರರು.

**ಪಿಂಗಳ ಶರ್ಮ** : ಅಸತ್ಯಂ.

**ಕುತುಬ್** : ಝೂಠ್.

**ಥಾಮಸ್** : ಲೈ !

**ಅಪ್ಪ** : ಶಾಂತರಾಗಿ ! ವಿವೇಕಶಾಲಿಗಳಾಗಿ ! ನಾನು ಮುದಿಯನಾದರೆ ಏನಾಯಿತು? ನನ್ನನ್ನು ಸರಿಯಾಗಿ ನೋಡಿ *(ಮೂವರೂ ದಿಟ್ಟಿಸಿ ನೋಡುತ್ತ ಪರಸ್ಪರ ನೋಡಿಕೊಳ್ಳುವರು. ಒಬ್ಬೊಬ್ಬರಾಗಿ ಆಯುಧವನ್ನು ಒಗೆಯುವರು)*

**ಪಿಂಗಳ ಶರ್ಮ** : ಪಿತಾಜಿ !

**ಕುತುಬ್** : ಮೇರೆ ಬಾಪ್ !

**ಥಾಮಸ್** : ಮೈ ಫಾದರ್ !

**ಅಪ್ಪ** : ಹೌದು ಮಕ್ಕಳೇ ನಾನು ನಿಮ್ಮ ತಂದೆಯೇ. ಮಕ್ಕಳೇ, ನೀವು ಇನ್ನೂ ಚಿಕ್ಕವರಿರುವಾಗ ನೀವು ಲೋಕ ಸಂಚರಿಸಿ ವಿದ್ಯೆಯನ್ನು ಸಂಗ್ರಹಿಸಿ ಬರಬೇಕೆಂದು ನಿಮ್ಮನ್ನು ಜಗತ್ತಿನ ದಿಕ್ಕು ದಿಕ್ಕಿಗೆ ನಾನೇ ಕಳಿಸಿದೆ. ನೀವು ಲೋಕವನ್ನು ಸಂಚರಿಸುತ್ತ ನಡೆದಿರಿ. ಎಲ್ಲೆಲ್ಲಿ ನಡೆಸಿದರೂ ಅಲ್ಲಲ್ಲಿಯ ಭಾಷೆಯನ್ನು ಕಲಿತಿರಿ. ಅಲ್ಲಿ ಪ್ರಚಲಿತವಿದ್ದ ಧರ್ಮವನ್ನು ಸ್ವೀಕರಿಸಿದಿರಿ. ಅಲ್ಲಿಯ ಪೂಜಾ ವಿಧಾನ, ಆಚರಣಾತ್ಮಕ ಚಟುವಟಿಕೆಗಳನ್ನೇ ರಕ್ತಗತ ಮಾಡಿಕೊಂಡಿರಿ. ಅಲ್ಲಿಯ ಅನ್ನ ಆಹಾರವೇ ನಿಮ್ಮದಾಯಿತು. ಅಲ್ಲೇ ಮದುವೆಯಾದಿರಿ. ಸಂಸಾರ ನಡೆಸಿದಿರಿ. ಮಕ್ಕಳನ್ನು ಮೊಮ್ಮಕ್ಕಳನ್ನು ಪಡೆದಿರಿ. ಕಾಲಾಂತರದಲ್ಲಿ ನಿಮ್ಮ ನಿಮ್ಮ ಮತಧರ್ಮ, ಸಂಸ್ಕೃತಿ, ಸಾಹಿತ್ಯ, ರೀತಿ ರಿವಾಜು ಬೇರೆಯಾಯಿತು. ಹಾಗಾಗಿ ನೀವು ಮೂಲವನ್ನೇ ಅಂದರೆ ಮೂವರಿಗೂ ಅಪ್ಪನಾದ ನನ್ನನ್ನೇ ಮರೆತಿರಿ. ಈ ಮನೆ ನಿಮ್ಮೆಲ್ಲರದ್ದೂ ಆಗಿದೆ. ನೀವು ಒಬ್ಬರನ್ನೊಬ್ಬರು ಆಲಂಗಿಸಿಕೊಳ್ಳಿ. *(ಆಲಂಗಿಸುವರು)*. ದೇವರು ಲೋಕದಲ್ಲಿ ವೈವಿಧ್ಯಮಯವಾದ ನಿಸರ್ಗ, ಧರ್ಮ, ಭಾಷೆ, ಸಂಸ್ಕೃತಿಗಳನ್ನೆಲ್ಲ ನಿರ್ಮಿಸಿದ್ದು ಮನುಷ್ಯರು ತಮ್ಮ ತಮ್ಮ ಸಂಕುಚಿತ ಮನೋಭಾವವನ್ನು ಬಿಟ್ಟು ಅನುಭವದ ವೈವಿಧ್ಯತೆಯಿಂದ ಹೃದಯದ ಶ್ರೀಮಂತಿಕೆಯನ್ನು ಹೆಚ್ಚಿಸಿಕೊಂಡು ಬದುಕಬೇಕೆಂದೇ ಹೊರತು, ಒಬ್ಬರನ್ನೊಬ್ಬರು ಕೊಚ್ಚಿಕೊಂಡು ಸೃಷ್ಟಿಯನ್ನು ನರಕವನ್ನಾಗಿ ಮಾಡಲೆಂದೇನೂ ಅಲ್ಲ ತಿಳಿಯಿರಿ.

ಬನ್ನಿ ನನ್ನನ್ನು ಆಲಂಗಿಸಿಕೊಳ್ಳಿ.

ದೃಶ್ಯ ೬

*(ಮೊದಲಿನ ಗದ್ದುಗೆ)*

**ಟಿ.ಖಾ.** : ನೀವು ಏನು ಮಾಡಬೇಕೆಂದು ತಿಳಿಯಿತೇ ?

**ಎಲ್ಲರೂ** : ಸಂತ ಗುರುಗಳಿಗೆ ಜಯವಾಗಲಿ...

*(ಮೊದಲಿನ ಹಾಡಿನ ಕೆಲವು ಸಾಲುಗಳು)*

ಹುಸೇನಿ ಸಾಹೇಬರ ಬದಿಯಲಿ ಹೋಗಿ
ಹಸನಾಗಿ ನಾವು ಬಂದೇವು.
ಖಾಲಿಯೆಂಬುವ ಡೋಲಿಯ ಮುರಿದು
ಒಳಗಿನ ಮೂಲವ ತಿಳಿದೇವು
ಸುತ್ತಲ ಜ್ಯೋತಿಯ ಕಂಡೇವು.

ಆರ್. ವಿ. ಭಂಡಾರಿ
ಅರೆಅಂಗಡಿ - ೫೮೧ ೩೩೪, ಹೊನ್ನಾವರ - ಉ.ಕ.

ಭಾರತ ರಾಜಕೀಯ ಸ್ವಾತಂತ್ರ್ಯವನ್ನು ಪಡೆದು ಅರ್ಧ ಶತಮಾನಕ್ಕಿಂತಲೂ ಹೆಚ್ಚು ಸಮಯ ಸಂದಿದೆ. ಇಂದು ವಿಶ್ವದ ಬೃಹತ್ ಪ್ರಜಾಪ್ರಭುತ್ವ, ಗಣರಾಜ್ಯ ಎಂಬ ಹಿರಿಮೆ ಈ ದೇಶಕ್ಕಿದೆ. ಈ ಬೃಹತ್ ದೇಶದ ಇತಿಹಾಸದಲ್ಲಿ ಅರ್ಧ ಶತಮಾನದ ಅವಧಿ ಅಲ್ಪ ಕಾಲದ್ದೆನಿಸಿದರೂ ಸಹ, ದೇಶದ ಪ್ರತಿಯೊಬ್ಬ ಪ್ರಜೆಯ ಜೀವನದಲ್ಲಿ ಇದು ಸಾಕಷ್ಟು ಸುದೀರ್ಘವಾದ ಹಾಗೂ ಅಮೂಲ್ಯವಾದ ಅವಧಿ. ಆದ್ದರಿಂದಲೇ ಈ ಸ್ವತಂತ್ರ ದೇಶದಲ್ಲಿ ನಾವೆಷ್ಟು ಸ್ವತಂತ್ರರು ? ಇಲ್ಲಿನ ಪ್ರಜೆಗಳಿಗೆ ಯಾವ ಯಾವ ತೆರನಾದ ಸ್ವಾತಂತ್ರ್ಯವಿದೆ ? ಅದನ್ನು ಅವರು ಎಷ್ಟರಮಟ್ಟಿಗೆ ಅನುಭವಿಸುತ್ತಿದ್ದಾರೆ ? – ಇವೆಲ್ಲವುಗಳೂ ಇಂದಿನ ವಿಚಾರವಂತರ, ಪ್ರಜ್ಞಾವಂತರ ಮುಂದಿರುವ ಪ್ರಶ್ನೆಗಳು.

ಈ ಪ್ರಶ್ನೆಗೆ ಥಟ್ಟನೆ ಹೊಳೆಯುವ ಉತ್ತರ ನಮ್ಮ ದೇಶ ನಮಗೆ ಮೂಲಭೂತ ಹಕ್ಕುಗಳ ಮೂಲಕ ನೀಡಿರುವ ಹಲವಾರು ವಿಧವಾದ ಸ್ವಾತಂತ್ರ್ಯ-ವಾಕ್ ಸ್ವಾತಂತ್ರ್ಯ, ಮತ ಚಲಾಯಿಸುವ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಸಂಘ ಕಟ್ಟುವ/ಸಂಘದ ಸದಸ್ಯನಾಗುವ ಸ್ವಾತಂತ್ರ್ಯ, ಶೈಕ್ಷಣಿಕ ಸ್ವಾತಂತ್ರ್ಯ ಮುಂತಾದವು. ಆದರೆ ಇಷ್ಟೆಲ್ಲ ಸ್ವಾತಂತ್ರ್ಯಗಳನ್ನು ಯಾವುದೇ ಅನಗತ್ಯವಾದ ನಿರ್ಬಂಧನೆ, ಕಟ್ಟುಪಾಡುಗಳಿಗೆ ಒಳಗಾಗದೇ ಚಲಾಯಿಸಲು ಪ್ರತಿಯೊಬ್ಬ ಪ್ರಜೆಯೂ ಅದೆಷ್ಟು ಸ್ವತಂತ್ರಳಾಗಿದ್ದಾಳೆ ಅಥವಾ ಸ್ವತಂತ್ರನಾಗಿದ್ದಾನೆ ? ನಮ್ಮ ಸಾಮಾಜಿಕ, ಧಾರ್ಮಿಕ, ಆರ್ಥಿಕ ವ್ಯವಸ್ಥೆಗಳು ಅದಕ್ಕೆ ಮುಕ್ತ ಅವಕಾಶ ಮಾಡಿಕೊಡುತ್ತವೆಯೇ ?

ಸ್ವತಂತ್ರ ಭಾರತ ತನ್ನನ್ನು ತಾನೇ ಜಾತ್ಯಾತೀತ ರಾಷ್ಟ್ರ, ಸರ್ವಧರ್ಮಗಳನ್ನು ಸಮಾನವಾಗಿ ಕಾಣುವ ರಾಷ್ಟ್ರ (Secular State) ಎಂದು ಘೋಷಿಸಿಕೊಂಡಿದೆ. ಜಾತಿ ವಿಪರ್ಯಾಸ. ಯಾವುದೊಂದು ರಾಜ್ಯದ ರಾಜಕೀಯ ಸ್ಪರ್ಧೆ ಎಂದರೆ ಅಲ್ಲಿಯ ಪ್ರಬಲ ಜಾತಿಗಳ ನಡುವಿನ ಸ್ಪರ್ಧೆಯೇ ಎಂಬ ಡಾ॥ ಎಂ. ಎನ್. ಶ್ರೀನಿವಾಸ ಅವರ ಅಭಿಪ್ರಾಯ ಇಂದಿನ ನಮ್ಮ ರಾಜಕೀಯ ಸ್ಪರ್ಧೆಗೆ ಹಿಡಿದ ಕನ್ನಡಿ. ಭಾರತದ ಇಂದಿನ ರಾಜಕೀಯದಲ್ಲಿ ಜಾತಿಯ ಪ್ರಾಬಲ್ಯವನ್ನು, ಪ್ರಾಮುಖ್ಯತೆಯನ್ನು ಕಡೆಗಣಿಸುವಂತಿಲ್ಲ. ಅಭ್ಯರ್ಥಿಯ ಆಯ್ಕೆ, ಮತದಾನ, ಮತದಾನದ ವಿಶ್ಲೇಷಣೆ, ಇಲಾಖೆಗಳ ಹಂಚುವಿಕೆ ಇವೆಲ್ಲವುಗಳಿಗೆ ಆಧಾರ ಜಾತಿ ಎಂಬುದನ್ನು ನಾವು ಒಪ್ಪಲೇಬೇಕು. ತೀರಾ ಇತ್ತೀಚೆಗೆ ಕರ್ನಾಟಕ ರಾಜ್ಯದ ಮಂತ್ರಿಮಂಡಲದ ಪುನರ್ರಚನೆ, ವಿಸ್ತರಣೆಯಲ್ಲಿ ಜಾತಿ ಎಷ್ಟೊಂದು ಪ್ರಮುಖ ಅಂಶವಾಗಿದ್ದಿತು ಎನ್ನುವುದು ನಮ-ನಿಮಗೆಲ್ಲ ವರ್ತಮಾನಗಳ ಮೂಲಕ ಮನನವಾಗಿದೆ. ಅಲ್ಲವೇ ? ಜಾತ್ಯಾತೀತ ರಾಷ್ಟ್ರದ ಪ್ರಜೆಗಳಿಂದು ಜಾತೀಯತೆಯ ಆಕ್ಟೋಪಸ್ ಹಿಡಿತದಲ್ಲಿದ್ದೇವೆ. ಇದರಿಂದ ಮುಕ್ತಿ ಎಂದು ?

ಸರ್ವಧರ್ಮ ಸಮಾನತೆಯನ್ನು ಸಾರುವ ಈ ದೇಶದಲ್ಲಿ ಧಾರ್ಮಿಕ ಬಹುಸಂಖ್ಯಾತರಿಗೆ ವಿಧಿಸಲ್ಪಟ್ಟ, ರಾಷ್ಟ್ರಕ್ಕೆ ಹಿತವಾಗಬಲ್ಲ, ಅಗತ್ಯವಾಗಿರುವ ಹಲವು ನಿರ್ಬಂಧನೆಗಳಿಂದ ಧಾರ್ಮಿಕ ಅಲ್ಪ ಸಂಖ್ಯಾತರು ಮುಕ್ತರು. ಈ ತಾರತಮ್ಯ ಸರ್ವಧರ್ಮ ಸಹಿಷ್ಣುಗಳ ಸಹನೆಯನ್ನೇ ಪರೀಕ್ಷಿಸುತ್ತದೆ; ಅವರನ್ನು ರೊಚ್ಚಿಗೆಬ್ಬಿಸುತ್ತಿದೆ. ಏಕೆಂದರೆ ಈ ತಾರತಮ್ಯ ರಾಷ್ಟ್ರದ ಪ್ರಗತಿಗೆ ಮಾರಕವಾಗಿದೆ; ರಾಷ್ಟ್ರೀಯ ಭಾವೈಕ್ಯತೆಗೆ ಪ್ರಬಲವಾದ ಅಡ್ಡಿಯನ್ನುಂಟುಮಾಡಿದೆ. ದೇಶದ ಎಲ್ಲ ಧರ್ಮೀಯರಿಗೂ ಒಂದೇ ತೆರನಾದ ಸಾಮಾನ್ಯ ಕಾನೂನು ಸಂಹಿತೆಯನ್ನು ಜಾರಿಗೊಳಿಸಿದರೆ ಮಾತ್ರ ಇಂದು ನಾವು ಧರ್ಮ ಆಧಾರಿತ ತಾರತಮ್ಯದಿಂದ ಮುಕ್ತರಾಗಲು ಸಾಧ್ಯ; ರಾಷ್ಟ್ರೀಯ ಭಾವೈಕ್ಯತೆ ಸಾಧ್ಯ.

# ನಾವೆಷ್ಟು ಸ್ವತಂತ್ರರು ?



ಪದ್ಧತಿಯ ಕಪಿಮುಷ್ಟಿಯಿಂದ ಮುಕ್ತರಾದಾಗ ಮಾತ್ರ ನಿಜವಾದ ಅರ್ಥದಲ್ಲಿ ಸಾರ್ವಭೌಮತ್ವ ಸಾಧ್ಯ ಎಂಬ ಅರಿವೇ ಈ ಘೋಷಣೆಗೆ ಆಧಾರವೇನೋ ! ಆದರೆ ಇಂದು ನಡೆಯುತ್ತಿರುವುದೇನೊ ? ಇಂದು ಸಾಮಾನ್ಯವಾಗಿ ಕಾಣುತ್ತಿರುವ ವಿಭಿನ್ನಜಾತಿಯವರ ಸಹ-ಪಂಕ್ತಿ ಭೋಜನ, ಜಾತಿ ಹಾಗೂ ವೃತ್ತಿಗಳ ನಡುವಿನ ಸಾಂಪ್ರದಾಯಿಕ ಕೊಂಡಿ ತೀರ ದುರ್ಬಲವಾಗಿರುವಿಕೆ, ಹಲವು ಜಾತಿಗಳ ಮೇಲಿನ ಸಾಮಾಜಿಕ-ಧಾರ್ಮಿಕ ಅನರ್ಹತೆಗಳು ಶಿಥಿಲಗೊಂಡಿರುವಿಕೆಗಳು ಜಾತ್ಯಾತೀತ ರಾಷ್ಟ್ರ ನಿರ್ಮಾಣದೆಡೆಗೆ ಕರೆದೊಯ್ಯುತ್ತಿರುವ ಸಂಕೇತವೆಂದರೆ ಮೂರ್ಖತನವಾದೀತು. ಜಾತಿಯ ಬಗೆಗಿನ ಪ್ರೀತಿ, ಭಕ್ತಿ, ಶ್ರದ್ಧೆ – ಜಾತೀಯತೆಯ ಬೇರುಗಳು ದಿನದಿಂದ ದಿನಕ್ಕೆ ಆಳವಾಗಿ ಇಳಿದು ಗಟ್ಟಿಗೊಳ್ಳುತ್ತಿವೆ. ಜನತೆಯ ಮನದಲ್ಲಿ ಸಮಾನತೆಯ, ಜಾತ್ಯಾತೀತ ರಾಷ್ಟ್ರದ ನಿರ್ಮಾಣಕ್ಕೆ ನಾಂದಿಯಾಗಬೇಕಾದ 'ಮೀಸಲಾತಿ' ಜಾತೀಯತೆಯ ಬೆನ್ನೆಲುಬಾಗಿದೆ. ಶೈಕ್ಷಣಿಕ ಕ್ಷೇತ್ರದಲ್ಲಾಗಲೀ, ಉದ್ಯೋಗದ ಕ್ಷೇತ್ರದಲ್ಲಾಗಲೀ ಸಮಾನತೆಯ ಸುಳಿವೇ ಇಲ್ಲ. ಸಾಂಪ್ರದಾಯಿಕವಾಗಿ ಬಹುದೀರ್ಘ ಅವಧಿಯವರೆಗೆ ಅನೇಕ ಸೌಲಭ್ಯಗಳಿಂದ ವಂಚಿತರಾದವರಿಗೆ ಅದನ್ನು ಈಗ ಸರಿದೂಗಿಸುವ ಪ್ರಯತ್ನದಲ್ಲಿ, ವಾಸ್ತವಿಕವಾಗಿ ಅರ್ಹತೆಯುಳ್ಳವರನ್ನು ಅವರ ಮೂಲಭೂತ ಹಕ್ಕುಗಳಿಂದಲೇ ವಂಚನೆ ಮಾಡುವ ತೆರದಲ್ಲಿ ಜಾತಿಪದ್ಧತಿ ಮಾರ್ಪಾಡುಗೊಂಡಿದೆ ಎಂದೆನಿಸುತ್ತದೆ. ಪರಿಣಾಮವಾಗಿ ಒಂದಾನೊಂದು ಕಾಲದಲ್ಲಿ ಮೇಲ್ಜಾತಿಯವರು ಎಂದು ಕರೆಯಿಸಿಕೊಂಡು ಹೆಮ್ಮೆಯಿಂದ ಬೀಗುತ್ತಿದ್ದವರು ಈಗ ತಮ್ಮ ಜಾತಿಯನ್ನು 'ಹಿಂದುಳಿದ' ಅಥವಾ 'ಕೆಳಜಾತಿಗಳ' ಪಟ್ಟಿಯಲ್ಲಿ ಸೇರಿಸಲು ಸರಕಾರವನ್ನು ಒತ್ತಾಯಿಸುತ್ತಿದ್ದಾರೆ; ಮಾತ್ರವಲ್ಲ ಆಂದೋಲನಗಳನ್ನೂ ಸಹ ನಡೆಸುತ್ತಿದ್ದಾರೆ ಎಂಬುದೇ

ತಮ್ಮ ಮಾತೃ ಭಾಷೆಯಲ್ಲಿ ಹಸ್ತಾಕ್ಷರ ಮಾಡಬಲ್ಲವರನ್ನೆಲ್ಲ ಸಾಕ್ಷರರೆಂದು ಪರಿಗಣಿಸಲಾಗುತ್ತದೆ ನಮ್ಮ ದೇಶದಲ್ಲಿ. ಈ ಅಳತೆ ಮಾಪನವನ್ನು ಆಧಾರವಾಗಿ ಇರಿಸಿದಾಗಲೂ ನಮ್ಮ ದೇಶದ ಬಹು ಜನಸಂಖ್ಯೆಯ ಬಹುಪಾಲು ಅನಕ್ಷರಸ್ಥರೇ. ಇಂದಿಗೂ ಸಹ ಗ್ರಾಮಗಳ ನಾಡು ಎಂದೇ ಪರಿಗಣಿಸುವ ನಮ್ಮ ದೇಶದ ಬಹುಪಾಲಿನ ಗ್ರಾಮಸ್ಥರು ನಿರಕ್ಷರ ಕುಕ್ಷಿಗಳೇ. ಈಗಿನ ಸಂಕೀರ್ಣವಾದ ವ್ಯವಸ್ಥೆಯಲ್ಲಿ ಇವರೆಲ್ಲರೂ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವುದು, ಜೀವನ ಸಾಗಿಸುವುದು ದುರ್ಲಭವಲ್ಲವೇ ? ಸ್ವಂತ ನಿರ್ಣಯವಾಗಲಿ, ಸ್ವಾವಲಂಬಿ ಜೀವನವಾಗಲಿ ಸಾಧ್ಯವಾಗದ ಜನ ಹೆಜ್ಜೆ ಹೆಜ್ಜೆಗೂ ಮೋಸ, ವಂಚನೆ, ಶೋಷಣೆಗಳಿಗೆ ಒಳಗಾಗುತ್ತಾರೆ. ನಿರಕ್ಷರತೆ, ನಿರುದ್ಯೋಗ, ಬಡತನಗಳ ಬಿಗಿಯಾದ ಕೊಂಡಿಗಳಿಂದ ಭದ್ರವಾಗಿ ಬಿಗಿಯಲ್ಪಟ್ಟ ಬಂಧನಕ್ಕೆ ಒಳಗಾದವರು ಸ್ವತಂತ್ರರೇ ? ಸಾಕ್ಷರತೆ ಪ್ರಗತಿಯ ಸಾಧನ, ಅನಕ್ಷರತೆ ದಾಸ್ಯದ ಸಂಕೇತ ಎನ್ನುವ ವಿಚಾರ ಅದೆಷ್ಟು ಸತ್ಯ ! ಅದೆಷ್ಟು ಅರ್ಥಗರ್ಭಿತ !!

ಭಾರತವನ್ನು ಇಂದಿಗೂ ಸಹ ಪ್ರಮುಖವಾಗಿ ಕೃಷಿನಾಡು, ಕೃಷಿಕರ ನಾಡು ಎಂದೇ ವರ್ಣಿಸಲಾಗುತ್ತದೆ. ಈ ಕೃಷಿಕರ ಜೀವನವನ್ನು ಒಂದೇ ವಾಕ್ಯದಲ್ಲಿ ಹೇಳಬೇಕಾಗಿ ಬಂದಾಗ 'ಭಾರತದ ರೈತ ಸಾಲದಲ್ಲಿಯೇ ಹುಟ್ಟಿ, ಸಾಲದಲ್ಲಿಯೇ ಜೀವಿಸಿ, ಸಾಲದಲ್ಲಿಯೇ ಸಾಯುತ್ತಾನೆ' ಎಂದೆನ್ನುವುದು ತೀರಾ ಸಾಮಾನ್ಯ. ಈ ಸ್ವತಂತ್ರ ದೇಶದಲ್ಲಿ ಬಹುಪಾಲಿನ ಜನ ಆರ್ಥಿಕ ಸ್ವಾತಂತ್ರ್ಯ ಹೊಂದಿಲ್ಲ. ಇವರೆಲ್ಲ ಋಣಭಾರದಿಂದ ಬಾಗಿದ್ದಾರೆ. ಈ ತೆರನಾದ ಋಣಭಾರ ವ್ಯಷ್ಟಿ ಮಟ್ಟಕ್ಕೆ ಮಾತ್ರ ಸೀಮಿತಗೊಂಡಿರದೆ ಸಮಷ್ಟಿಯನ್ನೇ ತನ್ನ ಕಪಿಮುಷ್ಟಿಯಲ್ಲಿ ಬಂಧಿಸಿದೆ. ಅನೇಕ ಪ್ರಗತಿಗೊಂಡ, ಬೃಹತ್ ರಾಷ್ಟ್ರಗಳಿಂದ ಪಡೆದ ಸಾಲವನ್ನು ಸಂಪೂರ್ಣವಾಗಿ ಮರುಪಾವತಿ ಮಾಡುವ ಮೊದಲೇ ಮತ್ತೆ ಹೊಸ ಸಾಲಕ್ಕೆ ಮನವಿ. ಸಾಲದ ಭಾರದಿಂದ ಕತ್ತು ಮಾತ್ರವಲ್ಲ, ಬೆನ್ನೂ ಸಹ ಬಾಗಿದಾಗ ಸ್ವತಂತ್ರವಾಗಿ ಯೋಚಿಸಲು ಸಾಧ್ಯವೇ ? ಒಂದು ವೇಳೆ ಹಾಗೆ ಯೋಚಿಸಿದರೂ ಸಹ ಆ ಯೋಚನೆಗಳನ್ನು ಸಮಗ್ರವಾಗಿ ಕಾರ್ಯರೂಪದಲ್ಲಿ ತರಲು ಸಾಧ್ಯವೇ ? ಸಾಲ ಕೊಟ್ಟ ದೇಶ ಹೇರುವ ಒತ್ತಡಗಳಿಗೆ ಮಣಿಯದಿರಲು ಸಾಧ್ಯವೇ ? ನಮ್ಮ ಆರ್ಥಿಕ ಧೋರಣೆಗಳು ನಿಜವಾದ ಅರ್ಥದಲ್ಲಿ ''ನಮ್ಮ'' ಧೋರಣೆಗಳಾಗಿರಲು ಅಂದರೆ ಸಾಲ ಕೊಟ್ಟವರ ಒತ್ತಡಗಳಿಂದ ಮುಕ್ತವಾಗಿರಲು ಸಾಧ್ಯವೇ ? ಈ ಒತ್ತಡಗಳು ಹಲವೊಂದು ಬಾರಿ ನಮ್ಮ ಸಾಮಾಜಿಕ-ಸಾಂಸ್ಕೃತಿಕ ಸ್ಥಿತಿಗತಿಗಳಿಗೆ ಪೂರಕವಾಗಿಲ್ಲ. ಇದರೊಂದಿಗೆ ಇನ್ನೂ

ಗೌರಾ ಸಿನ್ನೂರ

ಅಸಹನೀಯವಾದದ್ದೆಂದರೆ ಈ ಬೃಹತ್ ದೇಶದ ಒಂದು ರಾಜ್ಯದಷ್ಟೇ ಗಾತ್ರ ಹೊಂದಿರಬಹುದಾದ ಅನೇಕ ರಾಷ್ಟ್ರಗಳು ಆರ್ಥಿಕ ನೆರವು ನೀಡಲು ಸ್ವಇಚ್ಛೆಯಿಂದ ಮುಂದಾದ ಅನೇಕ ಸಂದರ್ಭಗಳಿದ್ದು ಅದನ್ನು ಯಾವ ಸಂಕೋಚವೂ ಇಲ್ಲದೆ ನಾವು ಪಡೆದುಕೊಂಡದ್ದು ಅದೆಷ್ಟು ಸಲವೋ! ಇಷ್ಟೊಂದು ಪುಟ್ಟ ರಾಷ್ಟ್ರಗಳ ಆರ್ಥಿಕ ಋಣದಲ್ಲಿ ನಾವಿದ್ದೇವೆ.

ಒಂದು ಸಮಾಜದಲ್ಲಿ, ರಾಷ್ಟ್ರದಲ್ಲಿ ಸ್ತ್ರೀ ಹೊಂದಿರುವ ಸ್ಥಾನ-ಮಾನ, ಅಂತಸ್ತು ಆ ಸಮಾಜದ, ರಾಷ್ಟ್ರದ ನಾಗರಿಕತೆಯ ಮಟ್ಟವನ್ನು ಸೂಚಿಸುತ್ತದೆ ಎಂಬ ಸ್ವಾಮಿ ವಿವೇಕಾನಂದರ ವಿಚಾರದ ಉಲ್ಲೇಖ ಇಲ್ಲಿ ಪ್ರಸ್ತುತ ಎಂದೆನಿಸುತ್ತದೆ. ಸ್ಥಾನಮಾನ ಎಂದಾಗ ಅದು ಅವಳು ಹೊಂದಿರುವ ಸ್ವಾತಂತ್ರ್ಯ, ಅವಳ ಮೇಲೆ ಹೊರಿಸಲ್ಪಟ್ಟ ನಿರ್ಬಂಧನೆಗಳು, ಅವಳು ನಿರ್ವಹಿಸುವ ಪಾತ್ರಗಳನ್ನು ಒಳಗೊಂಡಿದೆ.

ಸ್ವತಂತ್ರ ಭಾರತದ ಸಂವಿಧಾನ ತನ್ನ ಎಲ್ಲ ಪ್ರಜೆಗಳಿಗೂ ಸಮಾನ ಹಕ್ಕುಗಳನ್ನು ನೀಡಿ ಸಮಾನ ಅವಕಾಶ ನೀಡಿದೆ ನಿಜ. ಆದರೆ ಸಾಮಾಜಿಕವಾಗಿ ಅವಳು ಸ್ವತಂತ್ರಳಲ್ಲ. 'ಹೆಣ್ಣು' ಎಂಬ ಕಾರಣಕ್ಕಾಗಿಯೇ ಸಾಂಪ್ರದಾಯಿಕವಾಗಿ ಸ್ವೀಕರಿಸಲ್ಪಟ್ಟ ಸಾಮಾಜಿಕ ಹಾಗೂ ಆರ್ಥಿಕ ನಿರ್ಬಂಧಗಳಿಗೆ ಅವಳು ಒಳಗಾಗಿದ್ದಾಳೆ. ಸಾರ್ವಜನಿಕ ಜೀವನದಲ್ಲಿ ಮುಕ್ತವಾಗಿ ಪಾಲ್ಗೊಳ್ಳಲು ಅವಳಿಗೆ ಇನ್ನೂ ಸಾಧ್ಯವಾಗಿಲ್ಲ. ರಾತ್ರಿಯ ಸಮಯದಲ್ಲಿ ಮಾತ್ರವಲ್ಲ, ಹಗಲಿನ ಸಮಯದಲ್ಲಿಯೂ ಸಹ ಅವಳು ಮನೆಯ ಹೊರಗೆ, ರಸ್ತೆಗಳಲ್ಲಿ ಸಂಚರಿಸುವಂತಿಲ್ಲ. ಎಂತಹ ಅಪರಾತ್ರಿಯಲ್ಲಿಯೂ ಸಹ ಮಹಿಳೆ ನಿರ್ಭೀತಿಯಿಂದ, ಯಾವುದೇ ಅನಾಚಾರಕ್ಕೆ ಒಳಗಾಗದೇ, ರಸ್ತೆಗಳಲ್ಲಿ ಸಂಚರಿಸಿ ಸಮಾಜಕ್ಕೆ ಹಿತವಾಗುವ ತನ್ನ ಪಾತ್ರಗಳನ್ನು ನಿರ್ವಹಿಸಲು ಸಾಧ್ಯವಾಗುತ್ತದೆಯೋ ಅಂದೇ ಅವಳು ಸಾಮಾಜಿಕವಾಗಿ ಸ್ವತಂತ್ರಳು.

ಸಂಬಳ ಪಡೆಯುವ ಉದ್ಯೋಗದಲ್ಲಿ ನಿರತರಾದ ಮಹಿಳೆಯರ ನಿರಂತರವಾಗಿ ಹೆಚ್ಚುತ್ತಿರುವ ಸಂಖ್ಯೆಯನ್ನು ಆಧರಿಸಿ ಇಂದು ಮಹಿಳೆಗೆ ಆರ್ಥಿಕ ಸ್ವಾತಂತ್ರ್ಯವಿದೆ, ಅವಳು ಸ್ವಾವಲಂಬಿ ಎಂಬ ನಂಬುಗೆಯನ್ನು ಮೂಡಿಸುವ ಪ್ರಯತ್ನಗಳು ಸಾಕಷ್ಟು ನಡೆದಿವೆ. ಇದು ನಿಜವೇ ? ವಾಸ್ತವಿಕವಾಗಿ ಅವಳು ಕಳಿಸಿದ ಹಣದ ಮೇಲೆ ಅವಳ ಪತಿ ಇಲ್ಲವೆ ತಂದೆ ಇಲ್ಲವೆ ಅಣ್ಣ, ಇನ್ನೂ ಹಲವು ಬಾರಿ ತಮ್ಮ ಇಲ್ಲವೆ ಮಗನಿಗೆ ಅಧಿಕಾರ. ತನ್ನ ಇಚ್ಛೆಗೆ ಅನುಸಾರವಾಗಿ ತಾನು ಗಳಿಸಿದ ಹಣವನ್ನು ಖರ್ಚು ಮಾಡುವ ಸ್ವಾತಂತ್ರ್ಯ ಅವಳಿಗಿಲ್ಲ. ಈ ಸ್ವಾತಂತ್ರ್ಯ ದೊರೆಯುವುದೆಂದು ಅವಳಿಗೆ ?

ಅಷ್ಟೇ ಅಲ್ಲ! ಕುಟುಂಬದ ನಾಲ್ಕು ಗೋಡೆಗಳಿಂದಾಚೆ ಬಂದು ಸಂಬಳ ಪಡೆಯುವ ಉದ್ಯೋಗದಲ್ಲಿರುವ ಮಹಿಳೆಗೆ ವಾಸ್ತವಿಕವಾಗಿ ಬಿಡುಗಡೆಯೇ ಬೇಡಿಯಾಗಿದೆ. ಹೊಸ್ತಿಲಿನ ಒಳಗಿನ ದಾಸ್ಯದ ಶೃಂಖಲೆಯನ್ನು ಕಿತ್ತೊಗೆಯಬೇಕೆಂಬ ಅವಳ ಉತ್ಸಾಹಕ್ಕೆ ಕಡಿವಾಣ ಹಾಕಲು ಸಾಧ್ಯವಾಗದಿರುವಾಗ ಅವಳ ಸಾಂಪ್ರದಾಯಿಕ ಪಾತ್ರಗಳ ಜೊತೆ ಜೊತೆಗೇ, ಸಮಕಾಲೀನ, ಕುಟುಂಬದ ಹೊರಗಿನ ಹಲವು ಪಾತ್ರಗಳ ಹೊರೆಯನ್ನೂ ಹೇರಲಾಯಿತು ಅವಳ ಮೇಲೆ. ನಮ್ಮ ಬಹುಪಾಲಿನ ಉದ್ಯೋಗಸ್ಥ ಮಹಿಳೆಯರು, ಅದರಲ್ಲಿಯೂ ವಿಶೇಷವಾಗಿ ಮಧ್ಯಮ ವರ್ಗದ ಮಹಿಳೆಯರು ಸಾಂಪ್ರದಾಯಿಕ ಹಾಗೂ ಆಧುನಿಕ ಪಾತ್ರಗಳೆರಡರ ಒತ್ತಡಕ್ಕೆ ಕುಗ್ಗಿಹೋಗಿದ್ದಾರೆ. ಮಹಿಳೆಯರ ಸಾಂಪ್ರದಾಯಿಕ ಪಾತ್ರಗಳ ಹೊರೆಯನ್ನು ಅವರ ಜೀವನ ಸಂಗಾತಿಗಳು ಹಂಚಿಕೊಂಡಾಗ ಮಾತ್ರ ಮಹಿಳೆಯರ ಮೇಲಿನ ಒತ್ತಡ ಕಡಿಮೆಯಾಗಿ, ಅವರೂ ಸಹ ಅಭಿಮಾನದಿಂದ ತಲೆ ಎತ್ತಿ ಜೀವಿಸಲು ಸಾಧ್ಯ. ಆ ಸುದಿನ ಭವಿಷ್ಯದಲ್ಲಿ ಬರುವುದೆಂದು ಆಶಿಸೋಣವೇ ?

ಹೀಗೆ ಸ್ವತಂತ್ರ ಆಧುನಿಕ ಭಾರತದಲ್ಲಿ ಜಾತೀಯತೆ, ಸಂಪ್ರದಾಯ, ಮೌಢ್ಯ, ಅಜ್ಞಾನಗಳ ಬಂಧನಕ್ಕೆ ಬಹುಪಾಲಿನ ಜನ ಒಳಗಾಗಿದ್ದಾರೆ. ಅಷ್ಟೇ ಅಲ್ಲ ಅವರು ನಮ್ಮ ನಾಯಕರ, ಧುರೀಣರ, ರಾಜಕಾರಣಿಗಳ ಪೊಳ್ಳು ಭರವಸೆಗಳ ಸುಳಿಯಲ್ಲಿ ಸಿಲುಕಿಕೊಂಡಿದ್ದಾರೆ; ಭ್ರಮೆಗೆ ಒಳಗಾಗಿದ್ದಾರೆ; ನಿಷ್ಕ್ರಿಯರಾಗಿದ್ದಾರೆ. ಇವೆಲ್ಲವುಗಳ ಒತ್ತಡದಲ್ಲಿ ನಮ್ಮ ಸ್ವಾತಂತ್ರ್ಯ ಹರಿದು ಚಿಂದಿ-ಚಿಂದಿಯಾಗಿದೆ.

ಒಂದಾನೊಂದು ಕಾಲಕ್ಕೆ ಅರಿಷಡ್ವರ್ಗಗಳೆಂದು ಪರಿಗಣಿಸಲ್ಪಟ್ಟ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳಿಗೆ ಇಂದು ಬಹುಹೆಚ್ಚಿನ ಸಂಖ್ಯೆಯಲ್ಲಿ ಜನರು ದಾಸರಾಗಿದ್ದಾರೆ. ಆದ್ದರಿಂದಲೇ ಇತ್ತೀಚಿನ ದಿನಗಳಲ್ಲಿ ಅಪರಾಧ, ಭ್ರಷ್ಟಾಚಾರಗಳು ತ್ವರಿತಗತಿಯಿಂದ ಹೆಚ್ಚಾಗುತ್ತಿದ್ದು ಅಷ್ಟೇ ವೇಗವಾಗಿ ನೈತಿಕ ಅಧಃಪತನವೂ ಸಂಭವಿಸುತ್ತಿದೆ. ಆದರೆ ಬಹುಪಾಲಿನವರಿಗೆ ಇದರ ಅರಿವೇ ಇಲ್ಲವಲ್ಲ! ಪ್ರಾಯಶಃ ಇವರೆಲ್ಲರೂ ಸ್ವತಂತ್ರವಾದ ಯೋಚನಾಶಕ್ತಿ, ಮನೋಧರ್ಮ, ವ್ಯಕ್ತಿತ್ವಗಳನ್ನು ಹೊಂದಿದರೆ ಮಾತ್ರ ಈ ಎಲ್ಲ ಸುಳಿಗಳಿಂದ ಇವರು ಮುಕ್ತರಾಗಲು, ಹೊರಬರಲು ಸಾಧ್ಯ !!

ಶ್ರೀಮತಿ ಗೌರಾ ಸಿನ್ನೂರ
ಮೂರನೇ ಮಹಡಿ, ಕೋಸಗಿ ನಿವಾಸ
ಸಂಗಮೇಶ್ವರ ನಗರ, ಗುಲಬರ್ಗಾ - ೫೮೫ ೧೦೫

## ಮುಂಗಾರಿ ಮಳೆ ಸೊಗಸು

ಸರಬರ ಸರಬರ ಬರಬರ ಬೀಸಿತು
ಗಾಳಿಯು ಆಗುತ ಹೆಮ್ಮಾರಿ
ಕಪ್ಪನೆ ಮೋಡವು ಗಪ್ಪನೆ ಕವಿಯಿತು
ಕ್ಷಣದಲಿ ಸುತ್ತಲು ನೆಲೆಯೂರಿ

ಗಗನಂಗಳದಲಿ ಮಿಂಚಿನ ಎಳೆಗಳು
ಹೊಳೆದವು ಎಲ್ಲೆಡೆ ಚಕಚಕನೆ
ಹಿಂದೆಯೆ ಕೇಳಿತು ಗುಡುಗುಡು ಗುಡುಗುಡು
ಮೋಡವು ಮಾಡಿದ ಗರ್ಜನೆ

ಗಾಳಿಯ ರಭಸ ಗುಡುಗಿನ ಆರ್ಭಟ
ದನಕರು ಓಡಿದವು ಹೌಹಾರಿ
ಮರುಕ್ಷಣ ಸುರುವೇ ಆಯ್ತು ಟಪಟಪ
ಟಪಟಪ ಮಳೆಯದು ಮುಂಗಾರಿ

ಟಪಟಪ ನಡುವೆಯೆ ಟಫ್ ಟಫ್ ಎನ್ನುತ
ಬಿದ್ದವು ವೇಗದಿ ಆಣೆಕಲ್ಲು
ಹುಯ್ಯೋ ಹುಯ್ಯೋ ಕೂಗುತ ಎಳೆಯರು
ತಿಂದೆವು ಪಟಪಟ ನಿರ್ಗಲ್ಲು



ಟಪಟಪ ಹೋಯ್ತು ರಪರಪ ಆಯ್ತು
ನೆನೆದೆವು ನೀರಲಿ ಬಲುಮುದದಿ
ಹಾಳೆಯ ಹಡಗನು ನೀರಲಿ ಸಾಗಿಸಿ
ಕುಣಿದೆವು ಗೆಳೆಯರು ಎಡಬಿಡದಿ

ಕುರು ಕುರು ಸೆಂಡಿಗೆ ಹಪ್ಪಳ ಕರಿದಳು
ಆಗಲೆ ಅಮ್ಮನು ಲಟಲಟನೆ
ಅಮ್ಮನ ಕರೆಗೆ ಆಟವ ನಿಲ್ಲಿಸಿ
ಮನೆಯೆಡೆ ನಡೆದವು ಲಗುಬಗನೆ

ಕುರುಕುರು ಮೆಲ್ಲುತ ಮಳೆಯನು ನೋಡುತ
ಸಂತಸ ಪಟ್ಟೆವು ಅಂಗಳದಲ್ಲಿ
ಬಿಸಿಬಿಸಿ ಹಾಲನು ಸೊರ್‌ಸೊರ್ ಹೀರುತ
ಖುಷಿಯ ಹಂಚಿದೆವು ಅಮ್ಮನಲಿ.

ಸಂಗಮೇಶ ಗುಜಗೊಂಡ
ಅಧ್ಯಾಪಕ, ಕಲಾ ವಾಣಿಜ್ಯ ಮಹಾವಿದ್ಯಾಲಯ
ಮೂಡಲಗಿ - ೫೯೧ ೩೧೨, ಜಿಲ್ಲೆ : ಬೆಳಗಾವಿ

## ಮಾನ



ವ್ಯಕ್ತಿಗೆ ಮಾನ ಮರ್ಯಾದೆ ಎಷ್ಟು ಅಗತ್ಯ ಎನ್ನುವುದು ಯಾರೂ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಸಿಗದು ಎಂಬ ಮಾತಿದೆಯಲ್ಲಾ. ಹಾಗಾದರೆ 'ಮಾನ' ಎಂದರೇನು...? ಮಾನ ಅಂದರೆ ಅಳೆಯುವ ಸಾಧನ ಎಂಬ ಅರ್ಥವು ಶಬ್ದದಲ್ಲಿಯೇ ವ್ಯಕ್ತವಾಗುತ್ತದೆಯಲ್ಲವೇ...? ಹಾಗಾದರೆ ಏನನ್ನು ಅಳೆಯುವುದು...? ವ್ಯಕ್ತಿಯ ಮರ್ಯಾದೆಯ ಮಟ್ಟವೇ...? ಹೌದು, ಅವನ ಚಾರಿತ್ರ್ಯವೇ ಇಲ್ಲಿ ಮುಖ್ಯ ಅಂಶ. ಸತ್ಯ ಪ್ರಾಮಾಣಿಕತೆಗಳೇ 'ಮಾನ'ದ ಮಾನದಂಡಗಳು ಎನ್ನುವುದು ನಿರ್ವಿವಾದ.

ಸುಳ್ಳು ಹೇಳಿ ಹೊಟ್ಟೆ ಹೊರೆದುಕೊಳ್ಳುವವನಿಗೆ ಮಾನ ಮರ್ಯಾದೆ ಇಲ್ಲದವನು ಎಂದು ಹೀಯಾಳಿಸುತ್ತೇವೆ. ಕಳ್ಳತನ ಮಾಡುವವನು ಕೆಟ್ಟವನೇ ಎಂಬ ಸಂಗತಿ ಹೊಸದೇನಲ್ಲ. ಮಾನ ವ್ಯಕ್ತಿಯ ದೌರ್ಬಲ್ಯಗಳನ್ನು ಹೊರಹಾಕುವ ಸಾಧನವಾಗಿ ಅವನ ತೂಕ ಅಳೆಯುವಲ್ಲಿ ಇದು ಜನಪ್ರಿಯವಾಗಿದೆ. ಮನುಷ್ಯನಿಗೆ ತಕ್ಕುದಾದ ನಡತೆಗಳೇ ಅವನ ಮರ್ಯಾದೆಯನ್ನು ಹೆಚ್ಚಿಸಿ ಮಾನದ ರಕ್ಷಣೆಗೈಯುತ್ತವೆ. ವ್ಯಕ್ತಿ ಬೆತ್ತಲೆಯಾದರೆ ಮಾನ ಹೋದಂತಲ್ಲವೇ...! ಆತ್ಮದ ಸ್ವರೂಪದಲ್ಲಿ ಒಳ್ಳೆಯ ಗುಣಗಳ ಅಭಿವ್ಯಕ್ತಿಯೂ ವ್ಯಕ್ತಿಯ 'ಮಾನ'ವನ್ನು ಹೆಚ್ಚಿಸುತ್ತದೆ. ಒಳ್ಳೆಯವರು ಮಾನಕ್ಕೆ ಅಂಜಿದರೆ ಮಾನಗೇಡಿ ತನಗೆ ಅಂಜಿದರು ಎಂದುಕೊಳ್ಳುತ್ತಾನೆ. ಕೆಸರಲ್ಲಿ ಕಲ್ಲು ಹಾಕಿ ಮೈಮೇಲೆ ಸಿಡಿಸಿಕೊಳ್ಳುವುದೇ...? ದುಷ್ಟರನ್ನು ಕಂಡರೆ ಮಾರು ದೂರ ಎಂಬ ಲೋಕೋಕ್ತಿಯ ವಿಚಾರ ವಿವೇಕಶಾಲಿಗಳಿಗೆ ಒಪ್ಪುವಂಥದ್ದೇ... ಹಾಗಾದರೆ ಮಾನ ನಷ್ಟಕ್ಕೇನರ್ಥ...?

ಮಾನ ನಷ್ಟದಲ್ಲಿ ವ್ಯಕ್ತಿ ವಾಸ್ತವದಲ್ಲಿ ಕಳೆದುಕೊಳ್ಳುವುದೇನು...? ಒಬ್ಬರ ಅಪಮಾನವು ಮಾನನಷ್ಟವಾಗಿ ಪರಿಗಣಿಸಲ್ಪಡುತ್ತದೆ. ಭೌತಿಕವಾಗಿ ವ್ಯಕ್ತಿ ಏನನ್ನೂ ಕಳೆದುಕೊಳ್ಳುವುದಿಲ್ಲ. ಆದರೆ ಇನ್ನೊಬ್ಬರ ದೃಷ್ಟಿಯಲ್ಲಿ ಕೀಳುಮಟ್ಟದವನಾಗಿಬಿಡುತ್ತಾನೆ. ಕೀಳುಮಟ್ಟತನ ಇನ್ನೊಬ್ಬರ ದೃಷ್ಟಿಯಲ್ಲಿರುತ್ತದೆಯೇ ಹೊರತು ಮಾನನಷ್ಟಕ್ಕೊಳಗಾದವನಿಗೆ ವಾಸ್ತವವಾಗಿ ನಷ್ಟವೇನೂ ಆಗಿರಲಾರದು. ಇನ್ನೊಬ್ಬ ಅಪರಿಚಿತ ವ್ಯಕ್ತಿಯ ಸಮ್ಮುಖದಲ್ಲಿ ಬಂದರೆ ಹೊಸಬನಂತಾಗಿ ಕಳಂಕರಹಿತನಾಗಿಯೇ ತೋರುತ್ತಾನಲ್ಲ..!? ಜೈಲಿಗೆ ಹೋಗಿ ಬಂದ ವಿಷಯ ಇನ್ನೊಬ್ಬ ವ್ಯಕ್ತಿಗೆ ತಿಳಿಯದಿದ್ದರೆ ಮಾನನಷ್ಟದ ಅರಿವೇ ಇರುವುದಿಲ್ಲ. ಅಂದರೆ 'ಮಾನ' ಭೌತಿಕಕ್ಕಿಂತ ಮಾನಸಿಕ ಸ್ಥಿತಿಗೆ ಸಂಬಂಧಿಸಿದೆ ಎನ್ನುವುದು ಇದರಿಂದ ವಿದಿತವಾದಂತಾಯಿತು. ಶಿಲುಬೆಗೆ ಏರಿಸಿದ ಘಟನೆ ಮಾನ ನಷ್ಟ ಎನ್ನಲಾದೀತೆ...? ಗಡಿಪಾರು ಮಾಡಿದ ಬಸವಣ್ಣನ ನೈತಿಕತೆಯನ್ನು ಮಾನನಷ್ಟವಾಗಿ ಕಾಣುವುದೇ...? ವ್ಯಕ್ತಿಯ ಮನಸ್ಸು ದುರ್ಬಲವಾದರೆ ಮಾತ್ರ ಮಾನನಷ್ಟ. ಮನಸ್ಸಿನ ಮಾನ ಅಳೆಯುವುದೇ ಅದರ ಅಗೋಚರ ಶಕ್ತಿಯಿಂದ. ವ್ಯಕ್ತಿಯ ವಿಚಾರಗಳ ಒಟ್ಟು ಅರ್ಥದಲ್ಲಿ ಮಾನ ಮರ್ಯಾದೆ ರೂಪುಗೊಂಡು ಸಮಾಜದಲ್ಲಿ ವ್ಯಕ್ತಿತ್ವವನ್ನು ನಿರ್ಮಿಸಿಬಿಡುತ್ತವೆ. ಜನರ ನಂಬಿಕೆಗೆ ದ್ರೋಹ ಬಗೆಯದ ರೀತಿಯಲ್ಲಿ ಏಕಭಾವ ರೂಪವನ್ನು ಕಾಪಾಡಿಕೊಂಡು ಬರುವ ಪ್ರಯತ್ನವೇ ಮರ್ಯಾದೆಯ ದ್ಯೋತಕ.

ಮರ್ಯಾದಾ ಪುರುಷ ಎಂದು ಕರೆಸಿಕೊಳ್ಳುವ ರಾಮನು ತನ್ನ ಹೆಂಡತಿಯನ್ನು ಕಾಡಿಗೆ ಅಟ್ಟಿದರೂ ಆಗಿನ ಜನ ಸ್ವೀಕರಿಸಿದರು. ಜನರ ಆಲೋಚನೆ, ಹುಸಿ ಭಾವದ ಕಲ್ಪನೆಯ ವ್ಯಕ್ತಿತ್ವವನ್ನು ಸ್ಥಿರಪಡಿಸಲು, ಹಾಗೆ ನಂಬಿಸಲು ಮಡದಿಯನ್ನೇ ಬಲಿ ನೀಡಿ ಸಮಾಜದಲ್ಲಿ ಮಾನ ಮರ್ಯಾದೆ ಸ್ಥಾಪಿಸಿಕೊಂಡ ಬಗೆಯನ್ನು ವಿಶ್ಲೇಷಿಸಿಕೊಂಡಾಗ ಇದು ವಾಸ್ತವ ವ್ಯಕ್ತಿತ್ವಕ್ಕಿಂತ (ವೈಯಕ್ತಿಕ) ಸಮೂಹ ಭಾವ ನಂಬಿಕೆಯೇ ಪ್ರಮುಖ ಅಂಶವಾಗಿ ತೋರುತ್ತದೆ.

'ಕ್ಷಿತಿಜ ಬೀದರ್'
ಬಸವರಾಜ್ ಮಠಪತಿ
ರೇಷ್ಮೆ ವಸತಿ ಗೃಹ, ಹೆಬ್ಬೂರು-೫೭೨ ೧೨೦, ತುಮಕೂರು ಜಿಲ್ಲೆ

## ಪ್ರತಿಮೆಗಳು ಬೇಕೆ ?

ಕೆಳಗೆ ಬೇಸಿಗೆಯ ಒಂದು ಬೆಳಿಗ್ಗೆ ನಮ್ಮ ರಸ್ತೆಯಲ್ಲಿ ಮೂರ್‍ನಾಲ್ಕು ಹುಡುಗರು ಕೈಯಲ್ಲಿ ಕೋಲು ಹಿಡಿದು, ದಾರಿಯಲ್ಲಿ ಸಿಕ್ಕ ವಸ್ತುಗಳಿಗೆಲ್ಲ ಹೊಡೆಯುತ್ತಾ ಹೋಗುತ್ತಿದ್ದರು. ಫುಟ್‌ಪಾತಲ್ಲಿ ಯಾರೋ ತಮ್ಮ ಮನೆಯ ಮುಂದೆ ಬೆಳೆಸಿದ್ದ ಗಿಡಗಳನ್ನು ನೋಡಿದ್ದೇ ಸರಿ, ಅದಕ್ಕೆ ಚೆನ್ನಾಗಿ ಹೊಡೆಯುತ್ತಾ, ಎಲೆ ಕೊಂಬೆಗಳನ್ನು ಬೀಳಿಸಿ, ಒಂದು ರೀತಿಯ ಆನಂದವನ್ನು ಪಡೆಯುತ್ತಿದ್ದರು. ಅವರು ಶಾಲೆಗೆ ಹೋಗುವ ಹುಡುಗರಂತೆ ನನಗಂತೂ ಕಂಡುಬರಲಿಲ್ಲ. ಅದನ್ನು ನೋಡಿ ನಾನು ಗದರಿದ್ದೇ ತಡ, ಒಬ್ಬ ಮತ್ತೊಬ್ಬನ ಮೇಲೆ ಗೂಬೆ ಕೂರಿಸುತ್ತ 'ಇವನು ಮಾಡಿದ್ದು, ನಾನಲ್ಲ' ಅನ್ನುತ್ತಾ ಅಲ್ಲಿಂದ ಕಂಬಿಕಿತ್ತರು.

ಸಾರ್ವಜನಿಕ ಸ್ಥಳದಲ್ಲಿರುವ ಪ್ರತಿಮೆಗಳನ್ನು ವಿಕೃತಗೊಳಿಸಿ ಅದರಿಂದುಟಾಗುತ್ತಿರುವ ಹಿಂಸಾಚಾರ, ಕಾನೂನು ಸುವ್ಯವಸ್ಥೆಯ ಸಮಸ್ಯೆಗಳನ್ನು ಓದಿದಾಗೆಲ್ಲಾ ಮೇಲೆ ವಿವರಿಸಿದ ಘಟನೆಯನ್ನು ತಳುಕು ಹಾಕಬೇಕೆನಿಸುತ್ತದೆ. ಒಂದಲ್ಲಾ ಒಂದು ಕಡೆ ರಾಷ್ಟ್ರ ನಾಯಕರ ಪ್ರತಿಮೆಗಳನ್ನು ಧ್ವಂಸ ಅಥವಾ ವಿಕೃತಗೊಳಿಸುವುದರಿಂದುಂಟಾಗುವ ಪರಿಣಾಮಗಳನ್ನು ಪತ್ರಿಕೆಗಳಲ್ಲಿ ಓದುತ್ತಲೇ ಇರುತ್ತೇವೆ. ಅದು ಇಂದು ಆಘಾತಕರ ಸುದ್ದಿಯಾಗೇನೂ ಉಳಿದಿಲ್ಲ. ಯಾವುದಾವುದೋ ಕಾರಣಗಳಿಗಾಗಿ ಹಮ್ಮಿಕೊಳ್ಳುವ ಬಂದ್ ಅಥವಾ ರಸ್ತೆ ತಡೆಯಂತಹ ಸಾಮಾನ್ಯ ಘಟನೆಯಂತೆ ಇವುಗಳನ್ನೇ ಜನತೆ ನೋಡುವ ಹಾಗಾಗಿದೆ.

ನಾವು ರಾಷ್ಟ್ರನಾಯಕರನ್ನು ಸ್ಮರಿಸಲಿ, ಬಿಡಲಿ, ದೇಶದಾದ್ಯಂತ ಅವರ ಪ್ರತಿಮೆಗಳನ್ನು ಮಾತ್ರ ಸ್ಥಾಪನೆ ಮಾಡಿ ಕೈತೊಳೆದುಕೊಂಡಿದ್ದೇವೆ. ಪ್ರತಿಮೆಗಳು ಬೇಕೇಬೇಕು. ಕಾರಣ ಅವುಗಳ ಸ್ಥಾಪನೆಯ ಸಂದರ್ಭದಲ್ಲಿ ನಾಲ್ಕಾರು ನಾಯಕರು ಹುಟ್ಟಿಕೊಳ್ಳುತ್ತಾರೆ. ಅದೇ, ಅವುಗಳು ವಿಕೃತಗೊಂಡು ಹಿಂಸೆ ತಲೆದೋರಿದರೆ, ಪರಿಸ್ಥಿತಿಯ ಲಾಭ ಪಡೆಯಲು ಹತ್ತರಷ್ಟು ಜನ ನಾಯಕರಾಗಲು ಹಾತೊರೆಯುತ್ತಾರೆ, ಆಗುತ್ತಾರೆ ಕೂಡ.

ಈ ಮೇಲೆ ನೀಡಿದ ನಿದರ್ಶನ ಹೋಲುವಂತೆ, ಯಾರೋ ಕಿಡಿಗೇಡಿಗಳು ಒಂದು ಪ್ರತಿಮೆಯನ್ನು ವಿಕೃತಗೊಳಿಸುತ್ತಾರೆ, ಮಾಡುವುದಕ್ಕೆ ಏನೂ ಕೆಲಸವಿಲ್ಲದಿದ್ದಾಗ. ಈಗಂತೂ ಎಲ್ಲ ಕಡೆ ಸ್ಥಾಪಿತವಾಗಿರುವ ಡಾ|| ಅಂಬೇಡ್ಕರ್ ಪ್ರತಿಮೆಗೆ ಅವರ ಜನ್ಮದಿನದಂದು ಹಾರ ಹಾಕಲು ಅನುವಾಗುವಂತೆ ಏಣಿ ಸಿದ್ಧವಾಗಿರುತ್ತದೆ. ಅನೇಕ ಕಡೆ, ಅದನ್ನು ಹತ್ತಿ ಅನೇಕ ಹುಡುಗರು ಕುಳಿತಿರುವುದನ್ನು ನಾನು ನೋಡಿದ್ದೇನೆ. ಅವರಲ್ಲಿ ಯಾರು ಬೇಕಾದರೂ ವಿನಾಕಾರಣ ಪ್ರತಿಮೆಯನ್ನು ವಿಕೃತಗೊಳಿಸುವ ಸಾಧ್ಯತೆ ಇರುತ್ತದೆ. ಹಾಗೇನಾದರೂ ಸಂಭವಿಸಿದಲ್ಲಿ ಅಂತಹ ಘಟನೆ ವಿಕೋಪಕ್ಕೆ ತಿರುಗಿ ಹಿಂಸಾಚಾರ, ಕಾನೂನು ಸಮಸ್ಯೆಯನ್ನುಂಟುಮಾಡುತ್ತದೆ.

ಹಾಗೆ ನೋಡಿದರೆ, ಮಹಾತ್ಮ ಗಾಂಧಿಯವರ ಪ್ರತಿಮೆಗೆ ಧಕ್ಕೆಯಾದರೆ ಅದು ಸುದ್ದಿಯೇ ಆಗುವುದಿಲ್ಲ. ಅವರ ಪ್ರತಿಮೆಗಳು ಹಲವು ಕಡೆ ದುಃಸ್ಥಿತಿಯಲ್ಲಿರುವುದರ ಬಗ್ಗೆ ಪತ್ರಿಕಾ ವರದಿಗಳನ್ನು ನಾವು ಆಗಾಗ್ಗೆ ಓದುತ್ತಿರುತ್ತೇವೆ. ಅದರ ಬಗ್ಗೆ ಯಾರೂ ತಲೆ ಕೆಡಿಸಿಕೊಳ್ಳುವುದಿಲ್ಲ. ಯಾಕೆಂದರೆ ಗಾಂಧೀಜಿ ಯಾವ ಜಾತಿಗೂ/ಕೋಮಿಗೂ ಸೇರದ ವ್ಯಕ್ತಿ. ಅದೇ ಅಂಬೇಡ್ಕರ್ ಅವರನ್ನು ದಲಿತರು ತಮ್ಮ ನಾಯಕನನ್ನಾಗಿ ಪರಿಗಣಿಸುವುದರಿಂದ ಅವರ ಪ್ರತಿಮೆಗೆ ಧಕ್ಕೆ ಮಾಡುವವರು ಸವರ್ಣೀಯರೇ ಎಂಬ ಭಾವನೆ ಸಮಾಜದಲ್ಲಿ ಬೇರೂರಿದೆ ಅಥವಾ ಉಂಟಾಗುವಂತೆ ಮಾಡಲಾಗಿದೆ. ಕೆಲವು ಸಂದರ್ಭಗಳಲ್ಲಿ ಅದು ನಿಜವೂ ಹೌದು. ಆದರೆ ಅದಕ್ಕೆ ಯಾವುದೇ ಸಾಕ್ಷಿ, ಪುರಾವೆಗಳಿರುವುದಿಲ್ಲ.

ಇತ್ತೀಚೆಗೆ ಬಂಗಾರಪೇಟೆಯಲ್ಲಿ ಅಂಬೇಡ್ಕರ್ ಅವರ ಕಾಂಕ್ರೀಟ್ ಪ್ರತಿಮೆಗೆ ಧಕ್ಕೆಯಾದಾಗ ಅದನ್ನು ವಿಕೃತಗೊಳಿಸಲಾಗದಂತೆ, ಕಂಚಿನ ಪ್ರತಿಮೆಯನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಇನ್ನು ಮುಂದೆ ಪ್ರತಿಮೆಗಳ ರಕ್ಷಣೆಗೆ, ಅನೇಕ ಅತಿ ಗಣ್ಯ ವ್ಯಕ್ತಿಗಳಿಗೆ ಇರುವಂಥಾ ವಿಶೇಷ ರಕ್ಷಣಾ ದಳವನ್ನು ಇಪ್ಪತ್ತನಾಲ್ಕು ಗಂಟೆ ಒದಗಿಸುವಂತಹ ಸ್ಥಿತಿ ಬರಬಹುದು.

ವಿಕೋಪ ಪರಿಸ್ಥಿತಿ ಉಂಟಾದಾಗ ಮಾತ್ರ ಪ್ರತಿಮೆಗಳಾದರೂ ಏಕೆ ಎಂದು ಕೆಲವರಾದರೂ ವಿಚಾರ ಮಾಡುತ್ತಾರೆ, ನಂತರ ಯಾರೂ ತಲೆಕೆಡಿಸಿಕೊಳ್ಳುವುದಿಲ್ಲ. ಪ್ರತಿಮೆಗಳೂ ಒಂದು ರೀತಿಯ ಲಕ್ಷುರಿಯಾಗುತ್ತಿವೆಯೆ? ಪ್ರತಿಮೆಗಳು ಬೇಕೆ ? ನಾನು ಮೊದಲೇ ಹೇಳಿದ ಹಾಗೆ, ಪ್ರತಿಮೆಗಳ ಅವಶ್ಯಕತೆ ಕೆಲವರಿಗಾದರೂ ಇದೆ. ಕಾರಣ, ಅವುಗಳ ಸ್ಥಾಪನೆಯ ಸಂದರ್ಭದಲ್ಲಿ ನಾಲ್ಕಾರು ನಾಯಕರು ಹುಟ್ಟಿಕೊಳ್ಳುತ್ತಾರೆ.

ಎಂ. ಎಸ್. ರಘುನಾಥ್
ಎಚ್‌ಐಜಿ-೪೦, ೬ನೇ ಮುಖ್ಯರಸ್ತೆ, ಕೆಎಚ್‌ಬಿ ಕಾಲೊನಿ, ೨ನೇ ಹಂತ
ಬಸವೇಶ್ವರನಗರ, ಬೆಂಗಳೂರು-೭೯

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna